# ಚಾಲುಕ್ಯರ ಅಭ್ಯುದಯ

(ಐತಿಹಾಸಿಕ ಕಥೆ.)



ಲೇಖಕ:

ನಾಗೇಶ.



ಪ್ರಕಾಶಕ:

ಯ. ಗು. ಕುಲಕರ್ಣಿ,

ಸಂಪಾದಕ, ಸ. ಚ.

ಆನಂದವನ

+ + ∽ + +

1935

ಬೆಲೆ ೧೨ ಆಣೆ

# ಚಾಲುಕ್ಯರ ಅಭ್ಯುದಯ.

## ಎರಡು ಶತಕಗಳ ಅಜ್ಞಾತವಾಸ.

ಚಾಲುಕ್ಯ ಸಮ್ರಾಟನಾದ ಎರಡನೆಯ ಪುಲಿಕೇಶಿಯು ಉತ್ತರಾಪಥದ ಸಾರ್ವಭೌಮನಾದ ಹರ್ಷವರ್ಧನನನ್ನು ನರ್ಮದೆಯ ಕಾಳಗದಲ್ಲಿ ಪರಾಭವಗೊಳಿಸಿ, ಕರ್ನಾಟಕದ ವಿಜಯದುಂದುಭಿ ನಿನಾದವು ಆಸೇತು ಹಿಮಾಚಲದ ವರೆಗೆ ಗಡ ಚಿಕ್ಕುವಂತೆ ಮಾಡಿದನು. ಈ ಭಾಗ್ಯಶಾಲಿಯಾದ ಕನ್ನಡ ಸಾರ್ವಭೌಮನಿಂದ ಕರ್ನಾಟಕದ ಶೌರ್ಯವಿಭವಗಳ ಕೀರ್ತಿಪ್ರಕಾಶವು ವಿದೇಶಗಳಲ್ಲಿ ಸಹ ಬೆಳಗತೊಡ ಗಿತು. ಈ ಮಹಾನುಭಾವನ ಮರಣಾನಂತರದಲ್ಲಿ ಇವನ ಮೂರನೆಯ ಮಗ ನಾದ ಯುವರಾಜ ಮೊದಲನೆಯ ವಿಕ್ರಮಾದಿತ್ಯನು ವಾತಾಪಿಪುರದ ಸಿಂಹಾಸನ ವನ್ನೇರಿದನು. ಶೂರ ಪುರುಷನಾದ ಈ ವಿಕ್ರಮಾದಿತ್ಯನು ತಮಿಳನಾಡಿಗೆ ದಂಡೆತ್ತಿ ಹೋಗಿ, ಕಂಚೀ ರಾಜಧಾನಿಯನ್ನು ಪೂರ್ಣವಾಗಿ ಸ್ವವಶಮಾಡಿಕೊಂಡು ಪಲ್ಲವ ರನ್ನು ಮುರಿಬಡಿದನು. ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ವಿನಯಾ ದಿತ್ಯನು ಕರ್ನಾಟಕ ಸಾಮ್ರಾಜ್ಯದ ಸಾರ್ವಭೌಮನಾದನು. ಇವನ ಆಳಿಕೆಯಲ್ಲಿ ಸಾಮ್ರಾಜ್ಯದ ಸ್ಥಿತಿಯು ಒಳಿತಾಗಿತ್ತು. ಇವನು ತಲೆಯೆತ್ತ ತೊಡಗಿದ್ದ ಪಲ್ಲವ ರನ್ನು, ಮಲಬಡೆಯ, ಅಳುಪ, ಗಂಗಕೇ ಮೊದಲಾದವರನ್ನು ಸಾಮಂತರನ್ನಾಗಿ ಮಾಡಿ, ಸಾಮ್ರಾಜ್ಯಕ್ಕೆ ಶತ್ರುಬಾಧೆಯಿಲ್ಲದಂತೆ ವ್ಯವಸ್ಥೆಗೊಳಿಸಿದನು. ವಿನಯಾ ದಿತ್ಯನು ಮಡಿದ ಮೇಲೆ ಅವನ ಮಗನಾದ ವಿಜಯಾದಿತ್ಯನು ಕರ್ನಾಟಕ ಸಾಮ್ರಾಜ್ಯಸಿಂಹಾಸನವನ್ನಲಂಕರಿಸಿದನು. ಇವನು ಮೂವತ್ತೇಳು ವರ್ಷಗಳ ವರೆಗೆ ನಿರುಪಾಧಿಕವಾಗಿ ರಾಜ್ಯವಾಳಿದನು. ಇವನ ಆಳಿಕೆಯಲ್ಲಿಯೂ ಪಲ್ಲವರ ಕಾಟವು ತಪ್ಪಲಿಲ್ಲ. ಇವನ ತರುವಾಯ ಪಟ್ಟವನ್ನೇರಿದ ಇವನ ಮಗನಾದ ಎರಡನೇಯ ವಿಕ್ರಮಾದಿತ್ಯನು ಬಹುವೈಭವದಿಂದ ರಾಜ್ಯವಾಳಿದನು. ಇವನು ಉನ್ಮತ್ತರಾದ ಪಲ್ಲವರ ಮೇಲೆ ದಂಡೆತ್ತಿ ಹೋಗಿ, ಪಲ್ಲವರಾಜನಾದ ನಂದಿಪೋತವರ್ಮನನ್ನು ಯುದ್ಧದಲ್ಲಿ ಕೊಂದು, ಕಂಚಿಯನ್ನು ಹಿಡಿದನು. ಈ ಮಹಾಪರಾಕ್ರಮಿಯು ಚೋಳಪಾಂಡ್ಯರನ್ನು ಸೋಲಿಸಿ, ದಕ್ಷಿಣ ಸಮುದ್ರ ತೀರದಲ್ಲಿ ಜಯಸ್ತಂಭವನ್ನು ನೆಲೆಗೊಳಿಸಿದನು. ಎರಡನೆಯ ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ಇಮ್ಮಡಿಕೀರ್ತಿವರ್ಮನು ಕರ್ನಾಟಕಸಿಂಹಾಸನವನ್ನೇರಿದನು.

ಇಮ್ಮಡಿ ಕೀರ್ತಿವರ್ಮನು ಹಿಂದಿನ ಸಮ್ರಾಟರಷ್ಟು ಅದೃಷ್ಟವಂತನಿರಲಿಲ್ಲ. ಇವನು ಹೇಡಿಯಿರುವನೆಂಬದು ಗೊತ್ತಾದ ಕೂಡಲೆ, ಎಷ್ಟೋ ಮಂಡಲೇಶ್ವರರೂ ಮಹಾ ಸಾಮಂತರೂ ಸ್ವತಂತ್ರರಾಗಲಿಕ್ಕೆ ಯತ್ನಿಸಲಾರಂಭಿಸಿದರು. ಇವನ ಅವ್ಯವಸ್ಥೆಯ ಆಳಿಕೆಯಿಂದ ಸಾಮ್ರಾಜ್ಯದ ಕಟ್ಟುಗಳು ಶಿಥಿಲವಾಗತೊಡಗಿದವು. ಉತ್ತರದಲ್ಲಿ ರಾಷ್ಟ್ರಕೂಟರೂ, ದಕ್ಷಿಣದಲ್ಲಿ ಪಲ್ಲವರೂ ಚಾಲುಕ್ಯರ ಅಸ್ಥಿವೈರಿಗಳಾಗಿದ್ದರು. ಚಾಲುಕ್ಯರು ಪ್ರಬಲರಿದ್ದಾಗ ಇವರು ಮಾಂಡಲಿಕರೆಂದೆನಿಸಿಕೊಂಡು ತಟಸ್ಥವೃತ್ತಿಯಿಂದಿರುತ್ತಿದ್ದರು. ಯಾವನೊಬ್ಬ ರಾಜನು ಹೇಡಿಯಿರುವನೆಂಬದು ಗೊತ್ತಾದ ಕೂಡಲೆ ರಾಷ್ಟ್ರಕೂಟರೂ ಪಲ್ಲವರೂ ಸ್ವತಂತ್ರರಾಗಲಿಕ್ಕೆ ಹವಣಿಸುತ್ತಿದ್ದರು. ಇಡೀ ಕರ್ಣಾಟಕ ಸಾಮ್ರಾಜ್ಯಕ್ಕೆ ತಾವೇ ಒಡೆಯರಾಗಬೇಕೆಂದು ರಾಷ್ಟ್ರಕೂಟರು ಹೊಂಚು ಹಾಕಿಕೊಂಡು ಕುಳಿತಿದ್ದರು. ಚಾಲುಕ್ಯಸಾಮ್ರಾಜ್ಯದ ವಿರುದ್ಧವಾಗಿ ಕಾದಲಿಕ್ಕೆ ಐದು ಜನ ನಾಡುಗವುಡ (ರಾಷ್ಟ್ರಕೂಟರು) ಸಿದ್ಧರಾಗಿದ್ದರು. ಅವರಲ್ಲಿ ಚಾಲುಕ್ಯ ಸಾರ್ವಭೌಮರ ಅಳಿಯನಾದ ದಂತಿದುರ್ಗನೇ ಪ್ರಮುಖನು. ಇವನು ಜಮಖಂಡಿ, ಮಿರಜ, ಅಥಣಿ ಪ್ರಾಂತಗಳ ನಾಡಗವುಡನಾಗಿದ್ದನು; ಎರಡನೆಯವನಾದ ಸಣಘುಲನು ನಂದಗಡ, ಸಾವಂತವಾಡಿ ಪ್ರಾಂತದ ನಾಡಗವುಡನಾಗಿದ್ದನು. ಮೂರನೆಯವನಾದ ರಾಹಪ್ಪನು ಪುಲಿಗೆರೆ, ಕೊಪ್ಪಳ, ಗದಗ ಪ್ರಾಂತದ ನಾಡಗವುಡನಾಗಿದ್ದನು. ನಾಲ್ಕನೆಯವನಾದ ಕರ್ಕರಾಜನು ಮಂಗಳವಾಡಿ, ಪಂಢರಪುರಗಳ ನಾಡಗವುಡನಾಗಿದ್ದನು. ರಾಷ್ಟ್ರಕೂಟ ಕೃಷ್ಣನು ಲಿಂಗಪುರ, ಸುರಪುರ, ಮಾನ್ಯಖೇಟ ಪ್ರಾಂತದ ನಾಡಗವುಡನಾಗಿದ್ದನು. ರಾಹಪ್ಪನು ಪುಲಿಗೆರೆಯ ಚಾಲುಕ್ಯರಾಜನಾದ ಎರಡನೆಯ ಅರಿಕೇಸರಿಯ ದಳವಾಯಿಯಾಗಿದ್ದನು. ದಂತಿದುರ್ಗನು ಅವನಿಗೆ ರಾಜ್ಯದ ಆಶೆ ಹಚ್ಚಿ ತನ್ನ ಕಡೆಗೆ ಒಲಿಸಿಕೊಂಡನು. ಈ ದಂತಿದುರ್ಗನು ಚಾಲುಕ್ಯ ಚಕ್ರವರ್ತಿಯ ಸೋದರಳಿಯನೂ ಶೂರನೂ ಸಾಹಸಿಯೂ ತಂತ್ರಗಾರನೂ ಆದದ್ದರಿಂದ ಅವನು ಸ್ವಾಭಾವಿಕವಾಗಿ ಸಂಚುಗಾರರ ಮುಖ್ಯಸ್ಥನಾದನು.

ಐದುಜನ ಸಂಚುಗಾರರು ಚಾಲುಕ್ಯ ಸಾಮ್ರಾಜ್ಯವನ್ನು ಕೈವಶ ಮಾಡಿಕೊಳ್ಳಬೇಕೆಂದು ಸಿದ್ಧರಾದರು. ಅವರು ಅಮೋಘವಾದ ದಂಡು ತೆಗೆದುಕೊಂಡು ಚಾಲುಕ್ಯರ ವಶದಲ್ಲಿದ್ದ ಒಂದೊಂದೇ ಪ್ರಾಂತಗಳನ್ನು ಕೈವಶಮಾಡಿಕೊಳ್ಳುತ್ತ ವಾತಾಪಿಪುರದ ರಾಜಧಾನಿಯನ್ನು ಮುತ್ತಿದರು. ಆಗ ರಾಜಧಾನಿಯಲ್ಲಿ ಕೀರ್ತಿವರ್ಮನಿದ್ದಿಲ್ಲ; ಅವನು ಪಲ್ಲವರ ಮೇಲೆ ದಂಡೆತ್ತಿ ಹೋಗಿದ್ದನು. ರಾಷ್ಟ್ರಕೂಟರು ರಾಜಧಾನಿಯನ್ನು ಮುತ್ತಿದ ಕೂಡಲೆ ಕೀರ್ತಿವರ್ಮನ ಕಕ್ಕನಾದ ಭೀಮಪರಾಕ್ರಮಿ ಮೊದಲನೆಯ ಭೀಮರಾಜನು ಅದ್ವಿತೀಯ ಸಮರ ಕೌಶಲ್ಯದಿಂದ ವೈರಿದಳವನ್ನು ಹಿಂದಕ್ಕಟ್ಟಿದನು. ರಾಷ್ಟ್ರಕೂಟರ ದವಡೆಯೊಳಗಿಂದ ರಾಜಧಾನಿಯು ಉಳಿದುಕೊಂಡರೂ ಸಾಮ್ರಾಜ್ಯವು ಮಾತ್ರ ಉಳಿಯುವಂತಿದ್ದಿಲ್ಲ. ದಂತಿದುರ್ಗ ಮೊದ

ಲಾದ ಶೂರ ಮಂಡಲೇಶ್ವರರು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳನ್ನಾಕ್ರಮಿಸುತ್ತ ನಡೆದರು. ಕೀರ್ತಿವರ್ಮನು ಕರ್ನಾಟಕ ಸಾಮ್ರಾಜ್ಯಕ್ಕೆ ಬಂದ ಗಂಡಾಂತರದ ಸುದ್ದಿಯನ್ನು ಕೇಳಿದೊಡನೆಯೆ ರಾಷ್ಟ್ರಕೂಟರ ಹಾವಳಿಯನ್ನು ಕುಗ್ಗಿಸಬೇಕೆಂದು ರಾಜಧಾನಿಯ ದಾರಿಯನ್ನು ಹಿಡಿದನು. ಆಗ ಭೀಮಾನದಿಯ ತೀರದಲ್ಲಿ ರಾಷ್ಟ್ರಕೂಟರ ಮೊಲನೆಯ ಕೃಷ್ಣರಾಜನು ಬೀಡು ಬಿಟ್ಟಿದ್ದನು. ಕೀರ್ತಿವರ್ಮನು ಕೃಷ್ಣರಾಜನ ಸೈನ್ಯದಮೇಲೆ ಬಿದ್ದು, ಅದನ್ನು ಚನ್ನಾಗಿ ಹಣ್ಣುಮಾಡಿದನು. ಕೀರ್ತಿವರ್ಮನ ಈ ವಿಜಯಾನಂದವು ಬಹಳ ವೇಳೆಯ ವರೆಗೆ ಉಳಿಯಲಿಲ್ಲ. ಇವನಿಂದ ಪರಾಭೂತನಾದ ಕೃಷ್ಣರಾಜನು ರಣಭೂಮಿಯಿಂದ ಕಾಲ್ತೆಗೆಯುವಷ್ಟರಲ್ಲಿ ದಂತಿದುರ್ಗರಾಹಪ್ಪರು ಸೈನ್ಯಸಹಿತರಾಗಿ ಅಲ್ಲಿಗೆ ಹೋಗಿ, ಕೀರ್ತಿವರ್ಮನ ದಳವಾಯಿಯನ್ನು ಒಡೆದುಕೊಂಡು ಅವನನ್ನು ಸೋಲಿಸಿದರು. ಪರಾಭೂತನಾದ ಕೀರ್ತಿವರ್ಮನು ದಿಕ್ಕೆಟ್ಟು ಓಡಿಹೋದನು. ದಂತಿದುರ್ಗಾದಿ ರಾಜ್ಯಪಿಪಾಸುಗಳ ಮಾರ್ಗವು ನಿರುಪಾಧಿಕವಾಯಿತು. ಅವರು ಬಹುತರವಾಗಿ ಚಾಲುಕ್ಯ ಸಾಮ್ರಾಜ್ಯವನ್ನೆಲ್ಲ ಕೈವಶಮಾಡಿಕೊಂಡರು.

ಸಾಮ್ರಾಜ್ಯವನ್ನು ಕಳೆದುಕೊಂಡ ಕೀರ್ತಿವರ್ಮನು ವಾತಾಪಿಪುರದ ನೆರೆಯ ಕೆಲವು ಗ್ರಾಮಗಳಿಗೆ ಮಾತ್ರ ಒಡೆಯನಾಗಿದ್ದನು. ಇವನು ಹತ್ತುವರ್ಷಗಳ ವರೆಗೆ ಶತ್ರುಗಳೊಡನೆ ಕಾದಿದರೂ ವಿಜಯವು ದೊರೆಯಲಿಲ್ಲ. ತನ್ನ ಪೂರ್ವಜರ ವಿಕ್ರಮಾರ್ಜಿತ ಸಾಮ್ರಾಜ್ಯವು ತನ್ನ ಆಳಿಕೆಯಲ್ಲಿ ತನ್ನ ವಂಶದವರ ಕೈಬಿಟ್ಟಿತೆಂದು ಅವನು ಔದಾಸೀನ್ಯದಿಂದ ಕಾಲಕಳೆಯತೊಡಗಿದನು. ಭೀಮಾನದಿಯ ಕಾಳಗದಲ್ಲಿ ಪರಾಭೂತನಾದ ಕೀರ್ತಿವರ್ಮನು ವನವಾಸಿಯಂತೆ ದುರವಸ್ಥೆಯನ್ನು ಹೊಂದಿದ್ದನು. ಇದೇ ಸಂಧಿಯಲ್ಲಿ ಪಲ್ಲವರಾಜನು ವಾತಾಪಿಪುರದ ಮೇಲೆ ದಂಡೆತ್ತಿ ಬಂದು, ಕೀರ್ತಿವರ್ಮನನ್ನು ಯುದ್ಧದಲ್ಲಿ ಸೋಲಿಸಿ ಕೈಸೆರೆ ಹಿಡಿದುಕೊಂಡು ಹೋದನು. ಇವನು ಕೆಲವು ದಿನಗಳ ವರೆಗೆ ಪಲ್ಲವರ ಸೆರೆಯಾಳಾಗಿದ್ದನು. ಅನಂತರದಲ್ಲಿ ಅವನು ಯುಕ್ತಿಪ್ರಯುಕ್ತಿಗಳಿಂದ ಪಾರಾಗಿ ವಾತಾಪಿಪುರಕ್ಕೆ ಬಂದನು ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಅವನು ಇಹಲೋಕವನ್ನು ತ್ಯಜಿಸಿದನು. ಇವನ ತರುವಾಯ ವಿಜಯಾದಿತ್ಯನ ಎರಡನೆಯ ಮಗನೂ ಕೀರ್ತಿವರ್ಮನ ಕಕ್ಕನೂ ಆದ ಮೊದಲನೆಯ ಭೀಮರಾಜನು ವಾತಾಪಿಪುರದ ಸಿಂಹಾಸನವನ್ನೇರಿದನು. ಇವನು ಹೆಸರಿಗೆ ಮಾತ್ರ ಅರಸನಾಗಿದ್ದನು ಇಮ್ಮಡಿ ಕೀರ್ತಿವರ್ಮನ ತರುವಾಯ ಚಾಲುಕ್ಯ ಸಾಮ್ರಾಜ್ಯವೆಲ್ಲ ರಾಷ್ಟ್ರಕೂಟರ ವಶವಾಗಿ, ಚಾಲುಕ್ಯ ರಾಜರು ಅಜ್ಞಾತವಾಸವನ್ನು ಹೊಂದಿದರೆಂದು ಹೇಳಬಹುದು.

ಚಾಲುಕ್ಯ ರಾಜರೆಲ್ಲರೂ ಶೂರರು; ಮೇಧಾವಿಗಳು. ಸನಾತನ ಧರ್ಮದ ಏಳ್ಗೆಗಾಗಿಯೂ, ಕನ್ನಡನಾಡಿನ ಹಾಗು ದೇಶಭಾಷೆಯ ಅಭ್ಯುದಯಕ್ಕಾಗಿ ಅವರು ಬಹಳೇ ಪರಿಶ್ರಮಬಟ್ಟರು. ಇವರ ಕಾಲದಲ್ಲಿ ವಾಸ್ತು, ಶಿಲ್ಪ, ಚಿತ್ರಕಲೇತ್ಯಾದಿ

ಲಲಿತ ಕಲೆಗಳಿಗೆ ಪೂರ್ಣ ಪ್ರೋತ್ಸಾಹನೆಯಿತ್ತು. ಲೋಕವಿಖ್ಯಾತವಾದ ಅಜಂತದ ಚಿತ್ರಕೆಲಸವು ಇಮ್ಮಡಿ ಪುಲಿಕೇಶಿಯ ಸಾರ್ವಭೌಮನ ಕಾಲದಲ್ಲಿಯೆ ಪೂರೈಸಲ್ಪಟ್ಟಿತು. ಅನೇಕ ಶಿಲಾಶಾಸನಗಳು ರಾಜಭಾಷೆಯೂ ದೇಶಭಾಷೆಯೂ ಆದ ಕನ್ನಡದಲ್ಲಿ ಬರೆಯಲ್ಪಟ್ಟವು. ಕರ್ನಾಟಕ ಸಾಮ್ರಾಜ್ಯವು ಸರ್ವಸಂಪತ್ತುಗಳಿಂದ ತುಂಬಿತುಳುಕುತ್ತಿತ್ತು. ಏಳೆಂಟು ತಲೆಗಳವರೆಗೆ ಅವಿಚ್ಛಿನ್ನವಾಗಿ ನಡೆಯುತ್ತ ಕೈವಶವಾಗಿದ್ದ ರಾಜ್ಯಲಕ್ಷ್ಮಿಯು ಚಾಲುಕ್ಯವಂಶವನ್ನು ಬಿಟ್ಟು ಹೋದಳು! ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯೆಂಬ ಗರ್ವದಿಂದ ಮೆರೆಯುತ್ತಿದ್ದ ವಾತಾಪಿಪುರವು ವೈಭವಗಳನ್ನೆಲ್ಲ ಕಳೆದುಕೊಂಡಿತು. ಸಮ್ರಾಟರೆಂದು ಖ್ಯಾತಿಹೊಂದಿದ್ದ ಚಾಲುಕ್ಯ ರಾಜರು ತೀರ ಸಾಮಾನ್ಯರಂತೆ ಅಜ್ಞಾತವಾಸವನ್ನು ಹೊಂದಿದರು. ವಾತಾಪಿಪುರದ ಚಾಲುಕ್ಯವಂಶಿಯ ರಾಜರು ಸಾಮ್ರಾಜ್ಯವನ್ನು ಕಳೆದುಕೊಂಡ ಮೇಲೆ ಸುಮಾರು ಎರಡು ಶತಕಗಳ ವರೆಗೆ ಇತಿಹಾಸದಿಂದ ಮರೆಯಾಗಿ ಹೋದರು. ಪುಲಿಗೆರೆ ವೆಂಗಿಗಳ ಚಾಲುಕ್ಯರು ಮಾತ್ರ ರಾಷ್ಟ್ರಕೂಟರ ಮಂಡಲೀಕರೆನಿಸಿಕೊಂಡು ಜೀವಿಸಿದ್ದರು.

ಚಾಲುಕ್ಯರಂತೆ ರಾಷ್ಟ್ರಕೂಟರಾದರೂ ಅಚ್ಚಕನ್ನಡಿಗರೇ ಆಗಿದ್ದರು. ಚಾಲುಕ್ಯರು ಹೋಗಿ ರಾಷ್ಟ್ರಕೂಟರು ಬಂದರೂ ಕರ್ನಾಟಕದ ವೈಭವವು ಕನ್ನಡಿಗರ ಕೈ-ಬಿಟ್ಟು ಹೋಗಲಿಲ್ಲ. ರಾಷ್ಟ್ರಕೂಟರು ತಮ್ಮ ರಾಜಧಾನಿಯನ್ನು ¹ ಕರ್ನಾಟಕದಲ್ಲಿಯೇ ಸ್ಥಾಪಿಸಿದರು. ಇವರ ಆಳಿಕೆಯಲ್ಲಿ ಕನ್ನಡ ನಾಡೂ ಕನ್ನಡ ಭಾಷೆಯೂ ಬೆಳವಣಿಗೆಯನ್ನು ಹೊಂದಿದವು. ಚಾಲುಕ್ಯರು ಬಿತ್ತಿ ಬೆಳೆಸಿದ ಕರ್ನಾಟಕ ಸಾಮ್ರಾಜ್ಯ ವೃಕ್ಷವನ್ನು ರಾಷ್ಟ್ರಕೂಟರು ಚೆನ್ನಾಗಿ ಬೆಳೆಸಿ ಅದಕ್ಕೆ ಮಧುರತರವಾದ ಫಲಗಳು ಬಿಡುವಂತೆ ಪೋಷಿಸಿದರು.

ರಾಷ್ಟ್ರಕೂಟ ದಂತಿದುರ್ಗನು ಬೇರೆ ನಾಲ್ಕು ಮಂದಿ ಪ್ರಮುಖ ಸರದಾರರೊಡನೆ ಒಳಸಂಚು ನಡೆಯಿಸಿ ಚಾಲುಕ್ಯ ಸಾರ್ವಭೌಮನಾದ ಇಮ್ಮಡಿ ಕೀರ್ತಿವರ್ಮನಿಂದ ಕರ್ನಾಟಕ ಸಾಮ್ರಾಜ್ಯವನ್ನು ಸೆಳೆದುಕೊಂಡನಷ್ಟೆ? ಅವನು ತನಗೆ ನೆರವಾದ ಸಂಚುಗಾರರನ್ನು ಬಡಿಗೊತ್ತಿ ಇಡೀ ಸಾಮ್ರಾಜ್ಯಕ್ಕೆ ತಾನೊಬ್ಬನೇ

---

ರಾಷ್ಟ್ರಕೂಟರ ಮೊಟ್ಟಮೊದಲಿನ ರಾಜಧಾನಿಯು ನಾಸಿಕ ಜಿಲ್ಲೆಯೊಳಗಿನ ಮಯೂರಖಂಡಿ. ೯ನೆಯ ಶತಮಾನದಿಂದ ನಿಜಾಮ ಸರಕಾರದೊಳಗಿರುವ ಮಾನ್ಯಖೇಟವೇ ಅವರ ಸ್ಥಿರವಾದ ರಾಜಧಾನಿಯಾಯಿತು. (ಕರ್ನಾಟಕ ಕೈಪಿಡಿ ಅಧ್ಯಾಯ ೩, ಪುಟ ೫೯.)

ರಾಷ್ಟ್ರಕೂಟ ಮೂರನೆಯ ಗೋವಿಂದನ ಆಳಿಕೆಯ ಕೊನೆಯ ಭಾಗದಲ್ಲಿ ಮಾನ್ಯಖೇಟವು ಅಥವಾ ಮಳಖೇಡವು ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯಾಯಿತು. ಗೋವಿಂದನಿಗಿಂತ ಮೊದಲು ರಾಷ್ಟ್ರಕೂಟರು ಬಾದಾಮಿಯನ್ನೇ ರಾಜಧಾನಿಯನ್ನಾಗಿ ಮಾಡಿರಬಹುದು.

(ಕರ್ನಾಟಕ ಸಾಮ್ರಾಜ್ಯ, ಸಂಪುಟ ೨.)

ಒಡೆಯನಾಗಬೇಕೆಂದು ಹವಣಿಸಿದನು. ಈ ದಂತಿದುರ್ಗನು ಮೂಲೆಗೊತ್ತಿದ ನಾಲ್ಕು ಜನ ಸಾಮಂತರಲ್ಲಿ ಕರ್ಕರಾಜನೆಂಬವನು ಉಳಿದ ಮೂವರಂತೆ ದಂತಿದುರ್ಗ ನೊಡನೆ ಕಾಳಗ ಮಾಡಲಿಕ್ಕೆ ಟೊಂಕಕಟ್ಟಿದೆ, ಲಾಟ ಪ್ರಾಂತದ ಮೇಲೆ ದಂಡೆತ್ತಿ ಹೋಗಿ ಅಲ್ಲಿ ಆಳುತ್ತಿದ್ದ ಚಾಲುಕ್ಯ ಮಂಡಲೇಶ್ವರನನ್ನು ಗೆದ್ದು, ಅವನಿಂದ ಆ ಪ್ರಾಂತವನ್ನು ಸೆಳೆದುಕೊಂಡನು. ಅನಂತರದಲ್ಲಿ ಕೃಷ್ಣರಾಜ, ರಾಹಪ್ಪ, ಸಣಫುಲ್ಲ ಮೊದಲಾದವರು ದಂತಿದುರ್ಗನೊಡನೆ ಕಾದಲಿಕ್ಕೆ ಅಣಿಯಾದರು.

ದಂತಿದುರ್ಗನ ಮನಸ್ವಿಯಾದ ಆಳಿಕೆಯಿಂದ ಕನ್ನಡಿಗರು ಬೇಸತ್ತಿದ್ದರು. ಚಾಲುಕ್ಯರ ಆಳಿಕೆಯಲ್ಲಿ ರಾಮರಾಜ್ಯವಾಗಿದ್ದ ಕರ್ನಾಟಕವು ರಾಷ್ಟ್ರಕೂಟರ ಆಳಿಕೆ ಯಲ್ಲಿ ಹಸಗೆಟ್ಟು ಹೋಗುವದೆಂದು ಅವರು ಕ್ಲೇಶಗೊಂಡರು. ನಿರಾಶೆಯಿಂದ ಪ್ರಸ್ತಂಭಮನಸ್ಕರಾಗಿದ್ದ ಕೃಷ್ಣರಾಜ, ರಾಹಪ್ಪ ಮೊದಲಾದವರಿಗೆ ಆ ಪರಿಸ್ಥಿತಿಯು ಬಹಳೇ ಅನುಕೂಲವಾಯಿತು. ಅವರು ದಂತಿದುರ್ಗನನ್ನು ಕಾಳಗದಲ್ಲಿ ನರೆ ನೋಲಿಸಿ ಕೊಂದು ಚಾಲುಕ್ಯ ಸಾಮ್ರಾಜ್ಯವನ್ನು ತಮ್ಮ ವಶಮಾಡಿಕೊಂಡರು. ಕೃಷ್ಣರಾಜನು ದಂತಿದುರ್ಗನ ಚಿಕ್ಕಪ್ಪನಾದ್ದರಿಂದ ರಾಷ್ಟ್ರಕೂಟ ಸಿಂಹಾಸನವನ್ನು ಅವನೇ ಆರೋಹಿಸಿದನು. ಈ ಮೊದಲನೆಯ ಕೃಷ್ಣರಾಜನು ಕಾರ್ಯಸಾಧಕ ನಿದ್ದನು. ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡನೆಂಬಂತೆ ಅವನ ವರ್ತನ ವಾಯಿತು. ಕೃಷ್ಣರಾಜನು ಶಿಲಾಹಾರ ಸಣಫುಲ್ಲನನ್ನು ತನ್ನ ಕಡೆಗೆ ಮಾಡಿ ಕೊಂಡು ರಾಹಪ್ಪನೊಡನೆ ಜಗಳ ಹೂಡಿದನು. ಕೊನೆಗೆ ರಾಹಪ್ಪನು ಪೂರ್ಣ ವಾಗಿ ಸೋತು ಓಡಿಹೋದದ್ದರಿಂದ ಕೃಷ್ಣರಾಜನ ಮಾರ್ಗವು ನಿರುಪಾಧಿಕವಾಗಿ ಕರ್ನಾಟಕದ ಸಾರ್ವಭೌಮತ್ವವು ಅವನ ವಶವಾಯಿತು. ಅವನು ಸಣಫುಲ್ಲನಿಗೆ ಸಹ್ಯಾದ್ರಿ ಪಶ್ಚಿಮ ಸಮುದ್ರಗಳ ನಡುವಿನ ಎಲ್ಲ ಪ್ರದೇಶವನ್ನು ಕೊಟ್ಟು, ತನ್ನ ಮಹಾಮಂಡಲೇಶ್ವರನನ್ನಾಗಿ ಮಾಡಿಕೊಂಡನು. ಮೊದಲನೆಯ ಕೃಷ್ಣನ ಆಳಿಕೆ ಯಲ್ಲ ಚಾಲುಕ್ಯರು ತಮ್ಮ ಗತವೈಭವವನ್ನು ಸಂಪಾದಿಸಲಿಕ್ಕೆ ಬಹುಪರಿಯಾಗಿ ದಣಿಗಿ, ಕಡೆಗೆ ಭಗ್ನಮನೋರಥರಾದರು.

ರಾಷ್ಟ್ರಕೂಟ ಮೊದಲನೆಯ ಕೃಷ್ಣರಾಜನ ತರುವಾಯ ಅವನ ಮಗನಾದ ಗೋವಿಂದನು ಸಿಂಹಾಸನವನ್ನೇರಿದನು. ಗೋವಿಂದನಿಗೂ ಅವನ ಸಹೋದರನಾದ ಧ್ರುವನಿಗೂ ಮನಸ್ತಾಪವುಂಟಾಗಿ ಯುದ್ಧವಾಯಿತು. ಈ ಯುದ್ಧದಲ್ಲಿ ಧ್ರುವನು ವಿಜಯಿಯಾಗಿ ತನ್ನ ಅಣ್ಣನನ್ನು ಪಟ್ಟದಿಂದ ತಳ್ಳಿ ತಾನೇ ರಾಜ್ಯಕ್ಕೆ ಒಡೆಯ ನಾದನು. ಧ್ರುವನಿಗೆ ಗೋವಿಂದ ಇಂದ್ರರೆಂಬ ಇಬ್ಬರು ಮಕ್ಕಳಿದ್ದರು. ಧ್ರುವನ ತರುವಾಯ ಗೋವಿಂದನು ಪಟ್ಟಕ್ಕೆ ಬಂದನು. ಇವನ ಕಾಲಕ್ಕೆ ಕರ್ನಾಟಕ ಸಾಮ್ರಾಜ್ಯವು ವಿಂಧ್ಯಗಿರಿಯಿಂದ ತುಂಗಭದ್ರೆಯವರೆಗೂ, ಪೂರ್ವ ಪಶ್ಚಿಮ ಸಮು ದ್ರದ ವರೆಗೂ ಹಬ್ಬಿತು. ಇವನು ಪಲ್ಲವರಿಂದ ಕಪ್ಪತೆಗೆದುಕೊಂಡನು. ಇಂದ್ರನು ಲಾಟದೇಶವನ್ನಾಳಲಾರಂಭಿಸಿದನು. ಮೂರನೆಯ ಗೋವಿಂದನ ತರುವಾಯ ಅವನ

ಮಗನಾದ ಮೊದಲನೆಯ ಅಮೋಘವರ್ಷನು ಮಾನ್ಯಖೇಟ ರಾಜಧಾನಿಯಲ್ಲಿ ಕರ್ನಾಟಕ ಸಾಮ್ರಾಜ್ಯ ಸಿಂಹಾಸನವನ್ನೇರಿದನು. ಇವನ ಕಾಲದಲ್ಲಿ ವಾತಾಪಿಪುರದ ಚಾಲುಕ್ಯರು ಸ್ವಾತಂತ್ರ್ಯೋದ್ಯಮವನ್ನು ಪ್ರಾರಂಭಿಸಿದರು. ವೆಂಗಿಯ ಚಾಲುಕ್ಯರಾಜನಾದ ವಿಜಯಾದಿತ್ಯನು ವಾತಾಪಿಪುರದ ಚಾಲುಕ್ಯರಿಗೆ ಸಹಾಯ ಮಾಡಿ ಅವರ ಗತವೈಭವವನ್ನು ಸಂಪಾದಿಸಿ ಕೊಡಬೇಕೆಂದೂ, ತಾನು ಸ್ವತಂತ್ರನಾಗಬೇಕೆಂದೂ ರಾಷ್ಟ್ರಕೂಟರೊಡನೆ ಯುದ್ಧಕ್ಕೆ ಅಣಿಯಾದನು. ವೆಂಗವಳ್ಳಿಯೆಂಬಲ್ಲಿ ರಾಷ್ಟ್ರಕೂಟರಿಗೂ ಚಾಲುಕ್ಯರಿಗೂ ಭಯಂಕರವಾದ ಕಾಳಗವಾಯಿತು. ಚಾಲುಕ್ಯರ ಅಜ್ಞಾತವಾದ ಅವಧಿಯು ಇನ್ನೂ ಮುಗಿದಿದ್ದಿಲ್ಲವಾದ್ದರಿಂದ ಅವರಿಗೆ ಅಪಜಯವಾಯಿತು. ವೆಂಗಿಯ ಚಾಲುಕ್ಯ ರಾಜನಾದ ವಿಜಯಾದಿತ್ಯನು ರಾಷ್ಟ್ರಕೂಟ ಸಾರ್ವಭೌಮನಾದ ಅಮೋಘವರ್ಷನಿಗೆ ಹೇರಳವಾದ ಕಪ್ಪ-ಕಾಣಿಕೆಗಳನ್ನು ಕೊಟ್ಟು ಒಪ್ಪಂದ ಮಾಡಿಕೊಂಡನು

ರಾಷ್ಟ್ರಕೂಟರು ಕರ್ನಾಟಕ ಸಾಮ್ರಾಜ್ಯದ ಒಡೆಯರಾದ ಮೇಲೆ ಎಲ್ಲ ಚಾಲುಕ್ಯ ರಾಜರು ಅವರ ಮಂಡಲೇಶ್ವರರಾಗಿ ಬಾಳಿಕೊಂಡಿದ್ದರು. ಬೆಳಗಾವಿ ಪ್ರಾಂತದಲ್ಲಿದ್ದ ಕೋಟೂರ ಪರಹಿತರಾಜ, ಮೈಸೂರ ಸಂಸ್ಥಾನದೊಳಗಿನ ಕುಣಗಿಲನಾಡ ವಿನಯಾದಿತ್ಯ, ವರುಣ ಸಂಸ್ಥಾನದ ಮಹಾ ಸಾಮಂತನಾದ ನರಸಿಂಹ, ಪುಲಿಗೆರೆಯ ಮಹಾ ಮಂಡಲೇಶ್ವರನಾದ ಅರಿಕೇಸರಿ ಮೊದಲಾದ ಚಾಲುಕ್ಯ ಮನೆತನಗಳು ರಾಷ್ಟ್ರಕೂಟರ ಅಂಕಿತವಾಗಿದ್ದವು. ಬಾದಾವಿಯ ಚಾಲುಕ್ಯರೂ ವೆಂಗಿ-ಗುಜರಾಥಗಳ ಚಾಲುಕ್ಯ ರಾಜರೂ ರಾಷ್ಟ್ರಕೂಟ ಸಾರ್ವಭೌಮರಿಗೆ ಕಪ್ಪ-ಕಾಣಿಕೆಗಳನ್ನು ಕೊಡುತ್ತಿದ್ದರು ಬಹುತರವಾಗಿ ಎಲ್ಲ ಚಾಲುಕ್ಯ ರಾಜರು ರಾಷ್ಟ್ರಕೂಟರೊಡನೆ ವೈರಭಾವವನ್ನು ತಳೆದವರಾಗಿದ್ದರು ರಾಷ್ಟ್ರಕೂಟ ರಾಜ್ಯಕ್ರಾಂತಿಯಾಗಿ ಕರ್ನಾಟಕ ಸಾಮ್ರಾಜ್ಯವು ವಾತಾಪಿಯ ಚಾಲುಕ್ಯರ ಕೈವಶವಾಗಬೇಕೆಂದು ಎಲ್ಲ ಚಾಲುಕ್ಯ ರಾಜರು ಸಾಹಸಮಾಡತೊಡಗಿದ್ದರು.

ರಟ್ಟ ಸಾರ್ವಭೌಮರಾದ ಎರಡನೆಯ ಕೃಷ್ಣರಾಜನ ಆಳಿಕೆಯಲ್ಲಿ ವಾತಾಪಿಪುರದ ಚಾಲುಕ್ಯರು ಮತ್ತೆ ತಲೆಯೆತ್ತಿದರು. ಈ ಕೃಷ್ಣರಾಜನು ತನ್ನ ಪೂರ್ವಜರಂತೆ ಸಾಹಸಿಗನೂ ವಿಕ್ರಮಶಾಲಿಯೂ ಆಗಿದ್ದರಿಂದ ಬಾದಾವಿಯ ಚಾಲುಕ್ಯರನ್ನು ಮಣಿಸುವದು ಅವನಿಗೆ ಅಸಾಧ್ಯವಾಗತೊಡಗಿತು. ಸಾಮ್ರಾಜ್ಯದ ಕಟ್ಟುಗಳು ದಿನದಿನಕ್ಕೆ ಸಡಿಲಾಗತೊಡಗಿ ಸಾಮ್ರಾಜ್ಯದಲ್ಲಿ ಅವ್ಯವಸ್ಥೆಯು ನೆಲೆಗೊಂಡಿತು. ಪ್ರಬಲವಾಗತೊಡಗಿದ್ದ ಬಾದಾವಿಯ ಚಾಲುಕ್ಯರೊಡನೆ ವೈರ ಬೆಳೆಯಿಸುವದಕ್ಕಿಂತ ಸ್ನೇಹದಿಂದಿರುವದೇ ಯೋಗ್ಯವೆಂದು ಕೃಷ್ಣರಾಜನು ತಿಳಿದುಕೊಂಡನು. ಅವನು ಚಾಲುಕ್ಯ ವಿಕ್ರಮಾದಿತ್ಯನ ಮೊಮ್ಮಗನಾದ ಅಯ್ಯಣದೇವನಿಗೆ ತನ್ನ ಮಗಳನ್ನು ಧಾರೆಯೆರೆದು ಕೊಟ್ಟು, ಬಳುವಳಿಯಾಗಿ ಎಷ್ಟೋ ಗ್ರಾಮುಗಳನ್ನಿತ್ತನು. ಈ ಸಂಬಂಧದಿಂದ ಅಯ್ಯಣಾರ್ಯನ ನಾಡು ಬೆಳೆದದ್ದಲ್ಲದೆ, ರಾಷ್ಟ್ರಕೂಟರ ಓಲಗದಲ್ಲಿ

ಅವನ ಅಧಿಕಾರವೂ ಸಾಮ್ರಾಜ್ಯದಲ್ಲಿ ವರ್ಚಸ್ಸವೂ ನೆಲೆಗೊಂಡವು. ಬರಬರುತ್ತ ಚಾಲುಕ್ಯರು ರಾಷ್ಟ್ರಕೂಟರ ಸರಿಸಮಾನಸ್ಕಂಧರಾದರು ಅವರಿಗೆ ತಮ್ಮ ಅಜ್ಞಾತ ವಾಸದ ಅವಧಿಯು ಸಮೀಪಿಸಿತೆಂಬ ಚಿಹ್ನವು ತೋರಲಾರಂಭಿಸಿತು. ಚೇದಿರಾಜ ನಾದ ಲಕ್ಷ್ಮಣದೇವನು ತನ್ನ ಕುಮಾರಿಯಾದ ಬೊಂಥಾದೇವಿಯನ್ನು ಅಯ್ಯಣಾ ರ್ಯನ ಮಗನಾದ ನಾಲ್ಕನೆಯ ವಿಕ್ರಮಾದಿತ್ಯನಿಗೆ ಕೊಟ್ಟಮೇಲಂತೂ ಚಾಲುಕ್ಯರ ಗೌರವವು ಮತ್ತಿಷ್ಟು ಹೆಚ್ಚಾಯಿತು. ಈ ವಿಕ್ರಮಾದಿತ್ಯನು ಶೂರನೂ, ಸಾಹ ಸಿಯೂ, ಹೆಬ್ಬಯಕೆಯವನೂ, ರಾಜಕಾರಣಧುರಂಧರನೂ ಆಗಿದ್ದನೆಂದು ದಾವಣ ಗೇರಿಯ ಶಿಲಾಲೇಖದಲ್ಲಿ † ಬರೆದಿದೆ. ಎರಡನೆಯ ಕೃಷ್ಣನ ಆಳಿಕೆಯಲ್ಲಿ ರಾಷ್ಟ್ರ ಕೂಟರ ಇಳಿಗಾಲವೂ, ಕೊಟ್ಟಿಗದೇವನ ಆಳಿಕೆಯಲ್ಲಿ ಅವರ ಅಳಿಗಾಲವೂ ಪ್ರಾರಂಭ ವಾದವೆನ್ನಬಹುದು. ಚಾಲುಕ್ಯ ವಿಕ್ರಮಾದಿತ್ಯನು ತನ್ನ ಬುದ್ಧಿ ಕೌಶಲ್ಯಗಳಿಂದ ರಾಷ್ಟ್ರಕೂಟರ ಮುಖ್ಯ ಸರದಾರನಾಗಿ ಚಾಲುಕ್ಯರಾಜ್ಯದ ಅಭ್ಯುದಯಕ್ಕಾಗಿ ಯತ್ನಿಸತೊಡಗಿದನು.

ರಾಷ್ಟ್ರಕೂಟ ಎರಡನೆಯ ಕೃಷ್ಣನ ಆಳಿಕೆಯಲ್ಲಿ ವೆಂಗಿಯ ಪೂರ್ವ ಚಾಲುಕ್ಯ ರಾಜನಾದ ಗುಣಕ ವಿಜಯಾದಿತ್ಯನು ರಾಷ್ಟ್ರಕೂಟ ಸೈನ್ಯವನ್ನು ಸೋಲಿಸಿ, ಕರ್ನಾ ಟಕ ಸಾಮ್ರಾಜ್ಯದ ರಾಜಧಾನಿಯಾದ ಮಾನ್ಯಖೇಟವನ್ನು ಸುಲಿದು ಕೊಳ್ಳೆಯಿಕ್ಕಿ ದನು. ಮೂರನೇಯ ಕೃಷ್ಣನ ಆಳಿಕೆಯಲ್ಲಂತು ರಾಜ್ಯದ ಕಟ್ಟುಗಳು ಬಹಳೇ ಶಿಥಿಲವಾಗಿ ರಾಷ್ಟ್ರಕೂಟರ ಇಳಿಗಾಲವೇ ಪ್ರಾರಂಭವಾಯಿತು. ಈ ಮೂರನೇಯ ಕೃಷ್ಣನ ತರುವಾಯ ಅವನ ಮಗನಾಗಲಿ, ಮೊಮ್ಮಗನಾದ ಇಂದ್ರನಾಗಲಿ ಪಟ್ಟಕ್ಕೆ ಬರಲಿಲ್ಲ; ಎರಡನೆಯ ಕೃಷ್ಣನ ಸಹೋದರನಾದ ಕೊಟ್ಟಿಗದೇವನು ರಾಷ್ಟ್ರಕೂಟ ಸಿಂಹಾಸನದಲ್ಲಿ ಮಂಡಿಸಿದನು ಇವನ ಆಳಿಕೆಯಲ್ಲಿ ಮಾಳವೇಯ ಪರಮಾರ ರಾಜನಾದ ಸಿಯಾಕಹರ್ಷನು ಕೊಟ್ಟಿಗದೇವನನ್ನು ಯುದ್ಧದಲ್ಲಿ ನೆರೆಸೋಲಿಸಿ, ರಾಜಧಾನಿಯನ್ನು ಸುಲಿದು ಹೇರಳವಾದ ಸಂಪತ್ತನ್ನೊಯ್ದನು. ಈ ಘಟನೆ ಯಿಂದಂತೂ ರಾಷ್ಟ್ರಕೂಟರ ಗೌರವವೇ ನಾಶವಾಯಿತು.

ನಾಲ್ಕನೆಯ ವಿಕ್ರಮಾದಿತ್ಯನ ತರುವಾಯ ಅವನ ಭಾಗ್ಯಶಾಲಿ ಪುತ್ರನಾದ ಎರಡನೇ ತೈಲಪದೇವನು ವಾತಾಪಿಪುರದ ಸಿಂಹಾಸನವನ್ನೇರಿದನು ಇವನು ಶೂರನು, ಮೇಧಾವಿಯೂ, ದೈವಶಾಲಿಯೂ. ಇವನು ರಾಷ್ಟ್ರಕೂಟ ಕಕ್ಕಲದೇವನ ಮಗಳಾದ ಜಾಕಲದೇವಿಯನ್ನು ಮದುವೆಯಾಗಿದ್ದನು. ಈ ತೈಲಪದೇವನು ರಾಜ ಜಾಮಾತನಾದ್ದರಿಂದ ಕರ್ನಾಟಕ ಸಾಮ್ರಾಜ್ಯದ ಪ್ರಜಾಜನರ ಮೇಲೆಯೂ,

† ಅಭವತ್ತನಯೋ ತನುಜೋ ವಿಭವ ಭವಾಸೀ ವಿರೋಧಿ ವಿಧ್ವಂಸೀ।
ತೇಜೋವಿಜಿತಾದಿತ್ಯ ಸತ್ಯಧನೋ ವಿಕ್ರಮಾದಿತ್ಯ॥

(ಕರ್ನಾಟಕ ಶಾಸನಸಂಗ್ರಹ, ಸಂ ೧೧; ಪು ೪೫.)

ಮಂತ್ರಿ, ಸಾಮಂತ, ಮಹಾಮಂಡಲೇಶ್ವರ, ದಳವಾಯಿ ಮೊದಲಾದವರ ಮೇಲೆಯೂ ತನ್ನ ವರ್ಚಸ್ವವನ್ನು ಪ್ರಸ್ಥಾಪಿಸಲಿಕ್ಕೆ ಬಹಳೇ ಅನುಕೂಲವಿತ್ತು.

ರಾಜ್ಯಭ್ರಷ್ಟರಾದ ಚಾಲುಕ್ಯರು ಮೊದಲು ರಾಷ್ಟ್ರಕೂಟರಾಜ್ಯದೊಳಗಿನ ಅಲ್ಪ ಸ್ವಲ್ಪ ಹಳ್ಳಿಗಳಿಗೆ ಮಾತ್ರ ಒಡೆಯರಾಗಿದ್ದರು. ಬರಬರುತ್ತ ಕಾರ್ಯಸಾಧನೆ ಮಾಡುತ್ತ ವಾತಾಪಿಪುರ ರಾಜಧಾನಿಯನ್ನು ಕೈಯಲ್ಲಿ ತೆಗೆದುಕೊಂಡು ತಮ್ಮ ರಾಜ್ಯವನ್ನು ಬೆಳಿಸಲಾರಂಭಿಸಿದರು. ಅಯ್ಯಣಾರ್ಯನ ಕಾಲದಿಂದ ಅಜ್ಞಾತವಾಸ ದುಃಖವು ಪರಿಹಾರವಾದಿಂತೆಂಬ ಸುಖಸ್ವಪ್ನಗಳು ಬೀಳತೊಡಗಿದ್ದವು. ವಿಕ್ರಮಾದಿತ್ಯನ ಕಾಲದಲ್ಲಿ ಚಾಲುಕ್ಯರು ರಾಷ್ಟ್ರಕೂಟರ ಸರಿಸಮಾನಸ್ಕಂಧರಾದರು. ತೈಲಪದೇವನು ಕಕ್ಕಲನ ಮಗಳನ್ನು ವಿವಾಹವಾದ ಮೇಲಂತೂ ಚಾಲುಕ್ಯರು ಮತ್ತಿಷ್ಟು ಹೆಚ್ಚಳವನ್ನು ಹೊಂದಿದರು. ಈ ತೈಲಪದೇವನು ಅತ್ಯಂತ ಭಾಗ್ಯಶಾಲಿಯಿದ್ದನೆನ್ನಬಹುದು. ಎರಡನೆಯ ಕೀರ್ತಿವರ್ಮನ ಕಾಲದಿಂದ ಚಾಲುಕ್ಯರಾಜರು ಅಜ್ಞಾತವಾಸವನ್ನು ಹೊಂದಿದ್ದರು. ಅವರು ಸುಮಾರು ಎರಡು ಶತಕಗಳ ವರೆಗೆ ಸಾಮ್ರಾಜ್ಯ ಸಿಂಹಾಸನಕ್ಕೆ ಹೊರತಾಗಿ ಇತಿಹಾಸದಿಂದ ಮರೆಯಾಗಿ ಹೋಗಿದ್ದರು. ತೈಲಪದೇವನ ದೀರ್ಘ ಸಾಹಸ, ರಾಜಕಾರಣ ಧುರಂಧರತೆ, ಸದಭಿಮಾನ ಮೊದಲಾದ ಉಚ್ಚ ಗುಣಗಳನ್ನು ನೊಡಲು, ಚಾಲುಕ್ಯರ ಅಜ್ಞಾತವಾಸದ ಉದ್ಯಾಪನೆಯು ಬೇಗನೆ ಆಗುವದೆಂದು ಎಲ್ಲರಿಗೂ ಒಡೆದುಕಾಣುತ್ತಿತ್ತು. ಕೊಟ್ಟಿಗದೇವನು ಹೇಡಿಯಿದ್ದುದರಿಂದ ಉತ್ತರಾಪಥದವರು, ಅವರಲ್ಲಿ ಪರಮಾರ ರಾಜರು ಮೇಲಿಂದ ಮೇಲೆ ಕರ್ಣಾಟಕ ಸಾಮ್ರಾಜ್ಯವನ್ನು ನುಗ್ಗಲಾರಂಭಿಸಿದ್ದರು. ಪರಕೀಯರ ದಾಳಿಗೆ ಪ್ರತಿಕಾರ ಮಾಡದಿದ್ದರೆ ಸಾಮ್ರಾಜ್ಯದ ಪಾಡು ಒಳಿತಾಗಲಾರದೆಂದು ತೈಲಪದೇವನು ತಿಳಿದನು.

ಪುಲಿಗೇರಿಯ ಮಹಾಮಂಡಲೇಶ್ವರನಾದ ಎರಡನೆಯ ಅರಿಕೇಸರಿಯು ರಾಷ್ಟ್ರಕೂಟರ ಕಡುಹಗೆಯಾಗಿದ್ದನು. ಉತ್ತರಾಪಥದ ರಾಜರು ರಾಜ್ಯಪಿಪಾಸೆಯಿಂದಲೂ ಐಶ್ವರ್ಯ ಲೋಭದಿಂದಲೂ ಕರ್ನಾಟಕ ಸಾಮ್ರಾಜ್ಯದ ಮೇಲೆ ದಾಳಿ ಮಾಡತೊಡಗಿದ್ದನ್ನು ನೋಡಿ ಅವನ ತಲೆಯೇ ತಿರುಗಿತು. ರಾಷ್ಟ್ರಕೂಟ ರಾಜನಾದ ಕೊಟ್ಟಿಗದೇವನು ದುರ್ಬಲನಿದ್ದುದರಿಂದ ಈ ಬಗೆಯ ಘಟನೆಗಳೊದಗತೊಡಗಿರುವವೆಂದು ಅವನು ಭಾವಿಸಿದನು. ವಾತಾಪಿಪುರದ ಚಾಲುಕ್ಯ ರಾಜನಾದ ತೈಲಪನು ಕರ್ನಾಟಕ ಸಾಮ್ರಾಜ್ಯವನ್ನಾಳಲಿಕ್ಕೆ ಯೋಗ್ಯನಿರುವನೆಂದು ಅವನು ತಿಳಿದು, ತನ್ನ ಅಭಿಪ್ರಾಯವನ್ನು ತೈಲಪದೇವನಿಗೆ ಹೇಳಿದನು. ಅರಿಕೇಸರಿಯು ಚಾಲುಕ್ಯ ವಂಶದವನಿದ್ದುದರಿಂದ ಅವನು ತೈಲಪದೇವನಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟಿದ್ದನು. ರಾಷ್ಟ್ರಕೂಟ ದಂತಿದುರ್ಗನು ಕುಟಿಲ ಕಾರಸ್ಥಾನದಿಂದ ಚಾಲುಕ್ಯ ಸಾಮ್ರಾಜ್ಯವನ್ನು ಪಾದಾಕ್ರಾಂತಗೊಳಿಸಿದ್ದರಿಂದ ಚಾಲುಕ್ಯ ವಂಶಜರಾದ ತಾವು ರಾಷ್ಟ್ರಕೂಟರನ್ನು ಮುರಿಬಡೆದು ಕರ್ನಾಟಕದ ಸಾಮ್ರಾಜ್ಯ ಸಿಂಹಾಸನವನ್ನು

ಸ್ವಾಧೀನಪಡಿಸಿಕೊಳ್ಳಬೇಕೆಂದು ಅರಿಕೇಸರಿಯು ತೈಲಪನಿಗೆ ಹೇಳಿದನು. ತೈಲಪ ನಿಗಾದರೂ ಅರಿಕೇಸರಿಯ ಅಭಿಪ್ರಾಯವು ಸಮಂಜಸವಾಗಿ ತೋರಿತು. ಉತ್ತರಾ ಪಥದ ರಾಜರು ದುರ್ಬಲರಾಗಿದ್ದ ರಾಷ್ಟ್ರಕೂಟರನ್ನು ಜಯಿಸಿ, ಕರ್ನಾಟಕ ಸಾಮ್ರಾ ಜ್ಯವನ್ನು ತಮ್ಮ ಛತ್ರದ ಕಡೆಗೆ ತೆಗೆದುಕೊಳ್ಳದೆ ಬಿಡರೆಂದು ತೈಲಪನಿಗೆ ತೋರಲಾ ರಂಭಿಸಿತು ಆಗ ಅವನು ರಾಷ್ಟ್ರಕೂಟರನ್ನು ಯಾವವಿಧದಿಂದ ಮುರಿಬಡಿಯ ಬೇಕೆಂಬದರ ಬಗ್ಗೆ ವಿಚಾರ ಮಾಡಲಾರಂಭಿಸಿದನು.

ಕನ್ನಡಿಗರ ದೈವವು ಒಳಿತಾಗಿತ್ತು. ಕರ್ನಾಟಕದ ಸ್ವಾತಂತ್ರ್ಯ ಸಿಂಹಾಸ ನವು ತನ್ನ ಗೌರವವನ್ನು ಇನ್ನೂ ಕಾಯ್ದುಕೊಳ್ಳುವ ಭಾಗ್ಯದ ಕಾಲವಿತ್ತು. ಚಾಲು ಕ್ಯರ ಎರಡು ಶತಕಗಳ ಅಜ್ಞಾತವಾಸದ ಅವಧಿಯು ಮುಗಿಯುತ್ತ ಬಂದಿತ್ತು. ಅಂತೆಯೇ ಚಾಲುಕ್ಯ ವಂಶದಲ್ಲಿ ನೂರ್ಮಡಿ ತೈಲಪದೇವನಂತಹ ಭಾಗ್ಯಶಾಲಿಯಾದ ಅರಸನು ಜನಿಸಿದನು.

---

## ಮಾನ್ಯಖೇಟದ ಸುಲಿಗೆ.

ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯಾದ ಮಾನ್ಯಖೇಟದಲ್ಲಿ ವಿಲಕ್ಷಣವಾದ ಗೊಂದಲವೆದ್ದಿತ್ತು. ಪ್ರತಿಯೊಬ್ಬ ನಾಗರಿಕನ ಮುಖವು ಭೀತಿಯಿಂದ ಕಪ್ಪಿಟ್ಟಿತ್ತು. ಮಾಳವದ ಅರಸನಾದ ಪ್ರಸಿದ್ಧನಾದ ಮುಂಜರಾಜನು ತನ್ನ ಅಮೋಘವಾದ ದಳ ದೊಡನೆ ಮಾನ್ಯಖೇಟವನ್ನು ಮುತ್ತುವನೆಂಬ ಸಂಗತಿಯನ್ನು ಕೇಳಿದಾಗಿನಿಂದ ರಾಜಧಾನಿಯೊಳಗಿನ ಪ್ರತಿಯೊಬ್ಬ ನಾಗರಿಕನು ತನ್ನ ವಿತ್ತಜೀವಿತ ಗಳ ಬಗ್ಗೆ ಯೋಚನೆಗೊಳಗಾಗಿದ್ದನು ಮುಂಜರಾಜನ ತಂದೆಯಾದ ಸಿಯಾಕ ಹರ್ಷನು ರಾಜಧಾನಿಯನ್ನು ಮುತ್ತಿದಾಗ, ಅಲ್ಲಿಯ ನಾಗರಿಕರು ಅನೇಕ ವಿಧದ ಯಾತನೆಗಳನ್ನನುಭವಿಸಿದ್ದರು. ಮುಂಜರಾಜನು ಸಿಯಾಕಹರ್ಷನಿಗಿಂತ ಶೂರನೂ, ಕಟ್ಟಾಸ್ವಭಾವದವನೂ, ತಾರುಣ್ಯಮನೋಧರ್ಮಕ್ಕನುಗುಣವಾಗಿ ಚಂಚಲವೃತ್ತಿಯ ವನೂ, ಶೀಘ್ರಕೋಪಿಯೂ ಆಗಿರುವನೆಂಬ ಸಂಗತಿಯು ಸರ್ವಶ್ರುತವಿತ್ತು ತಮ್ಮ ಒಡೆಯನಾದ ಕೊಟ್ಟಿಗದೇವನಿಂದ ಮುಂಜರಾಜನ ಪ್ರತೀಕಾರ ಮಾಡುವದಾಗುವ ದಿಲ್ಲವೆಂದೂ, ತಮ್ಮ ಸ್ಥಿತಿಯು ಅತ್ಯಂತ ಶೋಚನೀಯವಾಗುವದೆಂದೂ ಎಲ್ಲ ನಾಗರಿಕರು ತಿಳಿದಿದ್ದರು. ಧನಾಢ್ಯರಾದ ವರ್ತಕರೂ, ಶ್ರೀಮಂತರೂ ತಮ್ಮ ಸಂಪತ್ತಿನ ರಕ್ಷಣೆಯು ಹೇಗಾದೀತೆಂದು ಚಿಂತೆಮಾಡತೊಡಗಿದರು ಆಗ ಕರ್ನಾ ಟಕ ಸಾಮ್ರಾಜ್ಯವು ವೈಭವಪೂರ್ಣವಾಗಿತು. ವೈಭವಶಾಲಿಯಾದ ಕರ್ನಾಟಕದ ರಾಜಧಾನಿಯೆನಿಸಿಕೊಂಡಿದ್ದ ಮಾನ್ಯಖೇಟದ ವೈಭವವು ಹೇಗಿರಬಹುದೆಂಬದನ್ನು ತರ್ಕಿಸುವದು ಅಸಾಧ್ಯವೇ ಸರಿ. ಮುಂಜರಾಜನು ದಂಡೆತ್ತಿ ಬರುವನೆಂಬ ವಾರ್ತೆ

ಯನ್ನು ಕೇಳಿದ ಕೂಡಲೆ ಪೌರವರಲ್ಲನೇಕರು ರಾಜಧಾನಿಯನ್ನು ಬಿಟ್ಟು ಸುರಕ್ಷಿತ ವಾದ ಸ್ಥಳಕ್ಕೆ ಹೊರಡಲುದ್ಯುಕ್ತರಾದರು.

ಮಾನ್ಯಖೇಟವು ನದೀತೀರದ ಪಟ್ಟಣವು. ನದಿಗೆ ಸಮೀಪವಾಗಿಯೇ ರಾಷ್ಟ್ರಕೂಟರ ರಾಜಭವನವೂ, ವಿಲಾಸಮಂದಿರಗಳೂ, ಅಂತಃಪುರವೂ, ಮಂತ್ರಣಾ ಗಾರವೂ ಇದ್ದವು. ನದಿಗೆ ಹೊಂದಿ ಇದ್ದ ದೊಡ್ಡ ರಾಜೋದ್ಯಾನದಲ್ಲಿ ಅಂತಃಪುರ ವಿತ್ತು. ಅಂತಃಪುರಕ್ಕೆ ಸಮೀಪವಾಗಿಯೇ ಮಂತ್ರಣಾಗಾರವಿತ್ತು. ಮಂತ್ರಣಾ ಗಾರದ ಬಳಿಯಲ್ಲಿ ರಾಜಸಭೆಯಿತ್ತು. ರಾಜಸಭೆಯು ರಾಜೋದ್ಯಾನವನ್ನು ಬಿಟ್ಟು ಸ್ವಲ್ಪ ಅಂತರದ ಮೇಲೆ ಇತ್ತು. ರಾಜಕಾರಣದ ಗುಪ್ತ ವಿಚಾರಗಳು ಮಂತ್ರಣಾ ಗಾರದಲ್ಲಿ ನಡೆಯುತ್ತಿದ್ದವು. ಮುಂಜರಾಜನು ದಂಡೆತ್ತಿ ಬರುವನೆಂಬ ವಾರ್ತೆ ಯನ್ನು ಕೇಳಿದಾಗಿನಿಂದ ರಾಷ್ಟ್ರಕೂಟ ಸಾರ್ವಭೌಮನಾದ ಕೊಟ್ಟಿಗದೇವನ ದೊಡ್ಡ ಜೀವವು ಹೋದಂತಾಗಿತ್ತು. ಸಿಯಾಕಹರ್ಷನಿಗಿಂತ ಪ್ರಬಲನಾದ ಮುಂಜರಾಜನು ರಾಜಧಾನಿಯನ್ನು ಉಧ್ವಸ್ತಗೊಳಿಸದಿರಲಾರನೆಂದು ಅವನು ತಿಳಿದಿದ್ದನು. ಶತ್ರು ಪ್ರತೀಕಾರಕ್ಕೆ ಏನು ಉಪಾಯ ಮಾಡಬೇಕೆಂಬದರ ವಿಷಯವಾಗಿ ಅವನು ಮಂತ್ರ ಣಾಗಾರದಲ್ಲಿ ಮಂತ್ರಿ-ಸೇನಾಪತಿಗಳನ್ನೂ, ಕಕ್ಕಲದೇವ-ಬಪ್ಪುವದೇವ ಮೊದಲಾದ ರಾಜಸಂಬಂಧಿಕರನ್ನೂ ಕರೆಯಿಸಿದ್ದನು. ಕೊಟ್ಟಿಗದೇವನು ತನ್ನ ಮಂತ್ರಿ-ಸೇನಾ ಪತಿಗಳನ್ನು ಕುರಿತು—"ಮಂತ್ರಿ-ಸೇನಾನಾಯಕರೆ, ನಿನ್ನೆ ಗುಪ್ತಚರರು ತಂದ ವಾರ್ತೆಯನ್ನು ಎಲ್ಲರೂ ಕೇಳಿರುವಿರಿ. ಪರಾಕ್ರಮಿಯಾದ ಮುಂಜರಾಜನು ಲುಂಠನ ಪ್ರಿಯನಾಗಿರುವನು. ನಮ್ಮ ಕರ್ನಾಟಕ ಸಾಮ್ರಾಜ್ಯವು ವೈಭವಪೂರ್ಣವಿದ್ದುದ ರಿಂದ, ಅವನು ಇಲ್ಲಿ ಸುಲಿಗೆ ಮಾಡಿಕೊಂಡು ಹೋಗಬೇಕೆಂದು ಯೋಚಿಸಿರುವನು. ಆ ಮಹತ್ವಾಕಾಂಕ್ಷಿಯು ಇಷ್ಟರಿಂದಲೇ ತೃಪ್ತಿಹೊಂದತಕ್ಕವನಿರುವದಿಲ್ಲ. ಅವನು ನಮ್ಮ ಸಾಮ್ರಾಜ್ಯವನ್ನು ಸಹ ವಶಮಾಡಿಕೊಳ್ಳಲಿಕ್ಕೆ ಹಿಂದೆ ಮುಂದೆ ನೋಡಲಾರ ನೆಂದು ತೋರುವದು. ಈ ಸಾರೆ ನಾವು ಅವನ ಕೊಬ್ಬನ್ನು ಅಡಗಿಸದಿದ್ದರೆ ನಮ್ಮ ಸಾಮ್ರಾಜ್ಯದ ಗೌರವವು ಕಡಿಮೆಯಾಗುವದಲ್ಲದೆ, ಪ್ರಸಂಗವೊದಗಿದರೆ ಕರ್ನಾಟ ಕದ ಸ್ವಾತಂತ್ರ್ಯ ಸಿಂಹಾಸನಕ್ಕೆ ಪಾರತಂತ್ರ್ಯ ಶೃಂಖಲೆಗಳು ತೊಡಿಸಲ್ಪಡುವ ಸಂಭವವಿರುವದು. ಈ ಸಂಧಿಯಲ್ಲಿ ಚಾಲುಕ್ಯ ತೈಲಪದೇವರಾಜರು ರಾಜಧಾನಿ ಯಲ್ಲಿಲ್ಲ. ಗಂಗರಸರಾದ ಮಾರಸಿಂಹರು ತಲಕಾಡಿನಲ್ಲಿರುತ್ತಾರೆ ಸವದತ್ತಿಯ ರಟ್ಟರಸರಾದ ಕಾರ್ತವೀರ್ಯರೇ ಮೊದಲಾದ ಮಹಾಮಂಡಲೇಶ್ವರರು ನೆರವಿಗೆ ಬರುವಷ್ಟು ಅವಕಾಶವು ಉಳಿದಿಲ್ಲ. ಇದೊಂದು ದೊಡ್ಡ ಗಂಡಾಂತರ ಪ್ರಸಂಗವೇ ಒದಗಿತೆಂದು ನನ್ನ ಮನಸ್ಸಿಗೆ ಹೊಳೆಯತೊಡಗಿದೆ. ನೀವೆಲ್ಲರೂ ಐಕ್ಯದಿಂದ ನಡೆದು ಜೀವದ ಹಂಗುದೊರೆದು ಕಾದಿದರೆ ಮಾತ್ರ ನಮಗೆ ಜಯವು ದೊರೆಯುವ ಸಂಭವವುಂಟು. ಈ ಸಂಧಿಯಲ್ಲಿ ತೈಲಪದೇವರಾಜರಿದ್ದರೆ ಇಷ್ಟೊಂದು ವಿಚಾರ ಮಾಡಲಿಕ್ಕೆ ಕಾರಣವಿರಲಿಲ್ಲ. ಅವರು ವಾತಾಪಿಪುರದಿಂದ ಬರುವದರೊಳಗಾಗಿ

ಮುಂಜರಾಜನು ತನ್ನ ಕರ್ತವ್ಯವನ್ನು ಕೊನೆಗಾಣಿಸಬಹುದಾಗಿದೆ. ನಿಜವಾಗಿ ಹೇಳಬೇಕಾದರೆ, ಸದ್ಯದ ಪ್ರಸಂಗದಲ್ಲಿ ನಾನು ಪೂರಾ ದಿಙ್ಮೂಢನಾಗಿರುವೆನು. ನೀವು ನಿಮ್ಮ ಅಭಿಪ್ರಾಯವನ್ನು ನಿಸ್ಪೃಹವೃತ್ತಿಯಿಂದ ತಿಳಿಸಿ, ಕರ್ನಾಟಕ ಸಾಮ್ರಾಜ್ಯದ ಮೇಲೆ ಬಂದ ವಿಪತ್ತನ್ನು ನೀವೆಲ್ಲರೂ ಪರಿಹರಿಸುವಿರೆಂದು ನನ್ನ ಆತ್ಮವಿಶ್ವಾಸವಿರುವದು.''

ಕೊಟ್ಟಿಗದೇವನು ಹೀಗೆ ನುಡಿದ ಕೂಡಲೆ, ಅವನ ತಮ್ಮ ನಿರುಪಮನ ಮಗನಾದ ಕಕ್ಕಲದೇವ ಯುವರಾಜನು ಗಾಂಭೀರ್ಯದಿಂದ ಮಾತನಾಡತೊಡಗಿದನು. "ಕಕ್ಕಾ, ಮುಂಜರಾಜನು ದಂಡೆತ್ತಿ ಬರುವನೆಂಬ ಭಯವನ್ನು ಎಷ್ಟು ಮಾತ್ರವೂ ಹಿಡಿಯಲಾಗದು. ಕರ್ನಾಟಕವು ಇನ್ನೂ ಬಲಹೀನವಾಗಿಲ್ಲ; ರಾಷ್ಟ್ರಕೂಟರ ಬಲವು ಕುಗ್ಗಿಲ್ಲ; ರಾಜಕಾರ್ಯಕರ್ತರು ಅಳಿದೆಯವರಾಗಿಲ್ಲ. ಸಿಯಾಕ ಹರ್ಷನ ಮುತ್ತಿಗೆಯು ಅಕಸ್ಮಾತ್ತಾಗಿ ಬಂದದ್ದರಿಂದ ಆಗ ನಮಗೆ ಅಪಜಯವೊದಗಿತು. ಮುಂಜರಾಜನು ಅವನ ತಂದೆಯಂತೆ ರಾಜಕಾರಣಧುರಂಧರನಿಲ್ಲ. ಅಂತೆಯೇ ಅವನು ತನ್ನ ದಂಡಯಾತ್ರೆಯನ್ನು ಈಗಾಗಲೇ ಪ್ರಕಟಗೊಳಿಸಿರುವನು. ಈ ಸಾರೆಯ ಯುದ್ಧದಲ್ಲಿ ಮಾಳವೆಯರಿಗೆ 'ತ್ರಾಹಿ ಭಗವನ್' ಎಂದೆನ್ನಹಚ್ಚದಿದ್ದರೆ ಕರ್ನಾಟಕ ಸಾಮ್ರಾಜ್ಯದ ಗೌರವವು ತಿಲಾಂಶವಾದರೂ ಉಳಿಯಲಾಗದು. ಈ ಸಮಯದಲ್ಲಿ ತೈಲಪದೇವನು ರಾಜಧಾನಿಯಲ್ಲಿದ್ದರೆ ಒಳಿತಾಗುತ್ತಿತ್ತು. ಮಾರಸಿಂಹ ಮೊದಲಾದ ಮಹಾ. ಮಂಡಲೇಶ್ವರರನ್ನೂ, ಸೇವುಣದ ಮಹಾ ಸಾಮಂತನಾದ ಭಿಲ್ಲಮನನ್ನೂ, ಕದಂಬಲಿಗೆಯ ಸಾಮಂತ ಶ್ರೇಷ್ಠನಾದ ಜಾತರಸನನ್ನೂ, ಎಡೆನಾಡು ಸಾಂತಲಿಗೆಗಳ ಮಂಡಲೇಶ್ವರರಾದ ಕೀರ್ತಿವರ್ಮ-ಶಾಂತಿವರ್ಮರನ್ನೂ, ಕರೆಯಿಸಿಕೊಳ್ಳೋಣ. ಉತ್ತರ ಕೊಂಕಣದ ಸಾಮಂತ ಶ್ರೇಷ್ಠನಾದ ಅಪರಾಜಿತನಿಗೂ, ಕಿಸುಕಾಡು ಬೆಳ್ವೊಳಗಳ ಮಾಂಡಲಿಕನಾದ ಅರಿಕೇಸರಿಗೂ ಈ ವಿಷಯವನ್ನು ತಿಳಿಸಿ, ಶತ್ರುಪ್ರತೀಕಾರಕ್ಕಾಗಿ ಸೈನ್ಯವನ್ನು ತರುವದಕ್ಕಾಗಿ ಆಜ್ಞಾಪಿಸೋಣ. ವಾತಾಪಿ ಪುರದಲ್ಲಿದ್ದ ಎಲ್ಲ ಸೈನ್ಯವನ್ನು ತರುವದಕ್ಕಾಗಿ ತೈಲಪದೇವನಿಗೆ ಇಂದೇ ಪತ್ರ ಬರೆಯಿಸಬೇಕು. ಕರ್ನಾಟಕ ಸಾಮ್ರಾಜ್ಯದೊಳಗಿನ ಎಲ್ಲ ಸಾಮಂತರೂ ಮಂಡಲೇಶ್ವರರೂ ಒಟ್ಟಾದರೆ, ಮದಾಂಧನಾದ ಮುಂಜರಾಜನನ್ನು ಅವನ ಬಲಸಹಿತವಾಗಿ ನಾಶಗೊಳಿಸಬಹುದು. ಎಲ್ಲ ಮಂಡಲೇಶ್ವರರಿಗೆ ಪತ್ರ ಬರೆಯುವದಕ್ಕಾಗಿ ಈಗಲೆ ಕರಣಿಕನಿಗೆ ಆಜ್ಞೆಯಾಗಬೇಕು. ಶೀಘ್ರವಾಗಿ ಹೊರಟು ಬರಬೇಕೆಂದು ಮಾರಸಿಂಹ, ತೈಲಪದೇವರಿಗೆ ತಿಳಿಸತಕ್ಕದ್ದು. ಶತ್ರುಗಳ ಆಗಮನವಾಗುವದಕ್ಕಿಂತ ಮುಂಚಿತವಾಗಿ ನಾವು ಸಂಗ್ರಾಮದ ಸರ್ವ ಸಿದ್ಧತೆಯನ್ನು ಮಾಡಿಕೊಂಡಿರುವದು ಮೇಲು."

ಕಕ್ಕಲದೇವನು ಹೀಗೆ ನುಡಿದು, ತನ್ನಸ್ಥಳದಲ್ಲಿ ಕುಳಿತ ಕೂಡಲೆ, ಸೇನಾಪತಿಯಾದ ಮಂಗಿವರ್ಮನು ತನ್ನ ಸ್ಥಳದಿಂದೆದ್ದು:—ಮಹಾರಾಜರೇ, ಕಕ್ಕಲದೇವ

ಯುವರಾಜರ ಅಭಿಪ್ರಾಯದಂತೆ ಪಾಣಸಿಯರ ಪ್ರತೀಕಾರಕ್ಕಾಗಿ ಕರ್ನಾಟಕ ಸಾಮ್ರಾಜ್ಯದೊಳಗಿನ ಎಲ್ಲ ಮಂಡಲೇಶ್ವರರನ್ನು ಕೂಡಿಸುವದು ಅತ್ಯವಶ್ಯವಿರುವದೆಂಬ ಮಾತಿನಲ್ಲಿ ವಾದವಿಲ್ಲ; ಆದರೆ ಪರಾಕ್ರಮಿಗಳಾದ ರಾಷ್ಟ್ರಕೂಟ ಸಮ್ರಾಟರು ಕೇವಲ ಪರಸಹಾಯ ಪ್ರತೀಕ್ಷೆ ಮಾಡುತ್ತಿರುವರೆಂದು ಜನರ ಭಾವನೆಯಾಗದಂತೆ ವರ್ತಿಸುವದು ನಮ್ಮ ಆವಶ್ಯಕ ಕರ್ತವ್ಯವಿರುವದು. ನಾವು ಮಾರಸಿಂಹ-ಶಾಂತಿವರ್ಮ ಮೊದಲಾದ ಒಬ್ಬಿಬ್ಬರು ಮಹಾಮಂಡಲೇಶ್ವರರನ್ನು ಕರೆಯಿಸಿಕೊಂಡರೆ ಸಾಕು. ಸಾಮ್ರಾಜ್ಯದೊಳಗಿನ ಎಲ್ಲ ಮಂಡಲೇಶ್ವರರನ್ನು ಕರೆಯಿಸಿಕೊಳ್ಳುವಂತಹ ಪ್ರಸಂಗವು ನಮಗೆ ಒದಗಿರುವದಿಲ್ಲ. ತೈಲಪದೇವರಾಜರು ಅತ್ಯಂತ ಉನ್ಮತ್ತರೂ ಸ್ವಾರ್ಥಿಗಳೂ ಇರುವರು. ಅವರು ರಾಷ್ಟ್ರಕೂಟ ಸಾಮ್ರಾಜ್ಯವನ್ನು ನಾಶ ಮಾಡಿ, ತಮ್ಮ ಆಧಿಪತ್ಯದಲ್ಲಿ ಕರ್ನಾಟಕವನ್ನು ತೆಗೆದುಕೊಳ್ಳುವ ಕಾರಸ್ಥಾನವನ್ನು ನಡೆಯಿಸಿರುವದಾಗಿ ತೋರುತ್ತದೆ. ಪುಲಿಕೇಶಿಯು ಎರಡನೆಯ ಅರಿಕೇಸರಿಯು ಅವರಿಗೆ ಈ ಕೆಲಸದಲ್ಲಿ ಸಂಪೂರ್ಣ ಸಹಾಯಕಾರಿಯಾಗಿರುತ್ತಾನೆ ವೆಂಗಿಯ ಚಾಲುಕ್ಯರಾಜನಾದರೂ ಅವರಿಗೆ ಅನುಕೂಲನಿರುವನು. ರಾಷ್ಟ್ರಕೂಟ ಸಾಮ್ರಾಜ್ಯವು ಬಲಹೀನವಾಗಬೇಕೆಂಬ ಉದ್ದೇಶದಿಂದಲೇ ತೈಲಪರಾಜರು ಹಿಂದಿನ ದಾಳಿಯಲ್ಲಿ ಮಾನ್ಯಖೇಟವನ್ನು ತ್ಯಜಿಸಹೋಗಿದ್ದರು ಮುಂಜರಾಜನು ದಾಳಿಮಾಡುವನೆಂಬ ಸುದ್ದಿಯು ಮುಂಚಿತವಾಗಿ ಅವರಿಗೆ ತಿಳಿದಿರಲಿಕ್ಕೆ ಬೇಕು. ಅಂತೆಯೇ ಅವರು ರಾಜಧಾನಿಯ ತ್ಯಾಗ ಮಾಡಿ ವಾತಾಪಿಪುರಕ್ಕೆ ಹೊರಟು ಹೋಗಿರುವರು. ಅವರು ಈ ಕಾರ್ಯದಲ್ಲಿ ಯಾವ ಬಗೆಯ ಸಹಾಯವನ್ನು ಮಾಡಲಾರರೆಂದು ನನಗೆ ತೋರುತ್ತದೆ. ಅವರು ರಾಷ್ಟ್ರಕೂಟರೊಡನೆ ಅಂತಸ್ಥ ವೈರವನ್ನು ತಳೆದಿರುವರೆಂಬದು ನನಗೆ ಮೊದಲೇ ಗೊತ್ತಾಗಿತ್ತು; ಆದರೆ, ಯುವರಾಜ ಕಕ್ಕಲದೇವರಾಜರ ಜಾಮಾತರಾದ ಅವರ ಹುಳುಕು ತೆಗೆದರೆ ರಾಜಕ್ಷೋಭೆಗೆ ಕಾರಣವಾಗಬಹುದೆಂದು ಇಷ್ಟು ದಿನ ಮೌನವನ್ನು ಸ್ವೀಕರಿಸಿದ್ದೆನು. ಇಂದು ಪ್ರಸಂಗಬಂದುದರಿಂದ ಎಲ್ಲ ಸಂಗತಿಗಳನ್ನು ಮಹಾರಾಜರ ಸನ್ನಿಧಿಯಲ್ಲಿ ಅರಿಕೆಮಾಡಿಕೊಂಡಿರುತ್ತೇನೆ. ತೈಲಪರಾಜರು ಸ್ವಾರ್ಥಸಾಧಕರಿರುವದರಿಂದ ನಿಮಗೆ ಅವರು ಯಾವ ಬಗೆಯಿಂದ ಸಹಾಯಮಾಡಲಾರರು; ಒಂದು ವೇಳೆ ಸಹಾಯ ಮಾಡಿದರೆ, ತಾವು ಮಾಡಿದ ಉಪಕಾರದಲ್ಲಿ ಕರ್ನಾಟಕ ಸಾಮ್ರಾಜ್ಯ ಸಿಂಹಾಸನವನ್ನೇ ನುಂಗಿನೀರು ಕುಡಿಯುವ ಸಾಹಸಮಾಡುವದು ನಿಶ್ಚಿತವು!"

ಮಂಗಿವರ್ಮನ ಮಾತುಗಳು ರಾಷ್ಟ್ರಕೂಟ ಮಂತ್ರಿಯಾದ ಮುದ್ದಣದೇವನ ಹೊರತು ಉಳಿದವರಿಗೆ ಸರಿಯಾಗಿ ತೋರಿದವು. ತೈಲಪನು ಮೆಲ್ಲಮೆಲ್ಲನೆ ವಾತಾಪಿಪುರದ ರಾಜ್ಯವಿಸ್ತಾರ ಮಾಡತೊಡಗಿದ್ದರಿಂದಲೂ, ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿಯ ಮಂಡಲೇಶ್ವರರನ್ನು ಒಡೆದುಕೊಳ್ಳುತ್ತ ರಾಜ್ಯದಲ್ಲಿ ತನ್ನ ವರ್ಚಸ್ವವನ್ನು ಪ್ರಸ್ಥಾಪಿಸಲಾರಂಭಿಸಿದ್ದರಿಂದಲೂ ಅವನ ವಿಷಯವಾಗಿ ಕೊಟ್ಟಿಗ-ಕಕ್ಕಲದೇವರಾಜರು ಅಸಂ

ತಪ್ಪ ಮನೋವೃತ್ತಿಯವರಾಗಿದ್ದರು. ಕರ್ನಾಟಕ ಸಾಮ್ರಾಜ್ಯವು ಉತ್ತರಾಪಥ ದವರ ದಾಳಿಗೆ ತಡೆದು ನಿಲ್ಲಬೇಕೆಂದೂ, ಅದು ಯಾವಾಗಲೂ ಸ್ವಾತಂತ್ರ್ಯಸೌಖ್ಯ ಗಳನ್ನು ಹೊಂದುತ್ತಿರಬೇಕೆಂದೂ ತೈಲಪನ ಯತ್ನವಿತ್ತು. ಅದಕ್ಕಾಗಿ ಅವನು ಸಾಮ್ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವದಕ್ಕಾಗಿ ವ್ಯಾಹತಿಯಿಲ್ಲದೆ ಯತ್ನಿ ಸುತ್ತಿದ್ದನು. ಇತ್ತೀಚೆಗೆ ಅವನ ವರ್ತನವು ರಾಜಪರಿವಾರದಲ್ಲಿಯ ಅನೇಕ ಜನರಿಗೆ ಸಂಶಯಾಸ್ಪದನಾಗಿ ಪರಿಣಮಿಸಿತ್ತು. ಕೊಟ್ಟಿಗ-ಕಕ್ಕಲದೇವರಾಜರು ದುರ್ಬಲರಿರುವದರಿಂದ, ಕರ್ನಾಟಕ ಸಾಮ್ರಾಜ್ಯವನ್ನು ನುಂಗುವದಕ್ಕಾಗಿ ತೈಲಪ ದೇವನು ಸಾಹಸಮಾಡುತ್ತಿರುವನೆಂದು ಬಹುಜನರ ಗ್ರಹಿಕೆಯಾಗಿತ್ತು. ರಾಷ್ಟ್ರ ಕೂಟದ ದಂತಿದುರ್ಗನು ತನ್ನ ಮಾವನ ಸಾಮ್ರಾಜ್ಯವನ್ನು ಕಿತ್ತುಕೊಂಡದ್ದರ ಸೇಡ ನ್ನು ಚಾಲುಕ್ಯತೈಲಪದೇವನು ತನ್ನ ಮಾವನ ಸಾಮ್ರಾಜ್ಯವನ್ನು ಕಿತ್ತುಕೊಂಡು ತೀರಿಸಿಕೊಳ್ಳುವನೆಂದು ಸಾಮ್ರಾಜ್ಯವಾಸಿಗಳು ತಮ್ಮ ತಮ್ಮೊಳಗೆ ಮಾತನಾಡತೊಡ ಗಿದ್ದರು ಸಿಯಾಕಹರ್ಷಪರಮಾರನು ರಾಜಧಾನಿಯನ್ನು ಸುಲಿದುಕೊಂಡು ಹೋದದ್ದರ ಸೇಡು ತೀರಿಸಿಕೊಳ್ಳದೆ ತಟಸ್ಥವೃತ್ತಿಯನ್ನಂಗೀಕರಿಸಿದ ತೈಲಪದೇವ ನನ್ನು ಎಷ್ಟೋ ಜನರು ನಿಂದಿಸತೊಡಗಿದ್ದರು ಮುಂಜರಾಜನು ಮಾನ್ಯಖೇಟ ವನ್ನು ಮುತ್ತುವದಕ್ಕಾಗಿ ಧಾರಾನಗರಿಯಿಂದ ಹೊರಟ ಸುದ್ದಿಯನ್ನು ಕೇಳಿಯೆ, ಅವನು ತನ್ನ ಪರಿವಾರ ಸಹಿತವಾಗಿ ಹೊರಟು ಹೋಗಿರುವನೆಂದು ಓಲಗದ ಬಹು ಜನರು ತಿಳಿದುಕೊಂಡಿದ್ದರು. ತಮ್ಮ ಮನಸ್ಸಿಗೆ ತಿಳಿದ ಸಂಗತಿಯನ್ನು ಬಾಯಿಂದ ಆಡಿ ತೋರಿಸಲಿಕ್ಕೆ ಎಲ್ಲ ಜನರು ಹೆದರಿಕೊಂಡಿದ್ದರು. ಸೇನಾಪತಿಯಾದ ಮಂಗಿ ವರ್ಮನು ಮಾತ್ರ ಧೈರ್ಯವನ್ನು ತಂದುಕೊಂಡು, ತೈಲಪನ ವಿಷಯವಾಗಿ ತನ್ನ ಮನೋಗತವನ್ನು ಸಾರ್ವಭೌಮನಾದ ಕೊಟ್ಟಿಗದೇವನ ಕಿವಿಯ ಮೇಲೆ ಹಾಕಿದನು.

ಮಂಗಿವರ್ಮನ ಅಭಿಪ್ರಾಯವು ತೀರ ಅಯೋಗ್ಯವಾದದ್ದೆಂದು ಮುದ್ದಣದೇವ ಮಂತ್ರಿಯು ತಿಳಿದನು. ತೈಲಪದೇವನ ಕರ್ತವ್ಯಪ್ರಭಾವವೂ ನಿಃಸ್ವಾರ್ಥಕರ್ಮವೂ ಗುಣಗ್ರಾಹಿಯಾದ ಮಂತ್ರಿಗೆ ಗೊತ್ತಾಗಿದ್ದವು. ಆಗ ಅವನು ಕೊಟ್ಟಿಗದೇವನನ್ನು ಕರೆದು "ಮಹಾರಾಜರೆ, ಸೇನಾಪತಿಗಳು ಸಾರಾಸಾರ ವಿಚಾರ ಮಾಡದೆ ಮಾತನಾಡಿರು ವರು. ತೈಲಪದೇವರಾಜರ ವಿಷಯವಾಗಿ ಹೇಳಿದ ಮಂಗಿವರ್ಮರ ಅಭಿಪ್ರಾಯವು ತೀರ ಹುರುಳಿಲ್ಲದ್ದೂ ನಿರಾಧಾರವೂ ಆಗಿರುವದು. ಸಾಮ್ರಾಜ್ಯದೊಳಗಿನ ಕೆಲವು ಜನರ ಮತವಾದರೂ ಮಂಗಿವರ್ಮರ ಅಭಿಪ್ರಾಯದಂತೆಯೇ ಇರುವದೆಂದು ನಾನು ಅರಿತಿರುವೆನು. ರಾಜಕಾರಣದಲ್ಲಿ ಅನನುಭವಿಕರಾಗಿದ್ದ ಜನರು ಹೇಗೆ ಮಾತನಾಡಿ ದರೂ ಒಂದು ವೇಳೆ ಕ್ಷಮ್ಯವಾಗಬಹುದು. ತೈಲಪದೇವರಾಜರ ಸಹವಾಸದಲ್ಲಿರುವ ವರೂ ರಾಜಕಾರಣದಲ್ಲಿ ನುರಿತವರೂ ಆದ ಸೇನಾಪತಿಗಳು ಸಾಮಾನ್ಯ ಜನರಂತೆ ಮಾತನಾಡಿದ್ದನ್ನು ಕೇಳಿ ನನಗೆ ವಿಸ್ಮಯವೆನಿಸುತ್ತದೆ. ತೈಲಪದೇವರಾಜರು

ಕರ್ನಾಟಕ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ಸಾಹಸ ಮಾಡುತ್ತಿರುವರೆಂಬ ವಿಷಯವು ನಿಮಗೆ ಅರಿಯದಿರುವದಿಲ್ಲ. ಅವರ ಕರ್ತವ್ಯ ಪ್ರಭಾವದಿಂದ ಮಲೆತುನಿಂತ ಮಹಾಮಂಡಲೇಶ್ವರರೂ ಸಾಮಂತರೂ ಸಾಮ್ರಾಜ್ಯಕ್ಕೆ ಅಂಕಿತರಾಗಿರುವರು. ಮಾಳವೆಯರ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ಅವರ ಪ್ರಯತ್ನವಿರುವದು. ಉತ್ತರಾಪಥದ ಮೇಲೆ ದಾಳಿ ಮಾಡಬೇಕಾದರೆ ಸಾಕಷ್ಟು ಸೇನಾಸನ್ನಾಹವಿಲ್ಲದಿದ್ದರೆ ಹೇಗೆ? ಅದಕ್ಕಾಗಿಯೇ ಅವರು ಕಾಲಕ್ಷೇಪ ಮಾಡತೊಡಗಿರುವರೆಂಬ ಮಾತಿನಲ್ಲಿ ಸಂದೇಹವಿಲ್ಲ. ಮುಂಜರಾಜನು ದಂಡೆತ್ತಿ ಬರುವನೆಂಬ ಸಂಗತಿಯನ್ನು ಕೇಳಿದ್ದರೆ, ಅವರು ರಾಜಧಾನಿಯನ್ನು ಬಿಟ್ಟು ಎಂದೂ ತೆರಳುತ್ತಿದ್ದಿಲ್ಲ. ಕರ್ನಾಟಕ ಸಾಮ್ರಾಜ್ಯದ ವಿಷಯಕ್ಕೆ ಅವರಲ್ಲಿ ವಾಸವಾಗಿದ್ದ ಸದಭಿಮಾನವು ಅವರ್ಣನೀಯವಿರುವದು. ಸಾಮ್ರಾಜ್ಯದಲ್ಲಿ ಸುಖ-ಶಾಂತಿಗಳು ನೆಲೆಗೊಳ್ಳುವದಕ್ಕಾಗಿ ಅವರು ದೀರ್ಘಸಾಹಸಮಾಡುತ್ತಿರುವರು. ಮಾಳವರಾಜನಾದ ಮುಂಜರಾಜನನ್ನು ಸಾಮೋಪಾಯದಿಂದ ಸ್ನೇಹಾಂಕಿತನನ್ನಾಗಿ ಮಾಡಿಕೊಳ್ಳಬೇಕೆಂದೂ, ಅವನು ಈ ಹಂಚಿಕೆಯಿಂದ ಮಣಿಯದಿದ್ದರೆ ದಂಡೋಪಾಯವನ್ನು ಕೈಕೊಳ್ಳಬೇಕೆಂದೂ ಅವರು ನಿರ್ಧರಿಸಿರುವರು ವಸ್ತುಸ್ಥಿತಿಯು ಹೀಗಿರಲು, ನಿರ್ದೋಷಿಗಳಾದ ಅವರ ಮೇಲೆ ಮಿಥ್ಯಾರೋಪಣೆ ಮಾಡುವದು ಅನ್ಯಾಯುವೆಂದು ನನ್ನ ಮನಸ್ಸಿಗೆ ಹೊಳೆಯುವದು. ನೀವು ಅವರಿಗೆ ಮುಂಜರಾಜನ ದಂಡಯಾತ್ರೆಯ ವಾರ್ತೆಯನ್ನು ತಿಳಿಸಿದ ಕೂಡಲೆ ವಾತಾಪಿಪುರದಿಂದ ಹೊರಟು ಬರುವರು."

ಮಂತ್ರಿಯ ಭಾಷಣವು ಕಕ್ಕದೇವನ ಬಂಧುವಾದ ಬಪ್ಪುವದೇವನಿಗೆ ರುಚಿಸಲಿಲ್ಲ ಆಗ ಅವನು ತನ್ನ ಕರ್ಕಶವಾಣಿಯಿಂದ:—"ಮಂತ್ರಿಗಳೆ, ನೀವು ತೈಲಪದೇವನ ಹಸ್ತಕರಿರುವಂತೆ ಕಾಣುವದು. ಕಾರ್ಯಸಾಧಕನಾದ ತೈಲಪನ ತಂತ್ರವು ನಿಮತೆ ಹೇಗೆ ಗೊತ್ತಾಗಬೇಕು? ಕರ್ನಾಟಕ ಸಾಮ್ರಾಜ್ಯದ ಏಳ್ಗೆಗಾಗಿ ಸಾಹಸ ಮಾಡಲಿಕ್ಕೆ ಅವನು ಎಷ್ಟರವನು? ರಾಷ್ಟ್ರಕೂಟ ಸಮ್ರಾಟರು ಕೈಯಲ್ಲ ಬಳೆಗಳನ್ನಿಟ್ಟಿರುವದಿಲ್ಲ. ಹಿಂದೆ ಒಂದು ವೇಳೆ ಅಪಜಯವಾದದ್ದಕ್ಕಾಗಿ ಯಾರೂ ಎದೆಯೊಡೆಯುವ ಕಾರಣವಿಲ್ಲ. ಈ ಸಾರೆ ಮುಂಜನ ಮದವನ್ನಿಳಿಸದಿದ್ದರೆ ರಾಜಮನೆತನದಲ್ಲಿ ಹುಟ್ಟಿ ಪ್ರಯೋಜನವೇನು? ತೈಲಪನು ಹೇಗಿದ್ದರೂ ಅಲ್ಲಿಯೆ ಇರಲೊಲ್ಲನೇಕೆ? ನಮಗೆ ಅವನ ಸಹಾಯದ ಆವಶ್ಯಕತೆಯಿಲ್ಲ"

"ಹೀಗೆ ದುಡುಕು ಮಾತುಗಳನ್ನಾಡುವದು ಯೋಗ್ಯವಲ್ಲ. ನಾವು ಒಂದು ಸಾರೆ ಪೆಟ್ಟು ತಿಂದಿರುವೆವು. ಮಾರಸಿಂಹ-ತೈಲಪದೇವ ಮೊದಲಾದ ವೀರರನ್ನು ಶೀಘ್ರವಾಗಿ ಕರೆಯಿಸಿಕೊಳ್ಳುವದು ಯೋಗ್ಯವೆಂದು ನನಗೆ ತಿಳಿಯುತ್ತದೆ."

ಮುದ್ದಣದೇವನು ಹೀಗೆ ಹೇಳುವಷ್ಟರಲ್ಲಿ ಒಬ್ಬ ಗುಪ್ತಚರನು ಧಾವಿಸುತ್ತ ಅಲ್ಲಿಗೆ ಬಂದು:—"ಜೀಯಾ! ಪರಮಾರ ಮುಂಜರಾಜನು ಅಸಂಖ್ಯ ಸೇನೆಯೊಡನೆ ರಾಜಧಾನಿಯನ್ನು ಸಮೀಪಿಸಿರುವನು."

ಗುಪ್ತಚರನು ಹೇಳಿದ ವಾರ್ತೆಯಿಂದ ಓಲಗಮೊಳಗಿನ ಪ್ರತಿಯೊಬ್ಬ ಮನುಷ್ಯನ ಮುಖವು ಕಳೆಗುಂದಿತು. ದೊಡ್ಡ ದೊಡ್ಡ ಮಾತುಗಳನ್ನಾಡುವ ಬಪ್ಪುವದೇವನ ಎದೆಯು 'ಧಕ್-ಧಕ್' ಹಾರಲಾರಂಭಿಸಿತು. ಕೊಟ್ಟಿಗ-ಕಕ್ಕಲದೇವ ಮಹಾರಾಜರ ಸ್ಥಿತಿಯಾದರೂ ಅದರಂತೆಯೇ ಆಯಿತು. ಕೂಡಲೆ ಅವರು ತೈಲಪದೇವ, ಮಾರಸಿಂಹ, ಶಾಂತಿವರ್ಮ ಮೊದಲಾದವರನ್ನು ಕರೆತರುವದಕ್ಕಾಗಿ ಸ್ವಾರರನ್ನು ಕಳುಹಿಸಿದರು. ಕೋಟೆಯ ಭದ್ರತೆಗಾಗಿ ಮಂಗಿವರ್ಮ, ಬಪ್ಪುವದೇವ ಮೊದಲಾದ ಸೇನಾನಾಯಕರಿಗೆ ಆಜ್ಞೆಯಾಯಿತು.

ಮಂತ್ರಿ-ಸೇನಾಪತಿಗಳೂ, ರಾಜಕುಮಾರರೂ ಮಾನ್ಯಖೇಟ ರಾಜಧಾನಿಯಲ್ಲಿ ಯುದ್ಧದ ಸಿದ್ಧತೆಯನ್ನು ಭರದಿಂದ ನಡೆಯಿಸಿದರು ಮಂಗಿವರ್ಮ, ಬಪ್ಪುವದೇವ ಮೊದಲಾದ ಶೂರಸೇನಾಪತಿಗಳು ನುರಿತ ದಂಡಾಳುಗಳನ್ನು ತೆಗೆದುಕೊಂಡು ಕೋಟೆಯನ್ನು ನೇರಿದರು. ಶತ್ರುಗಳ ಕೈಯಲ್ಲಿ ಸಿಲುಕಿ ಕುರಿಗಳಂತೆ ಕೊಯ್ಸಿಕೊಂಡು ಸಾಯುವದಕ್ಕಿಂತಲೂ, ಯುದ್ಧಮಾಡಿ ಮಡಿಯುವದು ಮೇಲೆಂದು ತಿಳಿದು, ಎಷ್ಟೋ ಪ್ರಜಾಜನರು ಕಾಳಗಕ್ಕೆ ಅಣಿಯಾದರು. ರಾಜಧಾನಿಯ ರಕ್ಷಣೆಗಾಗಿ ಕಕ್ಕಲದೇವನು ಕೆಲವು ಭಟರೊಡನೆ ಟೊಂಕಕಟ್ಟಿದನು. ಹಿಂದೆಯೊಮ್ಮೆ ಮಾಳವೆಯರಿಂದ ಪೆಟ್ಟುತಿಂದಿದ್ದ ರಾಷ್ಟ್ರಕೂಟರು ಬಹಳವಾಗಿ ಎದೆಗುಂದಿದ್ದರು. ಕೊಟ್ಟಿಗದೇವನು ಗಂಗವಾಡಿಯ ಮಾರಸಿಂಹನ ಹಾಗು ತೈಲಪದೇವನ ಆಗಮನವನ್ನು ಒಳ್ಳೆಯ ಆತುರತೆಯಿಂದ ನಿರೀಕ್ಷಿಸತೊಡಗಿದ್ದನು, ಆದರೆ ಅವನ ಇಚ್ಛೆಯು ಮಾತ್ರ ಈಡೇರಲಿಲ್ಲ. ಮಾಳವೆಯರ ಸೈನ್ಯವು ರಾಜಧಾನಿಯನ್ನು ಸಮೀಪಿಸಿರುವದೆಂದು ಗುಪ್ತಚರನೊಬ್ಬನು ಕೊಟ್ಟಿಗದೇವನಿಗೆ ತಿಳಿಸಿದನು. ಮುಂದೆ ಸ್ವಲ್ಪ ವೇಳೆಯಲ್ಲಿ ಕೋಟೆಯ ಸುತ್ತಲೂ ವೈರಿಗಳ ಪ್ರಚಂಡವಾದ ಜಯಘೋಷವು ಕೇಳಲಾರಂಭಿಸಿತು.

ಕನ್ನಡಿಗರಿಗೂ ಮಾಳವೆಯರಿಗೂ ನಿಕರವಾದ ಸಂಗ್ರಾಮವು ಪ್ರಾರಂಭವಾಯಿತು. ಮಾಳವೆಯರ ಸೈನ್ಯವು ಕನ್ನಡಿಗರ ಸೈನ್ಯಕ್ಕಿಂತ ಬಹಳೇ ದೊಡ್ಡದಾಗಿತ್ತು. ರಾಜಪುತ್ರರ ಹಾಗು ಮಂಗಿಸೇನಾಪತಿಯ ದುರ್ಲಕ್ಷ್ಯದಿಂದ ಸಹಾಯಕ ಸೇನೆಯನ್ನು ತರಿಸುವದಾಗಿಲ್ಲ. ವೈರಿಗಳನ್ನು ಅರೆಕ್ಷಣದಲ್ಲಿ ನಾಶಗೊಳಿಸುವೆವೆಂದು ಕಕ್ಕಲದೇವನೂ, ಬಪ್ಪುವನೂ ಭಾವಿಸಿಕೊಂಡಿದ್ದರು. ಸ್ವಲ್ಪ ವೇಳೆಯ ವರೆಗೆ ಕಾಳಗವು ನಡೆಯುತ್ತಿರಲ್ಲಿ ಅವರ ಭ್ರಮೆಯು ಬಯಲಾಯಿತು. ಮುಂಜರಾಜನೂ ಮಾಳವಸೇನಾಪತಿಯಾದ ವೀರಸೇನನೂ ತಮ್ಮ ಸೈನ್ಯದೊಡನೆ ಕೋಟೆಯಲ್ಲಿ ನುಗ್ಗುವ ಸಾಹಸವನ್ನು ನಡೆಯಿಸಿದರು. ಕನ್ನಡಿಗರು ಏರಿಬರುವ ಮಾಳವೆಯರನ್ನು ಒಳ್ಳೆಯ ಶಕ್ತಿಯಿಂದ ಹಿಂದೆ ನೂಕುತ್ತಿದ್ದರು. ಕನ್ನಡಿಗ-ಮಾಳವೆಯರಲ್ಲಿ ಕೆಲವು ಗಳಿಗೆಗಳ ವರೆಗೆ ಒಳ್ಳೇ ನಿಕರವಾದ ಸಂಗ್ರಾಮವು ನಡೆಯಿತು. ಮಾಳವ ಸೇನಾಪತಿಯಾದ ವೀರಸೇನನು ತನ್ನ ಸೈನ್ಯದೊಳಗಿನ ಕೆಲವು ನಾಮಾಂಕಿತ ದಂಡಾ

ಟಗಳನ್ನು ತಗೆದುಕೊಂಡು ಕೋಟೆಯ ಗೋಡೆಯನ್ನೇರುವ ಸಾಹಸ ನಡೆಯಿಸಿದನು. ಕೊನೆಗೆ ಸಾಹಸಿಗರಾದ ಮಾಳವೆಯರು ಕೋಟೆಯ ಗೋಡೆಯನ್ನೇರಿ ಒಳಗೆ ಇಳಿದು, ಅಲ್ಲಿಯ ಕನ್ನಡ ದಂಡಾಳುಗಳನ್ನು ತುಂಡರಿಸುತ್ತ, ಕೋಟೆಯ ಬಾಗಿಲನ್ನು ತೆರೆದು ಬಿಟ್ಟರು! ಕೋಟೆಯ ಬಾಗಿಲು ತೆರೆದ ಕೂಡಲೆ ಮಾಳವೆಯರ ಸೇನಾಸಾಗರವು ಒಳಗೆ ಪ್ರವೇಶಿಸಿತು ಕಕ್ಕಲ-ಬಪ್ಪುವ-ಮಂಗಿವರ್ಮ ಮೊದಲಾದ ಸೇನಾನಾಯಕರು ಶತ್ರುಗಳನ್ನು ಹಿಂದೆ ಸರಿಸುವದಕ್ಕಾಗಿ ಬಹಳೇ ಸಾಹಸ ಮಾಡಿದರು; ಆದರೆ ಅವರ ಶ್ರಮವು ವ್ಯರ್ಥವಾಯಿತು. ಮಾಳವೆಯರ ಹೊಡತದಿಂದ ಕನ್ನಡಿಗರ ಸೇನೆಯು ದಿಕ್ಕಾಪಾಲಾಗಿ ಓಡಲಾರಂಭಿಸಿತು. ಶತ್ರುಗಳಿಂದ ರಾಜಧಾನಿಯ ರಕ್ಷಣೆಯಾಗಬೇಕೆಂಬ ಇಚ್ಛೆಯಿಂದ ಮುದ್ದಣದೇವ ಮಂತ್ರಿಯು ಕೆಲವು ಶೂರ ದಂಡಾಳುಗಳೊಡನೆ ಕಾಳಗಕ್ಕೆ ಅಣಿಯಾದನು. ಮಂಗಿವರ್ಮ-ಕಕ್ಕಲರು ತಮ್ಮ ಭಗ್ನಾವಶೇಷದಳದೊಡನೆ ಮುದ್ದಣದೇವನನ್ನು ಕೂಡಿದರು. ಮುಂಜರಾಜನು ಅಲ್ಪ ಸಂಖ್ಯಾಕವಾದ ರಾಷ್ಟ್ರಕೂಟ ಸೈನ್ಯವನ್ನು ಸ್ವಲ್ಪ ವೇಳೆಯಲ್ಲಿ ನಾಶಗೊಳಿಸಿದನು.

ಕನ್ನಡಿಗರ ಹಾಗು ಮಾಳವೆಯರ ಹೋರಾಟದಲ್ಲಿ ಮಾಳವೆಯರ ಕೊರಳಲ್ಲಿ ವಿಜಯಶ್ರೀಯು ವಿಜಯಮಾಲೆಯನ್ನು ಹಾಕಿದಳು. ವಿಜಯಿವೀರನಾದ ಮುಂಜರಾಜನು ರಾಜಧಾನಿಯನ್ನು ಸುಲಿಯುವದಕ್ಕಾಗಿ ಸೈನ್ಯಕ್ಕೆ ಆಜ್ಞಾಪಿಸಿದನು. ಮೊಳಲಲ್ಲಿ ಹಾಹಾಕಾರವು ಪ್ರಾರಂಭವಾಯಿತು. ಎಷ್ಟೋ ಜನರು ಜೀವದಾಶೆಯಿಂದ ಪುರವನ್ನು ಬಿಟ್ಟು ಓಡತೊಡಗಿದರು. ಎಷ್ಟೋ ಜನರು ತಮ್ಮ ಹೆಂಡಿರು-ಮಕ್ಕಳ ಹಾಗು ಸಿರಿ ಸಂಪತ್ತಿನ ರಕ್ಷಣೆಗಾಗಿ ಶತ್ರುಗಳೊಡನೆ ಕಾದಿ ಮಡಿದರು. ಪತಿವ್ರತೆಯರು ತಮ್ಮ ಪಾವಿತ್ರ್ಯರಕ್ಷಣೆಗಾಗಿ ಕೆರೆ-ಬಾವಿಗಳ ಪಾಲಾದರು; ಎಷ್ಟೋ ಜನರು ಪ್ರಖರವಾದ ವಿಷವನ್ನು ಕುಡಿದು ಮರಣಹೊಂದಿದರು. ಪರದೇಶಿಗಳಾದ ಮಕ್ಕಳು, ವಿಧವೆಗಳಾದ ಹೆಂಗಸರು, ಗಾಯಹೊಂದಿದ ಜನರು ಇವರೆಲ್ಲರ ಗೋಳಾಟವು ಊರಲ್ಲೆಲ್ಲ ಕೇಳಬರುತ್ತಿತ್ತು ನಿರಂಕುಶರಾದ ಮಾಳವೆಯರು ಕರ್ನಾಟಕದ ರಾಜಧಾನಿಯಾದ ಮಾನ್ಯಖೇಟದಲ್ಲಿ ಮಾಡಿದ ಕೊಲೆ-ಸುಲಿಗೆಗಳನ್ನು ವರ್ಣಿಸಲಳವಲ್ಲ.

ವಿಜಯಪ್ರಮತ್ತನಾದ ಮುಂಜರಾಜನು ರಾಜಧಾನಿಯನ್ನು ಸುಲಿದು ಸೂರೆಗೊಳಿಸುತ್ತ ಅರಮನೆಯ ವರೆಗೆ ಬಂದನು. ಇಷ್ಟರಲ್ಲಿ ಕರ್ನಾಟರ ಸಮ್ರಾಟನಾದ ಕೊಟ್ಟಿಗದೇವನು ಭಯಂಕರವಾದ ಅಪಜಯದ ವಾರ್ತೆಯನ್ನು ಕೇಳಿ ಎದೆಯೊಡೆದುಕೊಂಡು ಪ್ರಾಣ ಬಿಟ್ಟಿದ್ದನು. ಕಕ್ಕಲದೇವ-ಬಪ್ಪವರು ಎಲ್ಲಿಯೋ ಮಾಯವಾಗಿದ್ದರು. ಮಂಗಿವರ್ಮ ಸೇನಾಪತಿಯ ಸೊಲ್ಲೇ ಇದ್ದಿಲ್ಲ. ರಾಜಪರಿವಾರವೆಲ್ಲವೂ ಗುಪ್ತಮಾರ್ಗದಿಂದ ರಾಜಧಾನಿಯನ್ನು ತ್ಯಜಿಸಿ ಹೊರಟು ಹೋಗಿತ್ತು. ರಾಜಭಾಂಡಾರವನ್ನು ಸುಲಿದು, ಕರ್ನಾಟಕ ಸಿಂಹಾಸನವನ್ನು ಉಧ್ವಸ್ತಗೊಳಿಸಬೇಕೆಂದು ಮುಂಜರಾಜನು ಆತುರಗೊಂಡಿದ್ದನು. ಅವನು ಕೋಶಾಗಾರವನ್ನು ಪ್ರವೇಶಿಸಿದ ಕೂಡಲೆ ಅವನ ಗುಪ್ತಚರನೊಬ್ಬನು ಅಲ್ಲಿಗೆ ಬಂದು:—"ಮಹಾರಾಜರೆ,

ವಾತಾಪಿಪುರದ ತೈಲಪದೇವ, ಗಂಗರಸನಾದ ಮಾರಸಿಂಹ, ಸವದತ್ತಿಯ ರಟ್ಟ ಸಾಮಂತನಾದ ಶಾಂತಿವರ್ಮ, ಪುಲಿಗೆರೆಯ ಅರಿಕೇಸರಿ ಮೊದಲಾದ ಕನ್ನಡ ಪರಾಕ್ರಮಿಗಳು ಅಸಂಖ್ಯ ಸೇನೆಯೊಡನೆ ರಾಜಧಾನಿಯನ್ನು ಸಮೀಪಿಸಿರುವರು. ಅವರ ಸೈನ್ಯವು ನಮ್ಮ ಸೈನ್ಯದ ಹತ್ತುಪಟ್ಟಾಗಿರುವದು. ಆ ಸೈನ್ಯವು ನಮ್ಮ ಸೈನ್ಯವನ್ನು ಮುತ್ತಿತೆಂದರೆ ಪರಿಣಾಮವು ಒಳಿತಾಗಲಾರದು. ದೊರೆತ ಸುಲಿಗೆಯಿಂದ ಸಂತುಷ್ಟರಾಗಿ ಇಲ್ಲಿಂದ ಹೊರಡುವದು ಮೇಲು. ಹಾಗೆ ಮಾಡದಿದ್ದರೆ ಧಾರಾನಗರಿಗೆ ಸುದ್ದಿ ಒಯ್ಯಲಿಕ್ಕೆ ಸಹ ಒಬ್ಬನಾದರೂ ಉಳಿಯಲಿಕ್ಕಿಲ್ಲ."

ಮುಂಜರಾಜನು ವಿಜಯದಿಂದ ಉನ್ಮತ್ತನಾಗಿದ್ದನು; ಸುಲಿಗೆಯಿಂದ ಸಂತುಷ್ಟನಾಗಿದ್ದನು. ತೈಲಪದೇವ ಮಾರಸಿಂಹ ಮೊದಲಾದ ಕರ್ನಾಟಕದ ಮಂಡಲೇಶ್ವರರು ಹೇರಳವಾದ ದಂಡಿನೊಡನೆ ಬರುವರೆಂಬ ವಾರ್ತೆಯನ್ನು ಕೇಳಿದೊಡನೆಯೆ ಅವನ ವಿಜಯಾನಂದವೂ ವೈಭವಲಾಭದಿಂದಾದ ಸಂತೋಷವೂ ನಾಶವಾದವು; ಕರ್ನಾಟಕದ ರಾಜಧಾನಿಯಾದ ಮಾನ್ಯಖೇಟದ ಸುಲಿಗೆ ಮಾಡಿದೆನೆಂಬ ಕೊಬ್ಬು ಅಡಗಿತು. ಹುಲಿಯಂತೆ ಗರ್ಜಿಸುತ್ತಿದ್ದ ಮಾಳವೆಯರ ರಾಜನು ನರಿಯಂತೆ ಕಿರಿಚುತ್ತ ಮಾನ್ಯಖೇಟದ ರಾಜಧಾನಿಯಿಂದ ಕಾಲ್ತೆಗೆಯುವ ಉದ್ಯೋಗದಲ್ಲಿ ತೊಡಗಿದನು!

## ಎಲಾ! ಎಲ್ಲಿಗೆ ಹೋಗುವೆ?

ತೈಲಪದೇವನು ತನ್ನ ಮಂತ್ರಿ ಸೇನಾಪತಿಗಳಾದ ರಾಮನಾಥ ಸಿದ್ಧಸೇನರೊಡನೆ ರಾಜಕಾರಣದ ವಿಷಯವಾಗಿ ಮಾತನಾಡುತ್ತ ಅರಮನೆಯಲ್ಲಿ ಕುಳಿತಿದ್ದನು. ಸಿಯಾಕಹರ್ಷ-ಪರಮಾರನು ಮಾನ್ಯಖೇಟವನ್ನು ಸುಲಿದಾಗಿನಿಂದ ತೈಲಪದೇವನ ಮನಃಸ್ಥಿತಿಯು ಕ್ಷುಬ್ಧವಾಗಿತ್ತು. ರಾಷ್ಟ್ರಕೂಟ ಸಾರ್ವಭೌಮನಾದ ಕೊಟ್ಟಿಗದೇವನೂ ಯುವರಾಜನಾದ ಕಕ್ಕಲನೂ ನಿರ್ಬಲರಾಗಿದ್ದುದರಿಂದ ಕರ್ನಾಟಕ ಸಾಮ್ರಾಜ್ಯದ ಕಟ್ಟುಗಳು ಸಡಿಲಾಗತೊಡಗಿರುವದು ಅವನ ನಿದರ್ಶನಕ್ಕೆ ಬಂದಿತ್ತು. ಪ್ರಮತ್ತನಾದ ರಾಷ್ಟ್ರಕೂಟ ಸಾರ್ವಭೌಮನೂ ರಾಜಕುಮಾರರಾದ ಕಕ್ಕಲ-ಬಪ್ಪವರೂ ದುರಭಿಮಾನಿಗಳಿದ್ದುದರಿಂದ, ಅವರು ಓಲಗದೊಳಗಿನ ರಾಜಕಾರಣಧುರಂಧರರಾದ ಮಂತ್ರಿ ಸೇನಾನಾಯಕರ ಹಾಗು ಸಾಮ್ರಾಜ್ಯದೊಳಗಿನ ಮಂಡಲೇಶ್ವರರ ಹಿತೋಕ್ತಿಗಳನ್ನು ಪೂರಾ ದುರ್ಲಕ್ಷಿಸುತ್ತಿದ್ದರು. ಉತ್ತರಾಪಥದ ಒಬ್ಬ ಯಃಕಶ್ಚಿತ್ ರಾಜನು ಮಾನ್ಯಖೇಟದಂತಹ ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯನ್ನು ಸುಲಿದು ಕೊಂಡು ಹೋದಮೇಲೆ ಸಾಮ್ರಾಜ್ಯದ ಗೌರವವು ನಾಶವಾಗದೆ ಹೇಗೆ ಉಳಿದೀತೆಂದು ಅವನು ಚಿಂತಾಕ್ರಾಂತನಾಗಿದ್ದನು. ನಿರ್ಬಲರಾದ ರಾಷ್ಟ್ರಕೂಟರ ಆಳಿಕೆಯು

ಕರ್ನಾಟಕ ಸಾಮ್ರಾಜ್ಯದಲ್ಲಿ ಉಳಿದರೆ, ಕೆಲವು ವರ್ಷಗಳಲ್ಲಿ ಉತ್ತರಾಪಥದವರು ದಕ್ಷಿಣಾಪಥವನ್ನು ನುಂಗಿ ನೀರು ಕುಡಿಯುವರೆಂಬ ಚಿಹ್ನವು ದೂರದರ್ಶಿಯಾದ ತೈಲಪದೇವನಿಗೆ ತೋರಬಾರಂಭಿಸಿತು. ಬೃಹತ್ಕರ್ನಾಟಕದ ಸಾಮ್ರಾಜ್ಯ ಸಿಂಹಾಸನಕ್ಕೆ ಸ್ಥೈರ್ಯವುಂಟಾಗುವದಕ್ಕೆ ಯಾವ ಉಪಾಯಗಳನ್ನು ಯೋಚಿಸಬೇಕೆಂದು ಅವನು ತನ್ನ ಮಂತ್ರಿಯಾದ ರಾಮನಾಥನನ್ನು ವಿಚಾರಿಸಿದನು.

ರಾಮನಾಥನು ಚಾಣಾಕ್ಷನು, ರಾಜಕಾರಣ ಪಟುವು; ಪಾತಾಳಯಂತ್ರಿಯು. ಹೀಗಿದ್ದರೂ ಅವನು ಸಜ್ಜನನು, ಧರ್ಮಾಧರ್ಮ ವಿಚಾರಗಳಲ್ಲಿ ಅತ್ಯಂತ ಬಲ್ಲಿದನು. ಅವನು ಅತ್ಯಂತ ನಿಸ್ಪೃಹ ಸ್ವಭಾವದವನೂ ನ್ಯಾಯ ನಿಷ್ಠುರನೂ ಆಗಿದ್ದನು. ಕರ್ನಾಟಕ ಸಾಮ್ರಾಜ್ಯ ಸಿಂಹಾಸನಕ್ಕೆ ಸ್ಥೈರ್ಯವುಂಟಾಗುವಬಗ್ಗೆ ತೈಲಪದೇವನು ವಿಚಾರಿಸಿದೊಡನೆಯೇ ಅವನು ಎನ್ನಯುಬಂದ:—"ಮಹಾರಾಜರೇ, ಕೊಟ್ಟಿಗದೇವ ಮಹಾರಾಜರೂ ಕಕ್ಕಲದೇವ ಯುವರಾಜರೂ ದುರ್ಬಲ ಹೇಡಿಗಳಿರುವರು. ಅವರ ಕೈಯಲ್ಲಿ ಕರ್ನಾಟಕ ಸಾಮ್ರಾಜ್ಯದ ರಾಜ್ಯಸೂತ್ರಗಳಿದ್ದಂದರೆ, ಮಂಗನ ಕೈಯಲ್ಲಿ ಮಾಣಿಕ ಕೊಟ್ಟಂತಾಗಿರುವದು. ಉತ್ತರಾಪಥದ ಒಬ್ಬ ರಾಜನು ಮಾನ್ಯಖೇಟವನ್ನು ಸುಲಿದ ಸಂಗತಿಯು ಸಾಮ್ರಾಜ್ಯದ ಮಾನಕ್ಕೆ ಕುಂದು ತರುವಂತಹದಿರುವದಲ್ಲದೆ, ಹಾನಿಕರವೂ ಆಗಿರುವದು. ನನಗ ತಿಳಿದಮಟ್ಟಿಗೆ ಹೇಳಬೇಕಾದರೆ, ಇನ್ನು ಮೇಲೆ ಸಾಮ್ರಾಜ್ಯವು ರಾಷ್ಟ್ರಕೂಟರ ವಶದಲ್ಲಿದ್ದರೆ, ಅದು ಬೇಗನೆ ಉತ್ತರಾಪಥದ ರಾಜರ ಪಾದಾಕ್ರಾಂತವಾಗುವದು. ಈಗಾಗಲೇ ಸಾಮ್ರಾಜ್ಯದೊಳಗಿನ ಎಷ್ಟೋ ಜನ ಮಾಂಡಲೇಶ್ವರರು ಸ್ವತಂತ್ರರಾಗಲಿಕ್ಕೆ ಹವಣಿಸತೊಡಗಿರುವರು. ರಾಜ್ಯದಲ್ಲಿ ಅಂತಃಕಲಹಗಳು ತಲೆದೋರಬಾರಂಭಿಸಿರುವವು. ಇಂತಹ ಸಂಧಿಯಲ್ಲಿ ನಿಜವಾದ ಸಾಮ್ರಾಜ್ಯಭಕ್ತರು ಕರ್ನಾಟಕ ಸಿಂಹಾಸನಕ್ಕೆ ಸ್ಥೈರ್ಯವು ನೆಲೆಗೊಳ್ಳುವದಕ್ಕಾಗಿ ಯತ್ನಿಸಬೇಕು. ರಾಷ್ಟ್ರಕೂಟ ದಂತಿದುರ್ಗರು ಚಾಲುಕ್ಯ ಸಮ್ರಾಟ ಕೀರ್ತಿವರ್ಮರಿಂದ ಕರ್ನಾಟಕ ಸಿಂಹಾಸನವನ್ನು ಕಿತ್ತುಕೊಂಡರು. ಈಗ ರಾಷ್ಟ್ರಕೂಟರ ಬಲಹೀನತೆಯ ಕಾಲದಲ್ಲಿ ನೀವು ಸಾಮ್ರಾಜ್ಯದ ರಕ್ಷಣೆಗಾಗಿ ನೀವು ರಾಷ್ಟ್ರಕೂಟರ ಕೈಯೊಳಗಿನ ರಾಜ್ಯಲಕ್ಷ್ಮಿಯನ್ನು ಸೆಳೆಯಲೇಬೇಕು. ಕೊಟ್ಟಿಗ-ಕಕ್ಕಲ ರಾಜರು ಪುತ್ರಸಂತಾನವಿಲ್ಲದವರಿರುವದರಿಂದ ರಾಜಜಾಮಾತರಾದ ನೀವು ಸಾಮ್ರಾಜ್ಯಕ್ಕೆ ಬಾಧ್ಯಸ್ಥರೆಂದು ನಿರ್ಣಯಿಸಲಿಕ್ಕೆ ಪ್ರತ್ಯವಾಯವಿಲ್ಲ."

ರಾಮನಾಥನು ಹೀಗೆ ನುಡಿದ ಕೂಡಲೆ, ಸಿದ್ಧನೆಂಬ ಸೇನಾನಾಯಕನು ತೈಲಪದೇವನನ್ನು ಕುರಿತು:- "ಮಹಾರಾಜರೆ, ಮಾತೃಭೂಮಿಯ ರಕ್ಷಣೆಗಾಗಿ ಮಾಡಿದ ಕೃತಿಯು ಅನ್ಯಾಯವೆನಿಸದು. ಕರ್ನಾಟಕ ಸಾಮ್ರಾಜ್ಯದ ಸುಖ ಸ್ವಾತಂತ್ರ್ಯಗಳನ್ನು ಕಾಯುವದಕ್ಕಾಗಿ ಅಪ್ರಯೋಜಕರಾದ ರಾಷ್ಟ್ರಕೂಟರನ್ನು ಸಿಂಹಾಸನಚ್ಯುತರನ್ನಾಗಿ ಮಾಡುವದು, ಅಧರ್ಮವಾಗುವದೆಂದು ನಾನು ತಿಳಿಯಲಾರೆನು. ಮೇಲಾಗಿ ನೀವು ಕರ್ನಾಟಕ ಸಾಮ್ರಾಜ್ಯಸಿಂಹಾಸನಕ್ಕೆ ಬಾಧ್ಯಸ್ಥರಿರುವಿರಿ. ಚಾಲುಕ್ಯ

ಸಮ್ರಾಟ ಎರಡನೆಯ ಪುಲಿಕೇಶಿ ಮಹಾರಾಜರಿಂದ ಅಭ್ಯುದಯ ಹೊಂದಿದ ಬೃಹತ್ಕರ್ನಾಟಕ ಸಾಮ್ರಾಜ್ಯ ಸಿಂಹಾಸನಕ್ಕೆ ಅವರ ವಂಶಜರಾದ ನೀವು ಅಧಿಕಾರಿಗಳಾಗಿರುವಿರಿ."

"ಮಂತ್ರಿ ಸೇನಾನಾಯಕರೆ, ತಾತ್ವಿಕ ದೃಷ್ಟಿಯಿಂದ ನಿಮ್ಮ ಅಭಿಪ್ರಾಯವು ಸಮಂಜಸವಾಗಿದ್ದರೂ ಲೌಕಿಕ ದೃಷ್ಟಿಯಿಂದ ಗೌಣವೆನಿಸಬಹುದಾಗಿದೆ. ಕೊಟ್ಟಿಗ-ಕಕ್ಕಲರಿಂದ ಕರ್ನಾಟಕ ಸಾಮ್ರಾಜ್ಯಕ್ಕೆ ಹಾನಿಯೊದಗುವದೆಂಬ ಸಂಗತಿಯು ನನ್ನ ನಿದರ್ಶನಕ್ಕೆ ಬರತೊಡಗಿದ್ದರೂ, ಅವರನ್ನು ಸಿಂಹಾಸನಚ್ಯುತಿಗೊಳಿಸಲಿಕ್ಕೆ ಮನಸ್ಸು ಒಪ್ಪದಾಗಿದೆ. ಯಾಕೆಂದರೆ, ಅವರು ಕನ್ನಡಿಗರಿರುವರು. ಕರ್ನಾಟಕ ಸಾಮ್ರಾಜ್ಯದ ವಿಷಯವಾಗಿ ಅನುರಾಗವನ್ನಿಟ್ಟವರಿರುವರು. ಅವರಿಂದ ಪ್ರತ್ಯಕ್ಷವಾದ ಅನ್ಯಾಯವು ಘಟಿಸದೆ, ಅವರ ಕೈಯೊಳಗಿನ ರಾಜ್ಯಸೂತ್ರವನ್ನು ಕಸಿದುಕೊಳ್ಳಲಿಕ್ಕೆ ನನ್ನ ಮನಸ್ಸು ಒಪ್ಪದಾಗಿದೆ. ಅವರಿಂದ ಸಾಮ್ರಾಜ್ಯಸಿಂಹಾಸನವು ನಿಶ್ಚಯವಾಗಿ ನಾಶವಾಗುವದೆಂಬ ಲಕ್ಷಣವು ತೋರಿದಾಗ ಮಾತ್ರ ನಾನು ಕ್ಷತ್ರಿಯ ಭಾವನೆಯನ್ನು ಬದಿಗಿರಿಸಿ, ಕರ್ನಾಟಕ ಸಾಮ್ರಾಜ್ಯ ಸಿಂಹಾಸನವನ್ನು ಕೈವಶಮಾಡಿಕೊಳ್ಳುವೆನು. ಮಾತೃಭೂಮಿಯ ಹಿತರಕ್ಷಣೆ ಮಾಡುವಾಗ ನನ್ನನ್ನು [illegible] ಎಂಬ ವ್ಯಾಮೋಹವು ಬಾಧಿಸುವದಿಲ್ಲ."

ತ್ರೈಲಪದೇವನು ಹೀಗೆ ಸಂಭಾಷಿಸುತ್ತಿರಲು ರಾಜಪತ್ನಿಯಾದ ಜಾಕಲದೇವಿಯು ಅಲ್ಲಿಗೆ ಬಂದು:—"ಅಂತು ನನ್ನ ತವರುಮನೆಯನ್ನು ನಿರ್ನಾಶ ಮಾಡುವ ಯುಕ್ತಿಯಂತೆ ತೋರುವದು. ಮಂತ್ರಿ ಸೇನಾಪತಿಗಳೆ ನಿಮ್ಮ ಮಹಾರಾಜರಿಗೆ ಒಳ್ಳೆಯ ಆಲೋಚನೆಯನ್ನು ಹೇಳತೊಡಗಿರುವಿರಿ. ಅನ್ಯಾಯದಿಂದ ಪರರ ಸ್ವತ್ತನ್ನು ಅಪಹರಿಸುವದು ನ್ಯಾಯವೆನಿಸುವದೆ?"

"ಮಹಾರಾಣಿಯವರೆ" ಮಹಾಮಂತ್ರಿಯಾದ ಅಂಬರಾಘವನು ಜಾಕಲದೇವಿಯನ್ನು ಕುರಿತು:—"ರಾಷ್ಟ್ರಕೂಟರನ್ನು ನಾಶಗೊಳಿಸಬೇಕೆಂಬುದು ನನ್ನ ಅಭಿಪ್ರಾಯವಿಲ್ಲ, ಸಾಮ್ರಾಜ್ಯದ ಗೌರವವನ್ನು ಕಾಯಬೇಕೆಂದು ನನ್ನ ಮತವಿದೆ. ಸಾಮ್ರಾಜ್ಯದ ರಕ್ಷಣೆ ಮಾಡುವಾಗ ರಾಷ್ಟ್ರಹಿತ ವಿರೋಧಿಗಳು ಅಡ್ಡಬಂದರೆ, ಅವರನ್ನು ನಾಶಗೊಳಿಸಬೇಕೆಂದು ನನ್ನ ಮಾತಿನ ಸಾರಾಂಶವಾಗಿರುವದು. ಕೊಟ್ಟಿಗದೇವ ಕಕ್ಕಲರಾಜರು ರಾಷ್ಟ್ರಘಾತಕರೆಂದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಕೊಟ್ಟಿಗದೇವ ರಾಜರು ವೃದ್ಧಾಪ್ಯದಿಂದ ಕಾರ್ಯನಿರ್ವಾಹಕಶಕ್ತಿ ಇಲ್ಲದವರಾಗಿರುವರು. ಕಕ್ಕಲದೇವ ರಾಜರು ಕೇವಲ ವಿಲಾಸಿಗಳು; ಅಲ್ಲದೆ ಹೇಡಿಗಳು. ಇವರ ಬಂಧುಗಳಾದ ಬಪ್ಪುವ ರಾಜರು ಉನ್ಮತ್ತರು. ಅಂತು ರಾಷ್ಟ್ರಕೂಟ ರಾಜಮನೆತನದಲ್ಲಿಯ ಪ್ರಮುಖರು ಕಾರ್ಯದಕ್ಷತೆಯಿಲ್ಲದವರಾಗಿರುವರೆಂದೆನ್ನಬಹುದು. ಇಂತಹರ ಕೈಯಲ್ಲಿ ರಾಜ್ಯಸೂತ್ರಗಳಿದ್ದರೆ ಸಾಮ್ರಾಜ್ಯಕ್ಕೆ ಹಾನಿಯಾಗದಿರುವದೆ? ದೇವಿಯವರೆ, ನಾನು ಮತ್ಸರಭಾವದಿಂದ ಹೀಗೆ ಮಾತನಾಡುವೆನೆಂದು ತಿಳಿಯಬೇಡಿರಿ.

ಕರ್ನಾಟಕ ಸಾಮ್ರಾಜ್ಯವು ನಮ್ಮ ಮಹಾರಾಜರವರ ಕೈಯಲ್ಲಿ ಬೇಗನೆ ಅದರ ಅಭ್ಯುದಯವಾಗುವದು. ಚಾಲುಕ್ಯ ಸಾರ್ವಭೌಮರು ಎರಡು ಶತಕಗಳ ವರೆಗೆ ಅಜ್ಞಾತವಾಸವನ್ನು ಹೊಂದಿರುವರು. ಅವರ ಅಜ್ಞಾತವಾಸದ ಅವಧಿಯು ಪೂರ್ಣವಾದಂತಾಗಿದೆ. ಇನ್ನು ಮೇಲೆ ರಾಷ್ಟ್ರಕೂಟರಿಂದ ಸಾಮ್ರಾಜ್ಯ ಸಿಂಹಾಸನವನ್ನು ಸೆಳೆದುಕೊಳ್ಳಲಿಕ್ಕೆ ಏನೂ ಅಡ್ಡಿಯಿಲ್ಲ. ಕರ್ನಾಟಕ ಸಾಮ್ರಾಜ್ಯದೊಳಗಿನ ಎಲ್ಲ ಮಾಂಡಲಿಕರೂ ಪ್ರಜಾಜನರೂ ರಾಷ್ಟ್ರಕೂಟರ ಅನಿಯಂತ್ರಿತವಾದ ಆಳಿಕೆಗೆ ಬೇಸತ್ತಿರುವರು. ಅವರು ಈಗ ಚಾಲುಕ್ಯ ರಾಜರ ಛತ್ರದಲ್ಲಿ ಬರಬೇಕೆಂದು ಬಯಸುತಲಿರುತ್ತಾರೆ."

ಮಹಾಮಂತ್ರಿಯಾದ ರಾಮನಾಥನ ಮಾತುಗಳನ್ನು ಕೇಳಿ ಜಾಕಲದೇವಿಯ ಮನಸ್ಸು ವ್ಯಾಕುಲಗೊಂಡಿತು. ತನ್ನ ತವರು ಮನೆಯ ಬಳಗದವರು ಬಲಹೀನರಾಗಿದ್ದುದರಿಂದ ಕಾರಸ್ಥಾನಿಗಳಾದ ರಾಮನಾಥ ಸಿದ್ಧಸೇನ ಮೊದಲಾದವರು ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡುವ ಯತ್ನದಲ್ಲಿರುವರೆಂದು ಅವಳು ಬಗೆದಳು. ಆಗ ಅವಳು ಮಂತ್ರಿಯನ್ನು ಕುರಿತು:—"ನೀವು ಕುಟಿಲ ಕಾರಸ್ಥಾನಿಗಳಿರುವಿರೆಂಬದನ್ನು ನನ್ನ ಅಜ್ಜಂದಿರಾದ ಕೊಟ್ಟಿಗ ಮಹಾರಾಜರೂ ತಂದೆಯವರಾದ ಕಕ್ಕಲರಾಜರೂ ಗುರುತಿಸಿರುವರು. ಅಂತೆಯೇ ಚಾಲುಕ್ಯರ ವಿಷಯವಾಗಿ ಅವರು ಮೊದಲಿನಂತೆ ವಿಶ್ವಾಸವುಳ್ಳವರಾಗಿಲ್ಲ. ವಿಕ್ರಮಾದಿತ್ಯ ಮಾವಂದಿರು ಸ್ವಾರ್ಥವನ್ನು ಬದಿಗಿಂಸಿ, ಕೇವಲ ರಾಷ್ಟ್ರಕೂಟರ ಏಳಿಗೆಗಾಗಿ ಯತ್ನಿಸಿದರು. ಆದರೆ, ನಿಮ್ಮಂತಹ ತಂತ್ರಗಾರರ ಜಾಲದಲ್ಲಿ ಸಿಲುಕಿದ ಮಹಾರಾಜರು ಈಗ ಸ್ವಾರ್ಥಪರಾಯಣರಾಗಿರುವರು. ನಿಮ್ಮಂತಹರ ಕುಟಿಲ ಕಾರಸ್ಥಾನವನ್ನು ನಾಶಗೊಳಿಸಿ, ಸಾಮ್ರಾಜ್ಯ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಳ್ಳಲಿಕ್ಕೆ ನನ್ನ ತವರು ಮನೆಯವರು ಸಮರ್ಥರೇ ಇರುತ್ತಾರೆ."

"ಮಹಾರಾಣಿಯವರೆ," ಸೇನಾನಾಯಕನಾದ ಸಿದ್ಧಸೇನನು ಜಾಕಲದೇವಿಯನ್ನು ಕುರಿತು:—"ನೀವು ತವರು ಮನೆಯ ಅಭಿಮಾನವನ್ನು ಹಿಡಿದು ಮಾತನಾಡತೊಡಗಿರುವಿರಿ. ನಾವು ರಾಷ್ಟ್ರಕೂಟರ ಸಾಮರ್ಥ್ಯವನ್ನು ಚನ್ನಾಗಿ ಅರಿದುಕೊಂಡಿರುವೆವು. ಸಿಯಾಕಹರ್ಷಪರಮಾರನು ರಾಜಧಾನಿಯನ್ನು ಸುಲಿದುಕೊಂಡು ಹೋದರೂ, ಅವನ ಪ್ರತೀಕಾರ ಮಾಡುವದಕ್ಕೆ ರಾಷ್ಟ್ರಕೂಟರು ಸಮರ್ಥರಾಗಲಿಲ್ಲ. ಮಹಾರಾಜರ ಆಜ್ಞೆಯಾದರೆ ಈ ಸಿದ್ಧಸೇನನು ರಾಷ್ಟ್ರಕೂಟರನ್ನು ನಾಮಶೇಷಗೊಳಿಸಿಯೆ ಎರಡನೆಯ ಕೆಲಸ ಮಾಡುವನು. ರಾಷ್ಟ್ರಕೂಟರ ಕೈಯೊಳಗಿನ ರಾಜ್ಯ ಸೂತ್ರಗಳನ್ನು ಸೆಳೆದುಕೊಳ್ಳದಿದ್ದರೆ, ಕರ್ನಾಟಕ ಸಿಂಹಾಸನವು ಕನ್ನಡಿಗರದಾಗಿ ಉಳಿಯುವದು ಕಠಿಣವಾದೀತು ರಾಣಿಯವರೆ, ನಾನು ಬಾಹ್ಯಾಡಂಬರಕ್ಕಾಗಿಯಾಗಲಿ, ದೊಡ್ಡಿಸ್ತಿಕೆಯನ್ನು ಪ್ರಕಟಗೊಳಿಸಬೇಕೆಂಬ ಬುದ್ಧಿಯಿಂದಾಗಲಿ ಹೀಗೆ ಮಾತನಾಡುವೆನೆಂದು ತಿಳಿಯಲಾಗದು. ಸಾಮ್ರಾಜ್ಯದ ಹಿತಚಿಂತನೆ

ಮಾಡುವದು ಪ್ರತಿಯೊಬ್ಬ ಕನ್ನಡಿಗನ ಆದ್ಯ ಕರ್ತವ್ಯವಾಗಿರುವದು."

ಸಿದ್ಧಸೇನನು ಹೀಗೆ ನುಡಿಯುವಷ್ಟರಲ್ಲಿ ದೂತನು ಒಳಗೆ ಬಂದು ತೈಲಪದೇವನಿಗೆ ಅಭಿವಂದಿಸಿ:—"ಮಹಾರಾಜರೆ, ಮಾನ್ಯಖೇಟದಿಂದ ಚಾರನು ಬಂದಿರುವನು."

ದೂತನು ಹೀಗೆ ಹೇಳಿದಕೂಡಲೆ, ಮಾನ್ಯಖೇಟದ ಚಾರನನ್ನು ಒಳಗೆ ಕಳಿಸುವದಕ್ಕಾಗಿ ತೈಲಪದೇವನು ಆತನಿಗೆ ಆಜ್ಞಾಪಿಸಿದನು. ಪರಕ್ಷಣದಲ್ಲಿ ಮಾನ್ಯಖೇಟದ ಚಾರನು ಒಳಗೆ ಬಂದು ತೈಲಪದೇವನಿಗೆ ನಮಸ್ಕಾರಮಾಡಿ, ರಾಜಮುದ್ರೆಯ ಪತ್ರಿಕೆಯನ್ನು ಅವನಿಗೆ ಕೊಟ್ಟನು. ತೈಲಪದೇವನು ಆ ಪತ್ರವನ್ನೋದಲಾರಂಭಿಸಿದನು. ಓದುತ್ತ ಹೋದಂತೆ ಅವನ ಕಣ್ಣುಗಳು ಕೆಂಪಗಾದವು. ಮಂತ್ರಿ-ಸೇನಾನಾಯಕರು ಅವನ ಮುಖಚರ್ಯೆಯನ್ನು ನೋಡಿ ಬೆರಗಾದರು. ಪತ್ರದಲ್ಲಿ ಏನು ಬರೆದಿರುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ಅವರು ಆತುರಗೊಂಡರು. ಪತ್ರವನ್ನೋದಿದ ಕೂಡಲೆ, ತೈಲಪದೇವನು ಅದನ್ನು ಮಹಾಮಂತ್ರಿಯಾದ ರಾಮನಾಥನ ಕೈಯಲ್ಲಿ ಕೊಟ್ಟು:—"ಮಂತ್ರಿಗಳೆ, ಪರಮಾರ ಮುಂಜರಾಜನ ಹಾವಳಿಯು ಬಹಳವಾಯಿತು. ಅವನು ಮಾನ್ಯಖೇಟವನ್ನು ಮುತ್ತಿರುವನಂತೆ. ಅವನಿಗೆ ಕರ್ನಾಟಕದ ಕೈಯನ್ನು ಚನ್ನಾಗಿ ತೋರಿಸಲಿಕ್ಕೆ ಬೇಕು. ಮುಂಜರಾಜನು ತನ್ನ ತಂದೆಯಾದ ಸಿಯಾಕಹರ್ಷನಂತೆ ಉಂಪನ ಪ್ರಿಯನಾಗಿ ತೋರುವನು. ಒಮ್ಮೆ ವಿಜಯ ದೊರೆತದ್ದಕ್ಕಾಗಿ ಮಾಳವೆಯರ ಕಣ್ಣುಗಳು ನೆತ್ತಿಯ ಮೇಲೆ ಬಂದಿವೆ"

ರಾಮನಾಥನು ಮಾನ್ಯಖೇಟದಿಂದ ಬಂದ ಪತ್ರವನ್ನೋದಿದನು. ಉತ್ತರಾಪಥದೊಳಗಿನ ಒಬ್ಬ ಸಾಮಾನ್ಯ ರಾಜನು ಕರ್ನಾಟಕದಂತಹ ದೊಡ್ಡ ಸಾಮ್ರಾಜ್ಯದ ರಾಜಧಾನಿಯನ್ನು ಮುತ್ತುವ ಧೈರ್ಯ ಮಾಡಿದ್ದು ಅವನಿಗೆ ಅತ್ಯಂತ ವಿಸ್ಮಯವೆನಿಸಿತು. ರಾಷ್ಟ್ರಕೂಟರು ದುರ್ಬಲರಿರುವರೆಂಬದು ಸರ್ವವಿಶ್ರುತವಾದದ್ದರಿಂದ ಈ ಬಗೆಯ ಘಟನೆಗಳೊದಗತೊಡಗಿರುವವೆಂದು. ಅವನು ಬಗೆದನು. ಆಗ ಅವನು ತೈಲಪದೇವನನ್ನು ಕುರಿತು:—"ಮಹಾರಾಜರೆ, ಮುಂಜರಾಜನಿಗೆ ತನ್ನ ಬಾಹುಬಲದ ಗರ್ವವು ಅತಿಶಯವಾಗಿರುವಂತೆ ತೋರುತ್ತದೆ. ಕನ್ನಡಿಗರು ಅವನ ತೋಳುತಿಂಡೆಯನ್ನು ತಗ್ಗಿಸದಿದ್ದರೆ ಗತ್ಯಂತರವಿಲ್ಲ ಮಾಳವೆಯರು ಕರ್ನಾಟಕದ ಹೆಸರು ಕೇಳಿದರೆ ಬೆಚ್ಚಿ ಬೀಳುವಂತೆ ಮಾಡಲಿಕ್ಕೆಬೇಕು. ಕೊಟ್ಟಿಗದೇವ ಮಹಾರಾಜರು ತಮ್ಮ ಸಹಾಯವನ್ನು ಯಾಚಿಸಿರುವರು. ನೀವು ಪುಲಿಗೇರೆಯ ಅರಿಕೇಸರಿ ರಾಜನೊಡಗೂಡು ಹೇರಳವಾದ ಸೈನ್ಯದೊಡನೆ ಮಾನ್ಯಖೇಟಕ್ಕೆ ತೆರಳಬೇಕು. ಗಂಗವಾಡಿಯ ಮಾರಸಿಂಹರೂ ಸವದತ್ತಿಯ ರಟ್ಟರಸರಾದ ಶಾಂತಿವರ್ಮರೂ ಕೊಟ್ಟಿಗದೇವಮಹಾರಾಜರ ಸಹಾಯಕ್ಕಾಗಿ ಬೇಗನೆ ಹೊರಡಬಹುದು. ಅವರಿಗೆ ಆಜ್ಞಾಪತ್ರಗಳು ಕಳುಹಿಸಲ್ಪಟ್ಟಿರುವವೆಂದು ಈ ಪತ್ರದಲ್ಲಿ ಬರೆದಿರುತ್ತಾರೆ. ಕಾಲವಿಲಂಬ ಮಾಡದೆ ಮಾನ್ಯಖೇಟದ ರಕ್ಷಣೆಗಾಗಿ ತೆರಳಬೇಕೆಂದು ನನ್ನ ವಿನಂತಿಯುಂಟು. ವೇಳೆಗೆ ಸರಿಯಾಗಿ ಸಹಾಯವು ದೊರೆಯದಿದ್ದರೆ ರಾಜಧಾನಿಯ ಪರಿ

ಣಾಮವು ಒಳಿತಾಗಲಾರದೆಂದು ತೋರುತ್ತದೆ."

ರಾಮನಾಥ ಮಂತ್ರಿಯು ಹೀಗೆ ಹೇಳುತ್ತಿರಲು, ಉಪಸೇನಾಪತಿಯಾದ ಬಾರಪ್ಪನು ಅಲ್ಲಿಗೆ ಬಂದು:—"ಮಹಾರಾಜರೆ, ಮಾನ್ಯಖೇಟದಿಂದ ಗುಪ್ತಚರನು ಬಂದಿರುವನು."

"ವಿಶೇಷ ಸಂಗತಿಯೇನಿರುವದು?"

ಪರಮಾರ ಮುಂಜ ರಾಜನು ಮಾನ್ಯಖೇಟವನ್ನು ಸ್ವವಶ ಮಾಡಿಕೊಂಡಿರುವನಂತೆ. ಕೊಟ್ಟಿಗದೇವ ರಾಜರು ಅಪಜಯದ ವಾರ್ತೆಯನ್ನು ಕೇಳಿ ಎದೆಯೊಡಕೊಂಡು ಮರಣಹೊಂದಿದರಂತೆ. ಮುಂಜರಾಜನು ರಾಜಧಾನಿಯನ್ನು ಸುಲಿಯತೊಡಗಿರುವನಂತೆ."

"ಕಕ್ಕಲದೇವನ ಅವಸ್ಥೆಯೇನಾಯಿತೆಂಬದು ತಿಳಿಯಲಿಲ್ಲವೇನು?"

"ಮಹಾರಾಜರೆ, ಕಕ್ಕಲದೇವ, ಬಪ್ಪುವದೇವ, ಮಾಗಿವರ್ಮ, ಮಹಾಮಂತ್ರಿಯಾದ ಮುದ್ದಣದೇವ ಮೊದಲಾದ ರಾಜಪರಿವಾರದವರು ಗುಪ್ತ ಮಾರ್ಗದಿಂದ ಓಡಿ ಹೋದರೆಂದು ಗುಪ್ತಚರನು ಹೇಳಿದನು."

ಬಾರಪ್ಪ ಸೇನಾಪತಿಯು ಹೀಗೆ ಹೇಳಿದ ಕೂಡಲೆ ಬಳಿಯಲ್ಲಿದ್ದ ರಾಜಮಹಿಷಿಯಾದ ಜಾಕಲದೇವಿಯು ಪರಮ ದುಃಖಿತಳಾದಳು. ಅಜ್ಜನಾದ ಕೊಟ್ಟಿಗದೇವನು ಎದೆಯೊಡಕೊಂಡು ಮಡಿದ ಹಾಗು ತಂದೆಯಾದ ಕಕ್ಕಲದೇವನು ಜೀವವನ್ನು ರಕ್ಷಿಸಿಕೊಳ್ಳುವದಕ್ಕಾಗಿ ಓಡಿ ಹೋದ ಸಂಗತಿಗಳು ಅವಳನ್ನು ದುಃಖಾಬ್ಧಿಯಲ್ಲಿ ಕೆಡಹಿದವು. ಕರ್ನಾಟಕ ಸಾಮ್ರಾಜ್ಯದ ಸಮ್ರಾಟರಿಗೆ ದುರವಸ್ಥೆಯು ಪ್ರಾಪ್ತವಾದಬಗ್ಗೆ ಅವಳು ಬಹು ವಿಧವಾಗಿ ಮರುಗತೊಡಗಿದಳು. ಆಗ ಅವಳು ತನ್ನ ಪತಿಯನ್ನು ಕುರಿತು:—"ಮಹಾರಾಜರೆ, ನೀವು ಉನ್ಮತ್ತನಾದ ಮುಂಜರಾಜನ ಸೇಡು ತೀರಿಸಿಕೊಳ್ಳಲಿಕ್ಕೆ ಬೇಕು. ಅನ್ಯಾಕ್ರಾಂತ ಮಾಡಲೆಳಸುವ ಉನ್ಮತ್ತ ರಾಜರಿಗೆ ಯೋಗ್ಯ ಪ್ರತಿಬಂಧ ಮಾಡದಿದ್ದರೆ ಕರ್ನಾಟಕವು ಕನ್ನಡಿಗರದಾಗಿ ಉಳಿಯಲಿಕ್ಕಿಲ್ಲ."

"ಮಹಾರಾಣಿಯವರೆ," ಸೇನಾಪತಿಯಾದ ಸಿದ್ಧಸೇನನು ಗಾಂಭೀರ್ಯದಿಂದ:—"ಕರ್ನಾಟಕ ಸಾಮ್ರಾಜ್ಯ ಸಿಂಹಾಸನದ ಮೇಲೆ ರಾಷ್ಟ್ರಕೂಟ ರಾಜರು ಮಂಡಿಸಿರುವವರೆಗೆ ಮಾತ್ರ ಇನ್ನು ಮೇಲೆ ಅನ್ಯಾಕ್ರಾಂತ ಮಾಡುವ ಪರಕೀಯ ರಾಜರಿಗೆ ಪ್ರತಿಬಂಧವಾಗುವಂತಿರಲಿಲ್ಲ."

"ಅಂತೆಯೆ ಸಾಮ್ರಾಜ್ಯ ಸಿಂಹಾಸನವನ್ನು ಹಸ್ತಗತ ಮಾಡಿಕೊಳ್ಳಬೇಕೆಂದು ನಾವು ಮಹಾರಾಜರಿಗೆ ವಿನಂತಿ ಮಾಡಿಕೊಳ್ಳತೊಡಗಿರುವೆವು"

ರಾಮನಾಥನು ಹೀಗೆ ನುಡಿದ ಕೂಡಲೆ ತೈಲಪದೇವನು ನಸುನಗುತ್ತ—ಶತ್ರುಗಳನ್ನು ದಂಡಿಸಿ ರಾಷ್ಟ್ರಕೂಟರನ್ನೇ ಸಿಂಹಾಸನದ ಮೇಲೆ ಕುಳ್ಳಿರಿಸಬೇಕೆಂದು ರಾಣಿಯು ಅಭಿಪ್ರಾಯವಿರುವದು. ಸಿಂಹಾಸನವನ್ನು ನನ್ನ ವಶಕ್ಕೆ ತೆಗೆದುಕೊಳ್ಳು

ವದು ಇವಳಿಗೆ ದುಃಖದಾಯಕವೆನಿಸುವದು. ತವರು ಮನೆಯ ಅಭಿಮಾನವು ಪ್ರತಿಯೊಬ್ಬ ಸ್ತ್ರೀಗೆ ಇರತಕ್ಕದ್ದೇ." ಎಂದು ನುಡಿದು, ಅವನು ಮಂತ್ರಿಯಾದ ರಾಮನಾಥನನ್ನು ಕುರಿತು:—"ಮಂತ್ರಿಗಳೆ, ಸೈನ್ಯಸಹಿತರಾಗಿ ಹೊರಟು ಬರಬೇಕೆಂದು ಪುಲಿಗೆರೆಯ ಮಂಡಲೇಶ್ವರರಾದ ಅರಿಕೇಸರಿಯವರಿಗೆ ಪತ್ರ ಬರೆಯಿಸಿರಿ. ಗಂಗವಾಡಿಯ ಮಾರಸಿಂಹರಿಗೂ, ಸವದತ್ತಿಯ ಶಾಂತವರ್ಮರಿಗೂ ಮಾನ್ಯಖೇಟದ ವರ್ತಮಾನವನ್ನು ತಿಳುಹಿಸಿರಿ."

"ಅವರೆಲ್ಲರೂ ಇಲ್ಲಿಗೆ ಬಂದ ಮೇಲೆಯೇ ಮಾನ್ಯಖೇಟಕ್ಕೆ ತೆರಳತಕ್ಕದ್ದೇನು?"

"ನಾವು ಅವರ ದಾರಿಯನ್ನು ನೋಡುವದಿಲ್ಲ. ಎಲ್ಲರೂ ಮಾನ್ಯಖೇಟದ ಕಡೆಗೆ ಸಾಗಿ ಬರಲಿ. ಅವರನ್ನು ಇಲ್ಲಿಗೆ ಕರೆಯಿಸಿಕೊಂಡು ಹೊರಡುವಷ್ಟು ಅವಕಾಶವಿಲ್ಲ. ಪ್ರಸಂಗವು ಮೈಮೇಲೆ ಬಂದಾಗ ದಿನಾವಧಿ ಮಾಡುವದು ವಿಹಿತವೆನಿಸಲಾರದು" ಎಂದು ತೈಲಪದೇವನು ರಾಮನಾಥನಿಗೆ ಹೇಳಿ, ಸೇನಾಪತಿಯಾದ ಬಾರಪ್ಪನನ್ನು ಕುರಿತು:—"ಬಾರಪ್ಪನವರೇ, ನೀವು ಇಂದು ಸೇನೆಯನ್ನು ಸಿದ್ಧಗೊಳಿಸಿರಿ. ನಾಳೆ ಅರುಣೋದಯವಾದ ಕೂಡಲೆ ವಾತಾಪಿಪುರದಿಂದ ಪ್ರಯಾಣ ಮಾಡತಕ್ಕದ್ದಿರುವದು. ರಾಜಧಾನಿಯ ರಕ್ಷಣೆಯನ್ನು ಸಿದ್ಧಸೇನ ಸೇನಾಪತಿಗಳ ಕಡೆಗೆ ಒಪ್ಪಿಸುವೆನು. ಕಾಳಗದಲ್ಲಿ ನುರಿತ ದಂಡಾಳುಗಳನ್ನು ಮಾತ್ರ ಆರಿಸಿರಿ. ಮುಂಜರಾಜನೊಡನೆ ಪ್ರಸಂಗವಿರುವದರಿಂದ ಅಂಥ ಇಂಥ ಸೈನಿಕರನ್ನು ಹೊರಡಿಸಬೇಡಿರಿ."

ತೈಲಪದೇವನ ಅಪ್ಪಣೆಯ ಮೇರೆಗೆ ಸೈನ್ಯವನ್ನು ಸಜ್ಜುಗೊಳಿಸುವದಕ್ಕಾಗಿ ಬಾರಪ್ಪ ಸೇನಾಪತಿಯು ಹೊರಟು ಹೋದನು. ಆಮೇಲೆ ತೈಲಪದೇವನು ಸಿದ್ಧಸೇನ ಸೇನಾಪತಿಗೆ ರಾಜಧಾನಿಯ ಸಂರಕ್ಷಣೆಯ ಕಾರ್ಯವನ್ನೊಪ್ಪಿಸಿ ಕಳುಹಿಸಿದನು. ರಾಮನಾಥ ಮಂತ್ರಿಯಾದರೂ ರಾಜಾಜ್ಞೆಯನ್ನು ಪಡೆದು ತನ್ನ ಮನೆಗೆ ಹೊರಟು ಹೋದನು. ಮಂತ್ರಿ-ಸೇನಾನಾಯಕರು ಹೊರಟು ಹೋದ ಮೇಲೆ ಜಾಕಲದೇವಿಯು ಪತಿಯನ್ನು ಕುರಿತು:—"ಪ್ರಿಯರೆ, ಮಾನ್ಯಖೇಟಕ್ಕೆ ನಾನೂ ಬರುವೆನು."

"ಈ ಸಾರೆ ಯಾರನ್ನೂ ಇಲ್ಲ ಬಿಟ್ಟು ಹೋಗುವದಿಲ್ಲ. ಈ ಸಾರೆಯ ದಂಡಯಾತ್ರೆಯು ಬೇಗನೆ ಮುಗಿದೀತೆಂದು ಹೇಳಲಿಕ್ಕೆ ಬರುವಂತಿಲ್ಲ. ಒಂದು ವೇಳೆ ಉತ್ತರಾಪಥದ ಮೇಲೆ ದಾಳಿ ಮಾಡುವ ಪ್ರಸಂಗವೊದಗುವ ಸಂಭವವಿದೆ. ದಂಡಯಾತ್ರೆಯು ಮುಗಿಯುವ ವರೆಗೆ ನೀನೂ ಕುಸುಮಕುಮಾರಿಯೂ ಮಾತೆಯೊಡನೆ ಮಾನ್ಯಖೇಟದಲ್ಲಿರಬೇಕಾಗುವದು. ಮುಂಜರಾಜನು ಸಾಮಾನ್ಯಕೋಟಿಯೊಳಗಿನವನಲ್ಲ. ಅವನು ತಾರುಣ್ಯಕ್ಕನುಗುಣವಾದ ಉನ್ಮತ್ತನಿರುವನು; ಪರಾಕ್ರಮಿಯಿರುವನು. ಕರ್ನಾಟಕ ಸಾಮ್ರಾಜ್ಯವನ್ನು ಕೈವಶ ಮಾಡಿಕೊಳ್ಳಬೇಕೆಂದು ಅವನು ದೀರ್ಘಸಾಹಸ ನಡೆಯಿಸಿರುವನು. ಬಲಿಷ್ಠನಾದ ಶತ್ರುವನ್ನು ಉಪೇಕ್ಷಿ

ಸಿದರೆ ಅನಿಷ್ಟವೊದಗುವದು. ಅವನ ಪಾರಿಪತ್ಯ ಮಾಡಿಯೇ ತೀರಬೇಕಾಗಿದೆ.''

ರಾಮನಾಥ ಮಂತ್ರಿಯು ತೈಲಪದೇವನ ಆಜ್ಞೆಯ ಮೇರೆಗೆ ಪುಲಿಗೆರೆಯ ಚಾಲುಕ್ಯರ ಎರಡನೆಯ ಅರಿಕೇಸರಿ, ಗಂಗರಸ ಮಾರಸಿಂಹ, ಸವದತ್ತಿಯ ರಟ್ಟ ಸಾಮಂತನಾದ ಶಾಂತಿವರ್ಮ ಮೊದಲಾದವರ ಕಡೆಗೆ ಪತ್ರವನ್ನು ಕಳುಹಿಸಿದನು. ಬಾರಪ್ಪಸೇನಾಪತಿಯು ನುರಿತ ದಂಡಾಳುಗಳನ್ನು ಸಜ್ಜುಗೊಳಿಸಿದನು. ಅರುಣೋದಯವಾದ ಕೂಡಲೆ ತೈಲಪದೇವನು ತನ್ನ ಅಮೋಘವಾದ ಪಡೆಯೊಡನೆ ವಾತಾಪಿಪುರವನ್ನು ಬಿಟ್ಟು ಮಾನ್ಯಖೇಟದ ದಾರಿ ಹಿಡಿದನು. ಚಾಲುಕ್ಯದಳವು ಮಾನ್ಯಖೇಟವನ್ನು ಸಮೀಪಿಸುವಷ್ಟರಲ್ಲಿ ಅರಿಕೇಸರಿ ಮಾರಸಿಂಹ ಶಾಂತಿವರ್ಮ ಮೊದಲಾದವರು ತಮ್ಮ ತಮ್ಮ ಸೈನ್ಯದೊಂದಿಗೆ ಅದನ್ನು ಕೂಡಿದರು. ಅರಿಕೇಸರಿಯು ರಾಷ್ಟ್ರಕೂಟರೊಡನೆ ದ್ವೇಷಭಾವದಿಂದಿದ್ದರೂ ತೈಲಪದೇವನ ಮುರವತ್ತಿಗಾಗಿ ಹೊರಟು ಬಂದಿದ್ದನು. ರಾಷ್ಟ್ರಕೂಟ ಸಿಂಹಾಸನವನ್ನು ತೈಲಪದೇವನು ವಶಪಡಿಸಿಕೊಳ್ಳಬೇಕೆಂದು ಅವನು ಮನಸ್ಸಿನಿಂದ ಇಚ್ಛಿಸ ತೊಡಗಿದ್ದನು. ರಾಷ್ಟ್ರಕೂಟರು ತನ್ನ ಪೂರ್ವಜರಿಂದ ಮೋಸ ಮಾಡಿ ಕಿತ್ತುಕೊಂಡ † ಸಾಮ್ರಾಜ್ಯವು ನ್ಯಾಯದಿಂದ ತನ್ನದೇ ಆಗಿರುತ್ತದೆಂಬ ಅಭಿಮಾನವು ತೈಲಪದೇವನಲ್ಲಿ ಹುಟ್ಟಿತ್ತು. ರಾಷ್ಟ್ರಕೂಟರು ಹೇಡಿಗಳಾಗಿದ್ದರಿಂದ ಅವರ ವಶದಲ್ಲಿ ಸಾಮ್ರಾಜ್ಯ ಸಿಂಹಾಸನವಿದ್ದರೆ ಅನಿಷ್ಟವೊದಗುವದೆಂದು ಎಲ್ಲ ಜನರ ತಿಳುವಳಿಕೆಯಾಗಿತ್ತು. ತೈಲಪದೇವನಂತಹ 'ಕರ್ತುಮಕರ್ತುಮನ್ಯಥಾ ಕರ್ತುಂ' ಶಕ್ತಿಯುಳ್ಳ ರಾಜನೇ ಕರ್ನಾಟಕದ ಸಮ್ರಾಟನಾಗಲು ಅರ್ಹನೆಂದು ಸರ್ವ ಮಾಂಡಲಿಕರ ಹಾಗು ಪ್ರಜಾಜನರ ಅಭಿಪ್ರಾಯವಿತ್ತು. ಕೊಟ್ಟಿಗನು ಮರಣಹೊಂದಿದ್ದರಿಂದಲೂ ಕಕ್ಕಲದೇವನು ಅವನಿಗಿಂತ ಹೇಡಿಯಿದ್ದುದರಿಂದಲೂ ಕರ್ನಾಟಕ ಸಾಮ್ರಾಜ್ಯವನ್ನು ತನ್ನ ವಶದಲ್ಲಿ ತೆಗೆದುಕೊಳ್ಳುವದೇ ಯೋಗ್ಯವೆಂದು ತೈಲಪದೇವನು ತಿಳಿದಿದ್ದನು. ಮುಂಜರಾಜನ ಪಾರಿಪತ್ಯ ಮಾಡದೆ ಯಾವ ಕಾರ್ಯವನ್ನೂ ಜರುಗಿಸುವಂತಿದ್ದಿಲ್ಲವಾದ್ದರಿಂದ ಅವನು ತನ್ನ ಈ ಆದ್ಯ ಕರ್ತವ್ಯದ ಕಡೆಗೆ ಮಾತ್ರ ಲಕ್ಷ್ಯಗೊಟ್ಟಿದ್ದನು.

ಮುಂಜರಾಜನು ವೈಭವಶಾಲಿಯಾದ ಮಾನ್ಯಖೇಟ ರಾಜಧಾನಿಯನ್ನು ಸುಲಿಯುವದರಲ್ಲಿ ಲೀನನಾಗಿ ಹೋಗಿದ್ದನು. ಅವನ ಉಚ್ಛೃಂಖಲ ಸೈನಿಕರು ಸುಲಿದು ತಂದು ಹಾಕುತ್ತಲಿರುವ ಧನಕನಕ ಮುತ್ತು ರತ್ನಗಳ ರಾಶಿ ರಾಶಿಗಳನ್ನು ನೋಡುತ್ತ, ಅವನು ತಾನೇ ತಾನಾಗಿ ಹೋಗಿದ್ದನು. ರಾಜಧಾನಿಯೊಳಗೆ ದೊರೆತ

---

† ರಾಷ್ಟ್ರಕೂಟ ಕುಟಿಲ್ಯಗರ್ಮಿತಾಮುದಸ್ತಾತ್ತು |
ಉದ್ಧೃತ್ಯ ಮಾಧವಯಿವಾದಿ ವಾರಾಹ ರೂಪೋವಭ್ರೌ ||
(೧೫೯ ನಂಬರಿನ ದಾವಣಗೇರಿ ಶಾಸನ, ಕರ್ನಾಟಕ ಶಾಸನ ಸಂಗ್ರಹ, ಸಂ. ೧೧ ಕನ್ನಡ ಭಾಗ ಪುಟ ೫೪.)

ಸುಲಿಗೆಯಿಂದ ಅವನು ಕರ್ನಾಟಕದೇಶದ ವೈಭವವನ್ನು ಅಳೆದು ನೋಡುತ್ತ ವಿಸ್ಮಿತನಾಗಿದ್ದನು. ಮುಂಜರಾಜನು ಕೋಶಾಗಾರವನ್ನು ಸುಲಿಯಬೇಕೆಂದು ಹೊರಡುವಷ್ಟರಲ್ಲಿ ಬೇಹಿನವನು ಅವನ ಬಳಿಗೆ ಬಂದು:—"ಮಹಾರಾಜರೇ, ವಾತಾಪಿಪುರದ ಚಾಲುಕ್ಯರಾಜನಾದ ತೈಲಪದೇವನೂ, ಪುಲಿಗೆರೆಯ ಅರಿಕೇಸರಿಯೂ, ಗಂಗರಸನಾದ ಮಾರಸಿಂಹನೂ, ಸಪದತ್ತಿಯ ಶಾಂತಿವರ್ಮನೂ ತಮ್ಮ ತಮ್ಮ ಸೈನ್ಯದೊಡನೆ ಮಾನ್ಯಖೇಟದ ರಕ್ಷಣೆಗಾಗಿ ಹೊರಟಿರುವರು. ಇಷ್ಟರಲ್ಲಿ ಅವರ ಸೈನ್ಯವು ರಾಜಧಾನಿಯನ್ನು ಸಮೀಪಿಸಿರಬಹುದು. ಕನ್ನಡಿಗರ ಸೈನ್ಯದ ಮುಂದೆ ನಮ್ಮ ಸೈನ್ಯವು ಆನೆಯ ಮುಂದಿನ ಆಡಿನ ಮರಿಯಂತಾಗುವದು. ನೀವು ಸೈನ್ಯ ಸಹಿತವಾಗಿ ಧಾರಾನಗರಿಯ ದಾರಿಯನ್ನು ಹಿಡಿಯದಿದ್ದರೆ, ಸುದ್ದೀ ಹೇಳುವವರು ಸಹ ಉಳಿಯದಂತಾಗುವದು. ಪ್ರಭುಸನ್ನಿಧಿಯಲ್ಲಿ ವಸ್ತುಸ್ಥಿತಿಯನ್ನು ನಿವೇದಿಸಿರುವೆನು; ಸಿಟ್ಟಾಗಬಾರದು."

ಮಾಳವೆಯರರಸನಾದ ಮುಂಜರಾಜನು ಈ ಸುದ್ದಿಯನ್ನು ಕೇಳಿದೊಡನೆಯೆ ಎದೆಯೊಡೆದನು. ಅವನ ಸೇನಾನಿಗಳಾದ ಧನಪತಿ-ಕೀರ್ತಿಸಿಂಹ-ವೀರಸೇನ ಮೊದಲಾದವರಾದರೂ ಕೈಕಾಲುಗೆಟ್ಟರು. ಸೈನಿಕರು ಭಯಭೀತರಾದರು. ಅಪರಿಮಿತವಾದ ಕನ್ನಡ ಸೇನೆಯೊಡನೆ ಕಾದಿ ಮರಣಹೊಂದುವದಕ್ಕೆ ತಾವು ಸಿದ್ಧರಿಲ್ಲವೆಂದು ಎಲ್ಲರೂ ಮುಂಜರಾಜನಿಗೆ ಹೇಳತೊಡಗಿದರು. ಎದೆಯೊಡೆದ ಮುಂಜರಾಜನು ತನ್ನ ಸೇನೆಯ ಈ ಭಯಗ್ರಸ್ತಸ್ಥಿತಿಯನ್ನು ನೋಡಿ ಮತ್ತಿಷ್ಟು ಬೆದರಿದನು. ದೊರೆತ ಸುಲಿಗೆಯನ್ನು ತೆಗೆದುಕೊಂಡು ಪಲಾಯನ ಮಾಡುವದೇ ಜಾಣ್ಮೆಯೆಂದು ಅವನಿಗೆ ತಿಳಿಯಿತು. ಕೂಡಲೆ ಅವನು ತನ್ನ ಸೈನ್ಯಸಹಿತವಾಗಿ ಮಾನ್ಯಖೇಟದಿಂದ ಕಾಲ್ದೆಗೆದನು.

ತೈಲಪನು ರಾಜಧಾನಿಗೆ ಬಂದು ನೋಡುತ್ತಾನೆ, ಮಾಳವೆಯರ ಒಂದು ಪಿಳ್ಳೆಸಹ ಇದ್ದಿಲ್ಲ. ಅವನು ಹಾಳಾದ ರಾಜಧಾನಿಯನ್ನು ನೋಡಿ ಬಹು ವ್ಯಸನಬಟ್ಟನು. ಪರಕ್ಷಣದಲ್ಲಿ ಅವನ ಹೃದಯವು ಸಂತಪ್ತವಾಯಿತು. ಕೂಡಲೆ ಅವನು-"ಎಲಾ! ಎಲ್ಲಿಗೆ ಹೋಗುವೆ?" ಎಂದು ಕ್ರೋಧೋದ್ಗಾರ ತೆಗೆದು, ಮಾಳವೆಯರನ್ನು ಬೆನ್ನಟ್ಟುವದಕ್ಕಾಗಿ ತನ್ನ ಸೈನ್ಯದೊಡನೆ ರಾಜಧಾನಿಯಿಂದ ತೆರಳಿದನು.



# ಪ್ರಣಯ ಪತ್ರಿಕೆ.

"ದೇವಿ! ಯಾರ ಭಾವಚಿತ್ರವದು?"

"ಪ್ರಭೆ, ಭಾವಚಿತ್ರವೆಲ್ಲಿರುವದೆ?"

"ದೇವಿ, ನೀವು ನನ್ನನ್ನು ಮೋಸಗೊಳಿಸಲೆತ್ನಿಸಬೇಡಿರಿ. ಇದೀಗ ನಿಮ್ಮ ಕೈಯೊಳಗಿನ ಭಾವಚಿತ್ರವನ್ನು ನಾನು ಕಣ್ಣಾರೆ ಕಂಡಿರುವೆನು. ನೀವು ಆ ಚಿತ್ರವನ್ನು ದಿಟ್ಟಿಸಿ ನೋಡತೊಡಗಿದ್ದಿರಿ. ನಾನು ಬರುವದನ್ನು ನೋಡಿ ಅದನ್ನು ಇಲ್ಲಿಯೆ ಬಚ್ಚಿಟ್ಟಿರಿ. ನೀವು ಬಲಗೈಯಲ್ಲಿ ಭಾವಚಿತ್ರವನ್ನು ಹಿಡಿದಿದ್ದಿರಿ; ಎಡಗೈಯಲ್ಲಿ ಒಂದು ಪತ್ರಿಕೆಯನ್ನು ಹಿಡಿದಿದ್ದಿರಿ. ನಾನು ಹೇಳುತ್ತಿರುವ ಸಂಗತಿಯು ನಿಜವಷ್ಟೆ? ಭಾವಚಿತ್ರದ ಸಂಗತಿಯು ನನ್ನಿಂದ ಬಚ್ಚಿಡುವಂತಹದಾಗಿದ್ದರೆ, ಅದನ್ನು ತಿಳಿದುಕೊಳ್ಳಲಿಕ್ಕೆ ನನ್ನ ದುರಾಗ್ರಹವಿಲ್ಲ. ನಾನು ನಿಮ್ಮ ದಾಸಿಯಾಗಿದ್ದರೂ ಬಾಲಸಖಿಯ ಸ್ಥಳದಲ್ಲಿರುವೆನೆಂಬದನ್ನು ಮರೆಯಬೇಡಿರಿ. ನೀವು ನೋಡುತ್ತಿದ್ದ ಭಾವಚಿತ್ರವು ಒಬ್ಬ ತೇಜಸ್ವಿಯಾದ ತರುಣನದೆಂಬದನ್ನು ನಾನು ಗುರತಿಸಿರುವೆನು."

"ನೀನು ಚಿತ್ರವನ್ನು ನೋಡಿದೆಯೇನು?"

"ನೀವು ಭಾವಚಿತ್ರವನ್ನು ಕೈಯಲ್ಲಿ ಹಿಡಿದು ನೋಡುತ್ತಿರುವಾಗ ಅದು ನನ್ನ ದೃಷ್ಟಿಗೆ ಬಿತ್ತು. ಪ್ರಾಪ್ತವಯಸ್ಕನ ಚಿತ್ರವನ್ನು ಉಪವರಳಾದ ಕನ್ಯೆಯು ಒಳ್ಳೇ ಪ್ರೇಮದಿಂದ ನೋಡುವವರಲ್ಲಿ ಒಂದು ರಹಸ್ಯವಿರಲಿಕ್ಕೆ ಬೇಕು."

"ಯಾವ ರಹಸ್ಯವೆ? ಪ್ರಭೆ, ನೀನು ಏನಾದರೊಂದು ನಿರರ್ಥಕನಾದ ಮಾತನಾಡತೊಡಗಿರುವೆ."

"ನನ್ನ ಮಾತುಗಳು ಅರ್ಥಪೂರ್ಣವಿರುವವು. ರಾಜಕುಮಾರಿಯರಂತಹ ಭಾಗ್ಯಶಾಲಿಗಳಾದ ತರುಣಿಯರು ಯಾವನೊಬ್ಬ ಸಾಧುಸಂತನ ಚಿತ್ರವನ್ನು ಸಂದರ್ಶಿಸುತ್ತ ಕುಳಿತುಕೊಳ್ಳುತ್ತಿರುವದಿಲ್ಲ. ಅವರು ಇಚ್ಛಾಪೂರ್ವಕವಾಗಿ ನೋಡಬೇಕಾದರೆ, ಆ ರೂಪಚಿತ್ರವು ಒಬ್ಬ ರಾಜನದಾಗಲಿ ರಾಜಕುಮಾರನದಾಗಲಿ ಇರಲಿಕ್ಕೆ ಬೇಕು. ಭಾವಚಿತ್ರವನ್ನು ನೋಡುವಾಗ ನಿಮ್ಮ ಕಣ್ಣುಗಳು ಸಹೇತುಕವಾಗಿದ್ದವು. ಮುಖದ ಮೇಲಿಂದ ನಿಮ್ಮ ಹೃದಯ ಚಿತ್ರವು ಎದ್ದು ಕಾಣುತ್ತಿತ್ತು. ಭಾವಚಿತ್ರವು ಒಬ್ಬ ಪ್ರತಿಭಾಸಂಪನ್ನನಾದ ತರುಣನದೆಂಬದೂ, ಅದನ್ನು ನೀವು ಮನಃಪೂರ್ವಕವಾಗಿ ನೋಡುತ್ತಿದ್ದಿರೆಂಬದೂ ನನಗೆ ತಿಳಿದಿರುವವು. ದೇವಿ, ನೀವು ನನ್ನ ಮುಂದೆ ಎಲ್ಲ ಸಂಗತಿಯನ್ನು ಹೇಳಲಿಕ್ಕೆ ಬೇಕು. ನೀವು ನೋಡುತ್ತಿದ್ದ ಭಾವಚಿತ್ರವನ್ನು ಎಲ್ಲಿಟ್ಟಿರುವಿರಿ? ಪ್ರಣಯ ಪತ್ರಿಕೆಯೆಲ್ಲಿರುವದು?"

"ನಿನಗೆ ನೇತ್ರಭ್ರಮೆಯಾಗಿದೆ. ನಾನು ಯಾರ ಭಾವಚಿತ್ರವನ್ನೂ ನೋಡುತ್ತಿರಲಿಲ್ಲ; ಪ್ರಣಯ ಪತ್ರಿಕೆಯನ್ನೂ ನಾನರಿಯೆನು."

"ನೀವು ನಿಮ್ಮ ರಹಸ್ಯವನ್ನು ನನ್ನಿಂದ ಗುಪ್ತವಾಗಿರಿಸುವಿರಾ? ಒಳ್ಳೇದು.

ಈ ಸ್ಥಿತಿಯು ಎಷ್ಟು ದಿನಗಳವರೆಗಿರುವದೋ ನೋಡೋಣ. ಪ್ರಸಂಗವಶದಿಂದ ನಿಮ್ಮ ರಹಸ್ಯದಲ್ಲಿ ನನ್ನನ್ನು ನೆರವಿಗೆ ತೆಗೆದುಕೊಳ್ಳುವ ವೇಳೆಯು ಬಂದಾಗ ನಾನು ಮಾತನಾಡುವೆನು. ಕಣ್ಣಾರೆ ಕಂಡ ವಿಷಯವನ್ನು ಗುಪ್ತವಾಗಿರಿಸಿ, ನೇತ್ರಭ್ರಮೆಯಾಗಿರುವದೆಂಬ ದೋಷಕೊಟ್ಟು ಉಳಿದುಕೊಳ್ಳುವ ನಿಮಗೆ ಬುದ್ಧಿಭ್ರಮೆಯಾಗಿರುವದೆಂದು ನಾನು ಏಕೆ ಅನ್ನಲಿಗನು? ನಿಮ್ಮ ರಹಸ್ಯವು ನನ್ನಿಂದ ಗುಪ್ತವಾಗಿರಿಸುವಂತಹದಾಗಿರದಿದ್ದರೂ, ನೀವು ಆ ಸಂಗತಿಯನ್ನು ಯಾವ ಕಾರಣದಿಂದಲೋ ಬೈಲಿಗೆ ತರಲಾರದವರಾಗಿರುವಿರಿ. ಆಜ್ಞೆಯಾದರೆ ನಾನು ಈಗಲೆ ನಿಮ್ಮ ರಹಸ್ಯವನ್ನು ಬೈಲಿಗೆ ತರುತ್ತೇನೆ."

"ಪ್ರಭಾವತಿ, ನೀನು ಹಟಮಾರಿಯು. ನಿನ್ನ ಚಂಡಿತನಕ್ಕಾಗಿ ನಾನು ಬೇಸತ್ತೆನು."

"ದೇವಿ, ನೀವು ನನ್ನ ವಿಷಯವಾಗಿ ಔದಾಸೀನ್ಯಭಾವವನ್ನು ತಳೆಯಬೇಡಿರಿ. ನಿಮ್ಮ ರಹಸ್ಯವು ನನ್ನಿಂದ ಗುಪ್ತವಾಗಿರಿಸದಂತಹದಿದ್ದರೆ ಮಾತ್ರ ಕೇಳಬೇಕೆಂದು ವಿಜ್ಞಾಪನೆಯುಂಟು."

"ಒಳ್ಳೇದು, ಎಲ್ಲ ಸಂಗತಿಗಳನ್ನು ಹೇಳುತ್ತೇನೆ." ಎಂದು ತ್ರೈಲಪದೇವನ ಭಗಿನಿಯಾದ ಕುಸುಮಕುಮಾರಿಯು ನುಡಿದು, ಕುಳಿತ ಮಂಚದಿಂದೆದ್ದು ಅಲ್ಲಿಯ ಒಂದು ಪೆಟ್ಟಿಗೆಯಲ್ಲಿದ್ದ ಸುವರ್ಣಮಂಜೂಷವನ್ನು ತೆಗೆದು ತನ್ನ ದಾಸಿಯಾದ ಪ್ರಭಾವತಿಗೆ ತೋರಿಸಿ:—"ಪ್ರಭೆ, ಈ ಕರಂಡಕವನ್ನು ನೀನು ಇದಕ್ಕಿಂತ ಮೊದಲು ನೋಡಿದ್ದೆಯೇನು?"

"ದೇವಿ, ನೀವು ವಿಷಯಾಂತರ ಮಾಡಿ ಪ್ರಸ್ತುತ ಸಂಗತಿಯನ್ನು ಮರೆಯಿಸಬೇಕೆಂಬಂತೆ ತೋರುತ್ತದೆ. ಇಷ್ಟೇಕೆ ವಾದವಿವಾದವು? ನಿಮ್ಮ ರಹಸ್ಯವನ್ನು ಹೇಳುವ ಮನಸ್ಸಿಲ್ಲದಿದ್ದರೆ ಅದನ್ನು ತಿಳಿದುಕೊಳ್ಳಲಿಕ್ಕೆ ನನ್ನ ದುರಾಗ್ರಹವೂ ಇಲ್ಲ."

"ನಾನು ವಿಷಯಾಂತರ ಮಾಡಿಲ್ಲ. ನೀನು ಕೇಳುತ್ತಿರುವ ವಿಷಯಕ್ಕೂ ಈ ಸುವರ್ಣಮಂಜೂಷೆಗೂ ನಿಕಟವಾದ ಸಂಬಂಧವಿರುವದರಿಂದಲೇ ನಿನ್ನನ್ನು ವಿಚಾರಿಸುತ್ತಲಿರುವೆನು. ಈ ಕರಂಡಕವನ್ನು ಇದಕ್ಕಿಂತ ಪೂರ್ವದಲ್ಲಿ ನೀನು ಎಂದಾದರೂ ನೋಡಿದ್ದೆಯೇನು?"

"ಓಹೋ! ನೋಡದೇನು ಮಾಡಲಿ? ನಾನು ಇದನ್ನು ಬುದ್ಧವಿಹಾರದಲ್ಲಿ ಕಂಡಿದ್ದೆನು.'

"ಇದು ಇಲ್ಲಿಗೆ ಹೇಗೆ ಬಂತು?"

"ಜಡವಸ್ತುವು ತಾನಾಗಿ ಹೇಗೆ ಬರುವದು? ಯಾರಾದರೂ ತಂದರೆ ಮಾತ್ರ ಬರುತ್ತದೆ."

"ಅದು ನನಗೆ ತಿಳಿಯುತ್ತದೆ. ಇದನ್ನು ಇಲ್ಲಿಗೆ ತಂದವರಾರು?"

"ನಾನೇ."

"ಇಲ್ಲಿಗೆ ತಂದ ಕಾರಣವೇನು?"

ಬುದ್ಧತಾಪಸಿಯುವರಾದ ಸರ್ವಾರ್ಥ ಸಿದ್ಧಿಯವರ ಹೇಳಿಕೆಯ ಮೇರೆಗೆ."

"ಅವರು ಇದನ್ನು ನನ್ನ ಬಳಿಗೆ ಕಳುಹಿಸಿದ ಕಾರಣವೇನು?"

"ಇದು ನಿಮಗೇ ತಲುಪತಕ್ಕದ್ದಿರುವದೆಂಬ ಕಾರಣದಿಂದ."

"ಇದನ್ನು ಅವರ ಬಳಿಗೆ ಯಾರಾದರೂ ಕೊಟ್ಟು ಕಳುಹಿದ್ದರೇನು?"

"ಒಬ್ಬ ದೂತನು ತಂದು ಕೊಟ್ಟನಂತೆ."

"ಎಲ್ಲಿಯ ದೂತನು?"

"ಪರಮಾರ ವಾಕ್ಪತಿ ಮುಂಜರಾಜನ ದೂತನು."

"ಏನೆಂದು ಹೇಳಿ ಕೊಟ್ಟು ಹೋದನು?"

"ಆ ರಹಸ್ಯವು ಪೆಟ್ಟಿಗೆಯಲ್ಲಿರುತ್ತದೆಂದು ಹೇಳಿರುವನಂತೆ!"

"ಇದೇನು? ನಿನ್ನ ಸಂದಿಗ್ಧವಾದ ಮಾತುಗಳ ಅರ್ಥವೇ ಆಗಲೊಲ್ಲನು."

"ದೇವಿ, ಈ ಸುವರ್ಣಮಂಜೂಷೆಗೂ ನಿಮ್ಮ ರಹಸ್ಯಕ್ಕೂ ನಿಕಟವಾದ ಸಂಬಂಧವೇನಿರುವದೆಂಬದನ್ನು ಹೇಳಲಿಲ್ಲವಲ್ಲ."

"ನೀನು ಈ ಕರಂಡಕವನ್ನು ತಂದು ನನಗೆ ತಿಳಿಸದೆ ಇಲ್ಲಿಟ್ಟು ಹೋದ ಕಾರಣವೇನು?"

"ನಾನು ಬಂದಾಗ ನೀವು ನಿದ್ದೆಯಲ್ಲಿದ್ದಿರಿ. ಅಂತೆಯೆ ಇಟ್ಟು ಹೋದೆನು."

"ಸಖಿ, ಈ ಸುವರ್ಣ ಕರಂಡಕದಲ್ಲಿ ಎರಡು ಅಭೂತಪೂರ್ವವಾದ ವಸ್ತುಗಳು ಹೊರಟಿರುವವು."

"ಅವುಗಳು ಒಂದಕ್ಕಿಂತ ಮತ್ತೊಂದು ಮಿಗಿಲಾಗಿ ಕಾಣುತ್ತಿರಬಹುದು."

"ಹೌದು."

"ಆ ವಸ್ತುಗಳಾವವು?"

"ಇಗೋ, ಇಲ್ಲಿ ನೋಡು. ಈ ಭಾವಚಿತ್ರವು ಯಾರದೆಂಬದನ್ನು ನೀನು ಗುರತಿಸುವೆಯೇನು? ನಾನು ನೋಡುತ್ತಿದ್ದ ಚಿತ್ರವು ಇದೇ. ನೋಡು, ಈ ಚಿತ್ರವು ಎಷ್ಟು ಸರಸಾಗಿದೆ?"

"ಇರದೇನು ಮಾಡೀತು, ದೇವಿ? ಮನಸ್ಸಿಗೆ ಬಂದದ್ದು ಸರಸಾಗಲಿಕ್ಕೆ ಬಾರದೆ? ಬೇಕಾದದ್ದು ಬೆಲ್ಲಕ್ಕಿಂತ ಸವಿ." ಎಂದು ನುಡಿದು ಪ್ರಭಾವತಿಯು ಆ ಚಿತ್ರವನ್ನು ಕೈಯಲ್ಲಿ ತೆಗೆದುಕೊಂಡು ಮುಗುಳು ನಗೆಯಿಂದ ನಗುತ್ತ:—"ದೇವಿ, ಈ ಚಿತ್ರವು ನಿಮಗೆ ಬಹು ಮುದ್ದಾಗಿ ತೋರಿತೇನು? ರಾಜಪದ್ಧತಿಯ ಉಡಿಗೆ-ತೊಡಿಗೆಗಳನ್ನು ಧರಿಸಿದ ಅಂತಃಪುರದ ಪರಿಚಾರಕನ ಭಾವಚಿತ್ರವೆಂಬಂತೆ ನನಗೆ ಕಾಣುವದು."

"ಪ್ರಭೆ! ನಿನ್ನ ವಿನೋದಕ್ಕೆ ಮೇರೆದಪ್ಪಿತು!" ಎಂದು ಕುಸುಮಕುಮಾರಿಯು ಕೈಗಡದ ಸಿಟ್ಟಿನಿಂದ ನುಡಿದಳು:—"ಇದು ಒಬ್ಬ ರಾಜಾಧಿರಾಜನ ಚಿತ್ರವಿರುವದು."

"ಇರಬಹುದು. ಮುಂದೆ ಏನು ಮಾಡಬೇಕೆನ್ನುವಿರಿ?"

"ಈ ಚಿತ್ರವು ಸುವರ್ಣ ಕರಂಡಕದಲ್ಲಿ ಹೊರಟಿತು."

"ಹೀಗೇನು?" ಎಂದು ಪ್ರಭಾವತಿಯು ನುಡಿದು, ವಿಸ್ಮಯದಿಂದ:—"ಚಿನ್ನದ ಸಂದುಕದಲ್ಲಿ ಹೊರಟ ಇನ್ನೊಂದು ಅಪರೂಪವಾದ ವಸ್ತುವಾವುದು?"

"ಅದಂತೂ ತೀರ ಅಪೌಲ್ಯವಿರುವದು."

"ಅಪೌಲ್ಯವೆಂದರೆ?-ಬೆಲೆಯಿಲ್ಲದ್ದೇನು?"

"ಬೆಲೆ ಕಟ್ಟಲಿಕ್ಕೆ ಅಸಾಧ್ಯವಾದದ್ದಿರುವದು."

"ಪ್ರಣಯಾಂಧರು ಕಣ್ಣಿದ್ದರೂ ಕುರುಡರಂತೆ ಅವಸ್ಥೆಯನ್ನು ಹೊಂದುತ್ತಾರೆನ್ನುವದು ಸತ್ಯ. ನಿಮಗೆ ಅದರ ಬೆಲೆಯು ಕಲ್ಪನಾತೀತವಿರಬಹುದು. ದೇವೀ, ಆ ಒಡವೆಯೆಲ್ಲಿರುವದು? ತೋರಿಸಿರಿ."

"ಇದು ನೋಡು. ಪರಮಾರ ವಾಕ್ಪತಿ ಮುಂಜಮಹಾರಾಜರ ಸ್ವಹಸ್ತಾಕ್ಷರದ ಪತ್ರಿಕೆಯು. ಪತ್ರದ ಸಂಗತಿಗಳು ಎಷ್ಟು ಸುಂದರತರವಿರುವವೋ, ಅಷ್ಟೇ ಅಕ್ಷರಗಳು ಸುಂದರವಾದವುಗಳಾಗಿರುವವು." ಎಂದು ನುಡಿದು, ನಗೆಮೊಗದಿಂದ ತನ್ನ ಬಳಿಯಲ್ಲಿದ್ದ ಪತ್ರವನ್ನು ತನ್ನ ಸಹಚರಿಯು ಕೈಯಲ್ಲಿ ಕೊಟ್ಟಳು. ಪ್ರಭಾವತಿಯು ಆ ಪತ್ರವನ್ನು ಕೈಯಲ್ಲಿ ತೆಗೆದುಕೊಂಡು ನಸುನಗುತ್ತ:—"ಓಹೋ! ಇದು ಪ್ರಣಯ ಪತ್ರಿಕೆಯು!" ಎಂದು ನುಡಿದು ಪತ್ರವನ್ನೋದಲಾರಂಭಿಸಿದಳು.

"ಪ್ರಿಯ ಕುಸುಮಕುಮಾರಿ!

ಲಾವಣ್ಯದಂತಹ ಮೋಹಕ ವಸ್ತುವು ಜಗತ್ತಿನಲ್ಲಿ ಇರಲಾರದೆಂದು ನನ್ನ ಬುದ್ಧಿಗೆ ತೋಚುತ್ತದೆ. ಸೃಷ್ಟಿಕರ್ತನು ತನ್ನ ಬುದ್ಧಿಬಲವೆಲ್ಲವನ್ನು ವೆಚ್ಚಮಾಡಿ ನಿರ್ಮಿಸಿದ ಲಾವಣ್ಯವು ಅವರ್ಣನೀಯವೆಂಸರಿ. ಸುಭಗೆ, ನಾನು ನಿನ್ನನ್ನು ಕಣ್ಣಾರೆ ಕಂಡಿರದಿದ್ದರೂ ಅತಿಯಾದ ಪ್ರಯಾಸದಿಂದ ನಿನ್ನ ಭಾವಚಿತ್ರವನ್ನು ತರಿಸಿಕೊಂಡು ಕಣ್ತುಂಬ ನೋಡಿದೆನು. ಜನಮೂರ್ತಿಗಿಂತಲೂ ಹೆಚ್ಚಿನ ಲಾವಣ್ಯವು ಭಾವಚಿತ್ರದಲ್ಲಿರುವದು. ಈಶ್ವರನಿರ್ಮಿತವಾದ ಅದ್ವಿತೀಯ ಲಾವಣ್ಯವನ್ನು ಹೊಗಳುವ ಯೋಗ್ಯತೆಯು ಮನುಷ್ಯರಿಗೆ ಹೇಗೆ ಬರುವದು? ಚಿತ್ರಕ್ಕಿಂತಲೂ ಪ್ರತ್ಯಕ್ಷ ವಸ್ತುವಿನಲ್ಲಿ ಹೆಚ್ಚಾದ ಲಾವಣ್ಯವಿರಲಿಕ್ಕೆಬೇಕು. ಭಗವಾನನು ತನ್ನ ಬುದ್ಧಿಯನ್ನೆಲ್ಲ ವೆಚ್ಚಮಾಡಿ ನಿರ್ಮಾಣ ಮಾಡಿದ ಸೌಂದರ್ಯರಾಶಿಯನ್ನು ಚಿತ್ರಿಸಲು ಮಾನವನು ಸಮರ್ಥನಾಗಬಹುದೆ?

ನಾನು ಕೇವಲ ರೂಪಾಂಧನಾಗಿ ನಿನ್ನನ್ನು ಬಯಸಿರುವೆನೆಂದು ತಿಳಿಯಬೇಡ. ನಾನು ಸೌಂದರ್ಯ ಮೂಢನಲ್ಲ, ಗುಣಗ್ರಾಹಿಯಿರುವೆನು. ನಿನ್ನ ಗುಣಗಾನವನ್ನು ನಾನು ಯಥೇಷ್ಟವಾಗಿ ಕೇಳಿರುವೆನು. ನೀನು ಸದ್ಗುಣಗಳ ಮೂರ್ತಿಮಂತ ದೇವತೆಯಿರುವೆ. ಅಂತೆಯೇ ನನ್ನ ನ್ಯನತರವಾದ ಮನಸ್ಸಿನ ಮೇಲೆ ನೀನು ನಿನ್ನ ವರ್ಚಸ್ಸವನ್ನು ಪ್ರಸ್ಥಾಪಿಸಿರುವೆ.

ನಾನು ದಂಡೆತ್ತಿ ಬಂದಾಗ ನೀನು ಮಾನ್ಯಖೇಟದಲ್ಲಿದ್ದರೆ ಕ್ಷಾತ್ರಧರ್ಮಾನು ರೋಧವಾಗಿ ನಿನ್ನನ್ನು ವಶಪಡಿಸಿಕೊಳ್ಳುತ್ತಿದ್ದೆನು. ನೀನು ವಾತಾಪಿಪುರದಲ್ಲಿದ್ದುದ ರಿಂದ ನನ್ನ ಮನೋರಥವು ಪೂರ್ಣವಾಗಲಿಲ್ಲ.

ನಾನು ನಿನ್ನ ಗುಣರೂಪಗಳ ಖ್ಯಾತಿಯನ್ನು ಕೇಳಿರುವಂತೆ ನೀನಾದರೂ ಈ ಪರಮಾರ ವಾಕ್ಪತಿ ಮುಂಜಮಹಾರಾಜನ ಕೀರ್ತಿಯ ಖ್ಯಾತಿಯನ್ನು ಕೇಳಿರುವೆ ಯೆಂಬುದು ನನಗೆ ಗೊತ್ತಿರುವದು. ಶೌರ್ಯ-ಧೈರ್ಯ-ಸಾಹಸಗಳ ಪ್ರಸಿದ್ಧಿಯಿಂದ ಸುಶೀಲ ತರುಣಿಯರ ಮನಸ್ಸು ಸಂತುಷ್ಟವಾಗುತ್ತಿರುವದಿಲ್ಲ. ಗುಣ-ರೂಪ-ಯೌವನಗಳ ಕಡೆಗೆ ಅವರ ಲಕ್ಷ್ಯವು ಹೋಗುವದು. ಅಂತೆಯೆ ನನ್ನ ಭಾವಚಿತ್ರ ವನ್ನು ಕಳುಹಿಸಿರುವೆನು.

ನಾನು ನಿನ್ನಲ್ಲಿ ಅನುರಾಗವುಳ್ಳವನಾಗಿರುವೆನು. ಗುಣರೂಪ ಮುಗ್ಧನಾದ ನನಗೆ ನಿನ್ನ ಹೃದಯಪ್ರದೇಶದಲ್ಲಿ ಇಂಬುಗೊಡು. ನೀನು ನನ್ನ ಈ ಪ್ರಣಯ ಪತ್ರಿಕೆಯನ್ನುಪೇಕ್ಷಿಸಿದರೆ ಕ್ಷಾತ್ರಧರ್ಮೋಚಿತವಾದ ಕೃತಿಯಿಂದ ನಿನ್ನನ್ನು ವಶ ಪಡಿಸಿಕೊಳ್ಳುವೆನು.

ರಾಷ್ಟ್ರಕೂಟರಾಜನು ಹಾಗು ನಿನ್ನ ಬಂಧುವಾದ ತೈಲಪದೇವನು ಕಿಂಬ ಹುನಾ ಕರ್ನಾಟಕ ಸಾಮ್ರಾಜ್ಯವು ನನ್ನ ಪ್ರತಿಸ್ಪರ್ಧಿಯಾಗಿದ್ದರೂ, ನಿನ್ನನ್ನು ವರಿ ಸುವ ಕಾರ್ಯದಲ್ಲಿ ನಾನು ಯಾವ ವಿಧದ ವೈರಭಾವವನ್ನೂ ತಳೆದಿರುವದಿಲ್ಲ. ನೀನು ಕನ್ನಡಿಗಳಾದರೂ ನನಗೆ ವಿರೋಧಿಯಾಗಿಲ್ಲ. ಪ್ರಣಯವು ದುರ್ನಿವಾರವು. ಅದು ಎಲ್ಲ ವಿಧದ ಉಪಾಧಿಗಳನ್ನು ಬದಿಗಿರಿಸುತ್ತದೆ.

ನಮ್ಮಿರ್ವರ ಪ್ರೇಮವಿವಾಹವಾದ ಮೇಲೆ ಕರ್ನಾಟಕ ಸಾಮ್ರಾಜ್ಯಕ್ಕೂ ಮಾಳವ ಸಾರ್ವಭೌಮರಿಗೂ ಸ್ನೇಹವುಂಟಾಗಬೇಕೆಂದು ಭಗವದಿಚ್ಛೆಯಿದ್ದರೆ, ನಮ್ಮ ವಿವಾಹವು ನಿಜವಾಗಿ ರಾಷ್ಟ್ರಹಿತಕಾರಕವಾಗಿಯೇ ಪರಿಣಮಿಸುವದು.

ಪ್ರಿಯ ಕುಸುಮಕುಮಾರಿ, ನೀನು ಸುಜ್ಞಳಿರುವೆ; ಸುವಿದ್ಯಾವಂತಳಿರುವೆ; ಗುಣಾಢ್ಯಳಿರುವೆ. ಸರ್ವಗುಣ ಸಂಪನ್ನಳಾದ ನಿನಗೆ ಹೆಚ್ಚಿಗಿನ್ನೇನು ಬರೆಯಲಿ? ಪ್ರಣಯಾಪೇಕ್ಷಿಯಾದ ಈ ವಾಕ್ಪತಿ ಮುಂಜಮಹಾರಾಜನನ್ನು ಅಪೇಕ್ಷಿಸುವೆಯಾ?-ಉಪೇಕ್ಷಿಸುವೆಯಾ?

ನಿನ್ನ ಚಿರಂತನ ಸ್ನೇಹಾಕಾಂಕ್ಷಿ,
ಪರಮಾರ ವಾಕ್ಪತಿ ಮುಂಜಮಹಾರಾಜ."

ಪ್ರಭಾವತಿಯು ಮುಗುಳುನಗೆ ನಗುತ್ತ ಪತ್ರವನ್ನೋದತೊಡಗಿದ್ದಳು. ಪತ್ರ ವನ್ನೋದುವದಾದ ಕೂಡಲೆ ಅವಳು ಕುಸುಮಕುಮಾರಿಯನ್ನು ಕುರಿತು:—

"ಮಹಾರಾಣಿಯವರೆ!............"

"ಇದೇನೆ? ಹುಡುಗಾಟಿಕೆಗೆ ಪ್ರಾರಂಭಿಸಿದೆ?"

"ದೇವಿ!" ಪ್ರಭಾವತಿಯು ಕುಸುಮಕುಮಾರಿಯನ್ನು ಕುರಿತು ನಗುತ್ತ:—

"ನಾನು ಹುಡುಗಾಟಿಕೆ ಮಾಡುವದಿಲ್ಲ; ಮನಃಪೂರ್ವಕವಾಗಿ ಮಾತಾಡಿದೆನು. ನೀವು ಮುಂಜಮಹಾರಾಜರನ್ನು ವರಿಸಲಿಕ್ಕೆ ಸಿದ್ಧರಾದ ಮೇಲೆ ನಿಮಗೆ ಮಹಾರಾಣಿಯವರೆಂದು..........."

"ಛೇ! ಛೇ!"

"ಅದೇಕೆ! ನೀವು ಮುಂಜರಾಜರನ್ನು ವರಿಸುವದಿಲ್ಲವೇನು?"

"ಪ್ರಭೆ! ಭವಿಷ್ಯಕಾಲದ ಘಟನೆಗಳನ್ನು ತಿಳಿಯಲಾರೆನು. ನಾನು ಭವಿಷ್ಯವಾದಿಯಾಗಿದ್ದರೆ ಅವುಗಳನ್ನು ಕಂಡು ಹಿಡಿಯಬಹುದಾಗಿತ್ತು."

"ಹಿಂಗೇನು?" ಎಂದು ಪ್ರಭಾವತಿಯು ನುಡಿದು, ನಗುತ್ತ:—"ನೀವು ಭವಿಷ್ಯವಾದಿಗಳಲ್ಲನೆಂಬದು ನನಗೆ ತಿಳಿದಿದೆ. ಭವಿಷ್ಯವಾದಿಗಳಾಗಿರದಿದ್ದರೂ ಪ್ರಯತ್ನವಾದಿಗಳಾಗಿರಬಹುದು. ಸಾಹಸಿಗರಿಗೆ ಯಾವದು ತಾನೆ ಅಸಾಧ್ಯವು?"

"ಪ್ರಭೆ, ನನ್ನ ಬಂಧುಗಳಾದ ತೈಲಪದೇವ ರಾಜರು ಮುಂಜಮಹಾರಾಜರ ವೈರಿಗಳಿರುವರು."

"ಪ್ರಣಯಿಗಳಾದ ನಿಮ್ಮಿಂದ ಆ ವೈರವು ಶಾಂತವಾಗಬಹುದು."

"ಪ್ರಭೆ, ಮುಂದೆ ಏನಾದರೂ ಆಗಬಹುದು. ಕುಲಶೀಲಗಳನ್ನರಿತು ಕೊಳ್ಳದೆ ಧುಡುಂಪ್ರವೇಶ ಮಾಡುವದು ವಿಹಿತವಾಗಲಾರದು. ಇರುಳು ಕಂಡ ಬಾವಿಯಲ್ಲಿ ಹಗಲು ಹಾರಿದಂತಾಗಬಾರದು. ಕನ್ನಡಿಗರಿಗೂ ಮಾಳವೆಯರಿಗೂ ಅಸ್ಥಿವೈರವಿರುವದು. ಮುಂಜಮಹಾರಾಜರು ಲಂಪಟಪ್ರಿಯರೂ ಅನ್ಯಾಕ್ರಾಂತ ಮಾಡುವ ಉತ್ಸಾಹದವರೂ ಆಗಿರುವರು. ಯಾವದೊಂದು ನಿಮಿತ್ತದಿಂದ ಅವರು ನನ್ನಲ್ಲಿ ಅನುರಾಗವುಳ್ಳವರಾಗಿದ್ದರೆ, ಮುಂದ ಮತ್ತೊಂದು ನಿಮಿತ್ತದಿಂದ ದ್ವೇಷ ಮಾಡಲಿಕ್ಕಿಲ್ಲವೆಂದು ಯಾರು ಹೇಳಬೇಕು? ಪತ್ರವನ್ನೂ ಭಾವಚಿತ್ರವನ್ನೂ ನೋಡಿ ನನ್ನ ಹೃದಯವು ಅಧೀರವಾಗಿರುವದೇನೋ ನಿಜವು. ಕೇವಲ ಪ್ರಣಯ ಪತ್ರಿಕೆಯ ಹಾಗು ಭಾವಚಿತ್ರದ ಮೇಲೆ ಅವಲಂಬಿಸುವದು ಯೋಗ್ಯವಲ್ಲೆಂದು ನನ್ನ ಅಭಿಪ್ರಾಯವು."

"ಪ್ರತ್ಯಕ್ಷವಾಗಿ ಕಂಡ ಹೊರತು ವ್ಯಕ್ತಿಯ ಗುಣದೋಷ ಪರೀಕ್ಷೆಯಾಗುವದಿಲ್ಲೆಂದು ನಿಮ್ಮ ಮಾತಿನ ಅರ್ಥವಿರುವದೆಂದ ಹಾಗಾಯಿತು. ನೀವು ಮುಂಜರಾಜರಂತಹ ತೇಜಸ್ವಿಗಳಾದ ತರುಣರನ್ನು ಉಪೇಕ್ಷಿಸುವಿರೇನು? ಅವರ ಪರಾಕ್ರಮವೂ ಸಾಹಸವೂ ವಿಖ್ಯಾತವಾದವುಗಳಿರುವವು."

"ಪ್ರಭೆ, ನನ್ನ ಮನಸ್ಸು ಅತ್ಯಂತ ಚಂಚಲವಾಗಿರುವದು. ಈ ವಿಷಯದಲ್ಲಿ ನಾನು ಏನನ್ನೂ ನಿಶ್ಚಯಿಸಲಾರದವಳಾಗಿರುವೆನು."

"ದೇವಿ, ಇನ್ನೂ ಬಚ್ಚಿಡುವಿರೇಕೆ? ನಾನು ನಿಮ್ಮ ಮನೋದಯವನ್ನು ಪೂರಾ ಗುರುತಿಸಿದೆನು. ನೀವು ಈಗಾಗಲೆ ನಿಮ್ಮ ಹೃದಯಸಿಂಹಾಸನದ ಮೇಲೆ ಮುಂಜಮಹಾರಾಜರನ್ನು ಕುಳ್ಳಿರಿಸಿಕೊಂಡಿರುವಿರಿ. ನಿಮ್ಮ ಅಭಿನಯಗಳ

ಮೇಲಿಂದ ನಿಮ್ಮ ಮನಃಸ್ಥಿತಿಯನ್ನು ನಾನು ಪೂರಾ ಅರಿತುಕೊಂಡೆನು."

"ಮನಸ್ಸಿನೊಳಗಿನ ಇಂಗಿತವನ್ನು ಕಂಡು ಹಿಡಿಯುವಂತಹ ಜಾಣ್ಮೆಯನ್ನು ನೀನು ಎಲ್ಲಿ ಕಲಿತೆಯವ್ವಾ?" ಎಂದು ಕುಸುಮಕುಮಾರಿಯು ನುಡಿದು:—"ಪ್ರಭೆ, ನನ್ನ ಮನಸ್ಸಿನಲ್ಲಿ ಏನಿದ್ದರೇನು ಮಾಡಬೇಕಾಗಿದೆ? ತಾಯಿಯಾದ ಬೊಂಧಾದೇವಿಯೂ ಬಂಧುವಾದ ತೈಲಪದೇವನೂ ನನ್ನ ಮನೋಭಿಲಾಷೆಯನ್ನು ಈಡೇರಿಸಲಿಕ್ಕೆ ಸಿದ್ಧರಾದರೆ ಎಲ್ಲ ಬಗೆಯಿಂದಲೂ ಒಳಿತಾಗುವದು. ತಾಯಿಯನ್ನು ಹೇಗಾದರೂ ಮೆಚ್ಚಿಸಬಹುದು; ಅಣ್ಣನ ಮನಸ್ಸನ್ನು ಒಲಿಸಿಕೊಳ್ಳುವದೇ ಕಷ್ಟ. ಮುಂಜ ಮಹಾರಾಜರೂ ಅವನೂ ಪರಸ್ಪರರ ಅಸ್ತಿ ವೈರಿಗಳಾಗಿರುವರು."

"ನಿಮ್ಮಂತಹ ಸುಶೀಲರ ಇಚ್ಛೆಯಂತೆ ನಡೆಯಲಿಕ್ಕೆ ಯಾವ ಬಂಧುಜನರೂ ಹಿಂದು ಮುಂದ ನೋಡುವದಿಲ್ಲ"

ಪ್ರಭಾವತಿಯು ಹೀಗೆ ನುಡಿಯುತ್ತಿರಲು, 'ಓಂ ನಮೋ ಬುದ್ಧಾಯ' ಎಂದು ಬುದ್ಧ ನಾಮ-ಘೋಷಣೆ ಮಾಡುತ್ತ ಬೌದ್ಧ ತಾಪಸಿಯಾದ ಸರ್ವಾರ್ಥ-ಸಿದ್ಧಿಯು ಅಲ್ಲಿಗೆ ಆಗಮಿಸಿದಳು. ಕೂಡಲೆ ಕುಸುಮಕುಮಾರಿಯು ಕುಳಿತ ಸ್ಥಳದಿಂದೆದ್ದು ತಾಪಸಿಯನ್ನು ಎದುರ್ಗೊಂಡು ಕರೆತಂದು ಉಚ್ಚಾಸನದ ಮೇಲೆ ಕುಳಿತುಕೊಳ್ಳ ಹೇಳಿದಳು. ಸರ್ವಾರ್ಥಸಿದ್ಧಿಯು ಆಸನದಲ್ಲಿ ಕುಳಿತುಕೊಂಡ ಬಳಿಕ:—"ರಾಜಕುಮಾರಿ, ಸುವರ್ಣಮಂಜೂಷೆಯಲ್ಲಿದ್ದ ಅಮೌಲ್ಯವಾದ ಒಡವೆಗಳಾವವು? ಸುವರ್ಣ ಕರಂಡಕದಲ್ಲಿ ಒಡವೆಗಳು ಬರಬೇಕೆಂದರೆ ಅವು ಬಂಗಾರಕ್ಕಿಂತಲೂ ಮಿಗಿಲಾದವುಗಳಿರಲಿಕ್ಕೆ ಬೇಕು. ವಸ್ತುಸ್ಥಿತಿಯನ್ನು ಅರಿತುಕೊಳ್ಳುವದಕ್ಕಾಗಿಯೆ ನಾನು ಬುದ್ಧಿಪೂರ್ವಕವಾಗಿ ಇಲ್ಲಿಗೆ ಬಂದೆನು."

ಸರ್ವಾರ್ಥಸಿದ್ಧಿಯು ಬೌದ್ಧ ಭಿಕ್ಷುಕಳಾಗಿದ್ದು ಧರ್ಮದ ಮೂರ್ತಿಮಂತ ದೇವತೆಯಾಗಿದ್ದಳು. ಇವಳು ಜನರಿಗೆ ಬೌದ್ಧಧರ್ಮದ ತತ್ವಗಳನ್ನು ಉಪದೇಶ ಮಾಡುತ್ತ ಜನರ ಮನಸ್ಸನ್ನು ಆ ಧರ್ಮದ ಕಡೆಗೆ ಎಳೆದುಕೊಳ್ಳಲೆತ್ನಿಸುತ್ತಿದ್ದಳು. ಇವಳ ಪ್ರಯತ್ನವು ಬಹಳೇ ಸೂಕ್ಷ್ಮತರದಿಂದ ನಡೆದಿತ್ತು. ಶ್ರೀಮದಾದ್ಯ ಜಗದ್ಗುರು ಶಂಕರಾಚಾರ್ಯರು × ಭರತವರ್ಷದೊಳಗಿನ ಬೌದ್ಧಧರ್ಮವನ್ನು ನಾಮಶೇಷ ಮಾಡಿ, ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿದ್ದರು. ಅವರು ತಮ್ಮ ಅವತಾರ ಕಾರ್ಯವನ್ನು ಮುಗಿಸಿ ಎರಡು ಶತಕಗಳಾಗುತ್ತ ಬಂದಿದ್ದವು. ಅವರು ಬೌದ್ಧ

× ಶ್ರೀಮಜ್ಜಗದ್ಗುರು ಶಂಕರಾಚಾರ್ಯರು ಆಸೇತುಹಿಮಾಚಲಪರ್ಯಂತ ಸಂಚರಿಸಿ ಸನಾತನ ಧರ್ಮದಿಗ್ವಿಜಯ ಮಾಡಿದರು. ಇವರು ಬ್ರಹ್ಮದೇವರ ಅವತಾರವೆನಿಸಿಕೊಂಡಿದ್ದ ಮಂಡನ ಮಿಶ್ರರನ್ನೂ ಅವರ ಪತ್ನಿಯರಾದ ಸರಸ್ವತಿದೇವಿಯವರನ್ನೂ ವಾದದಲ್ಲಿ ಸೋಲಿಸಿದ್ದರಿಂದ ವೈದಿಕ ಧರ್ಮದ ಜ್ಯೋತಿಯು ಪ್ರಜ್ವಲಿತವಾಯಿತು. ಆಚಾರ್ಯರು ವೈದಿಕಧರ್ಮ ರಕ್ಷಣೆಗಾಗಿ ಭರತಖಂಡದ ನಾಲ್ಕೂ ದಿಕ್ಕಿಗೆ ನಾಲ್ಕು ಪೀಠಗಳನ್ನು ಸ್ಥಾಪಿಸಿದರು. ಅಂದಿನಿಂದ ಬೌದ್ಧಧರ್ಮವು ಭಾರತವರ್ಷದಲ್ಲಿ ನಾಮಶೇಷವಾಯಿತು.

ಧರ್ಮವನ್ನು ನಷ್ಟಪಡಿಸಿದ್ದರೂ, ಹಿಂದುಸ್ಥಾನದಲ್ಲಿ ಬೌದ್ಧಭಿಕ್ಷುಗಳು ಅಲ್ಪಮಟ್ಟಿಗೆ ವಾಸವಾಗಿದ್ದರು. ಅವರು ವಿಹಾರಗಳಲ್ಲಿ ಕಾಲಹರಣಮಾಡುತ್ತಿದ್ದರು. ಅವರಲ್ಲಿ ಕೆಲವು ಭಿಕ್ಷುಗಳು ತಮ್ಮ ಧರ್ಮದ ಪ್ರಸಾರಕ್ಕಾಗಿ ಯತ್ನಿಸುತ್ತಿದ್ದರು. ಮಾನ್ಯಖೇಟದ ಬುದ್ಧವಿಹಾರದಲ್ಲಿ ವಾಸವಾಗಿದ್ದ ಸರ್ವಾರ್ಥಸಿದ್ಧಿಯೆಂಬ ಬೌದ್ಧ ತಾಪಸಿಯೂ, ಧರ್ಮಘೋಷನೆಂಬ ಬೌದ್ಧಭಿಕ್ಷುವೂ ಅತ್ಯಂತ ಸ್ವಧರ್ಮನಿಷ್ಠರಾಗಿದ್ದರು. ಕರ್ನಾಟ ಸಾರ್ವಭೌಮನೂ ಅಲ್ಲಿಯ ಮಾಂಡಲಿಕರೂ ಸನಾತನ ಧರ್ಮೀಯರಿದ್ದುದರಿಂದ ಈ ಭಿಕ್ಷುಗಳು ಬಹಿರಂಗವಾಗಿ ಸ್ವಧರ್ಮಪ್ರಸಾರಣೆಯ ಸಾಹಸ ಮಾಡಲಿಕ್ಕೆ ಹೆದರುತ್ತಿದ್ದರು. ಅವರು ಅವ್ಯಾಹತ ಪ್ರಯತ್ನಮಾಡಿ, ಸನಾತನ ಧರ್ಮದೊಳಗಿನ ಕೆಲವು ಜನರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡಿದ್ದರು. ರಾಜಾಶ್ರಯವು ದೊರೆಯದೆ ಧರ್ಮಾಭ್ಯುದಯವಾಗಲಾರದೆಂದು ಅವರ ಮನವರಿಕೆಯಿದ್ದುದರಿಂದ ಯಾವನೊಬ್ಬರಾಜನನ್ನು ತಮ್ಮ ಧರ್ಮದಲ್ಲಿ ಎಳೆದುಕೊಳ್ಳಬೇಕೆಂದು ಅವರ, ಸಾಹಸವಿತ್ತು. ಸರ್ವಾರ್ಥಸಿದ್ಧಿಯು ಆಗಾಗ್ಗೆ ರಾಜಮಂದಿರಕ್ಕೆ ಬಂದು ರಾಣಿಯರಿಗೂ, ರಾಜಕುಮಾರಿಯರಿಗೂ ತನ್ನ ಧರ್ಮದ ಮೇಲ್ಮೆಯನ್ನು ತೋರಿಸುತ್ತಿದ್ದಳು. ಕಟ್ಟಾ ಧರ್ಮಾಭಿಮಾನಿಗಳೆದುರಿಗೆ ಬುದ್ಧಭಿಕ್ಷುಗಳ ಆಟವೇನೂ ನಡೆಯದಿದ್ದರೂ, ಸಾಮಾನ್ಯ ಜನರು ಅವರ ಜಾಲದಲ್ಲಿ ತೊಡಕಿಕೊಳ್ಳದಿರುತ್ತಿರಲಿಲ್ಲ. ಹೀಗಾಗಿ ಅವರ ವಿಹಾರದಲ್ಲಿ ಬುದ್ಧಾನುಯಾಯಿಗಳ ಸಂಖ್ಯೆಯು ಸಾವಕಾಶವಾಗಿ ಬೆಳೆಯತೊಡಗಿತ್ತು. ರಾಜಾಶ್ರಯವು ದೊರೆತರೆ ಧರ್ಮವಿಸ್ತಾರವಾಗಲಿಕ್ಕೆ ಅನುಕೂಲವಾಗುವದೆಂಬ ಭಾವನೆಯಿಂದ ಸರ್ವಾರ್ಥಸಿದ್ಧಿಯೂ, ಧರ್ಮಘೋಷನೂ ಮೇಲಿಂದ ಮೇಲೆ ಅರಮನೆಗೆ ಬರುತ್ತಿದ್ದರು. ಯತಿಗಳಾದ ಅವರಿಗೆ ರಾಜಮಂದಿರವನ್ನು ಪ್ರವೇಶಿಸಲಿಕ್ಕೆ ಅನಿರ್ಬಂಧವಿದ್ದಿತು.

ಸುವರ್ಣಮಂಜೂಷೆಯಲ್ಲಿದ್ದ ವಸ್ತುಗಳಾವವೆಂದು ಸರ್ವಾರ್ಥಸಿದ್ಧಿಯು ಕೇಳಿದೊಡನೆಯೆ, ರಾಜಕುಮಾರಿಯು ವಸ್ತುಸ್ಥಿತಿಯನ್ನು ನಿವೇದಿಸಲು ನಾಚಿಕೆಗೊಂಡು ಮುಖಬಾಗಿ ಕುಳಿತುಕೊಂಡಳು. ಆಗ ಕುಸುಮಕುಮಾರಿಯ ದಾಸಿಯಾದ ಪ್ರಭಾವತಿಯು:—"ದೇವಿ, ಸರ್ವಾರ್ಥಸಿದ್ಧಿಯವರಂತಹ ಮಹಾನುಭಾವರೆದುರಿಗೆ ಇದ್ದ ಸಂಗತಿಯನ್ನುಸಿರಲಿಕ್ಕೆ ಅನುಮಾನವೇಕೆ?"

"ಪ್ರಭೆ," ಕುಸುಮಕುಮಾರಿಯು ತನ್ನ ದಾಸಿಯನ್ನು ಕುರಿತು:—"ಯಾರು ಹೇಳಿದರೇನು? ನಿನಗೆ ಎಲ್ಲ ಸಂಗತಿಗಳು ಗೊತ್ತಾಗಿರುವವು. ನೀನು ಹೇಳಿದರೆ ನಡೆಯುವದಿಲ್ಲವೆ?"

ಕುಸುಮಕುಮಾರಿಯು ಹೀಗೆ ನುಡಿದು ತನ್ನ ಬಳಿಯಲ್ಲಿದ್ದ ಮುಂಜರಾಜನ ಚಿತ್ರವನ್ನೂ ಪತ್ರವನ್ನೂ ಸರ್ವಾರ್ಥಸಿದ್ಧಿಯ ಕೈಯಲ್ಲಿ ಕೊಟ್ಟಳು. ಪ್ರಭಾವತಿಯು ಎಲ್ಲ ಸಂಗತಿಗಳನ್ನು ಆ ಬುದ್ಧತಾಪಸಿಗೆ ತಿಳಿಸಿ:—"ಕುಸುಮಕುಮಾರಿದೇವಿಯವರು ಈಗಾಗಲೆ ಮುಂಜಮಹಾರಾಜರಿಗೆ ತಮ್ಮ ಹೃದಯವಲ್ಲಿ ಇಂಬುಗೊಟ್ಟಂತೆ ತಿಳಿ

ಯುತ್ತದೆ. ಹಿಂದೆ ಮುಂದೆ ವಿಚಾರ ಮಾಡದೆ ಹೀಗೆ ಪ್ರೇಮದಾನ ಮಾಡು ವದು ಒಳಿತೇನು? ತಾಪಸಿಯವರೇ, ನನ್ನ ಮಾತು ಸಟಿಯೊ ದಿಟವೊ ಹೇಳಿರಿ ನೋಡೋಣ?"

"ಪ್ರಭಾವತಿ, ಕುಸುಮಕುಮಾರಿದೇವಿಯವರು ಅಪಾತ್ರದಲ್ಲಿ ಪ್ರೇಮದಾನ ಮಾಡಿಲ್ಲ. ಮುಂಜಮಹಾರಾಜರನ್ನು ನಾನು ಕಣ್ಣಾರೆ ಕಂಡಿರುವೆನು. ಅವರು ರಾಜಕುಮಾರಿಯವರಿಗೆ ಅನುರೂಪರಾಗಿಯೇ ಇರುವರು. ಅವರ ಪರಾಕ್ರಮದ ಖ್ಯಾತಿಯಂತೂ ಪ್ರತಿಯೊಬ್ಬರಿಗೆ ಗೊತ್ತಿದ್ದದ್ದಾಗಿರುವದು" ಎಂದು ಸರ್ವಾರ್ಥ ಸಿದ್ಧಿಯು ನುಡಿದು, ಕುಸುಮಕುಮಾರಿಯನ್ನು ಕುರಿತು:—"ದೇವಿ, ಮುಂಜರಾಜ ರನ್ನು ವರಿಸುವ ಸಂಧಿಯು ನಿಮ್ಮ ಪೂರ್ವ ಸುಕೃತಿಯಿಂದಲೆ ದೊರೆತಿರುವದೆಂದು ತಿಳಿಯಿರಿ. ಅವರು ನಿಮ್ಮಲ್ಲಿ ಪೂರಾ ಅನುರಕ್ತರಾಗಿರುವರೆಂಬದಕ್ಕೆ ಈ ಪ್ರಣಯ ಪತ್ರಿಕೆಯೇ ಸಾಕ್ಷಿ."

"ಸರ್ವಾರ್ಥ-ಸಿದ್ಧಿಯವರೆ, ಈ ಪ್ರಣಯ ಪತ್ರಿಕೆಯನ್ನು ಎಷ್ಟು ಬಾರಿ ಓದಿ ದರೂ ಮನಸ್ಸಿನ ತೃಪ್ತಿಯಾಗಲೊಲ್ಲದು"

"ದೇವಿ, ಈಗಾಗಲೆ ನಿಮ್ಮ ಮನಸ್ಸು ಇಷ್ಟು ಅಧೀರವಾಯಿತೇನು? ಕೇವಲ ಪ್ರಣಯಪತ್ರಿಕೆಗಾಗಿ ನೀವು ಇಷ್ಟು ಭ್ರಾಂತರಾಗಿರುವಿರಿ. ಪ್ರತ್ಯಕ್ಷ ಪ್ರಣಯ ದೇವನನ್ನು ಕಂಡ ಮೇಲಂತೂ, ನೀವು ಅವನನ್ನು ಅರಗಳಿಗೆಯಾದರೂ ಅಗಲಿರಲಾರಿ ರೆಂಬಂತೆ ತೋರುತ್ತದೆ" ಎಂದು ಪ್ರಭಾವತಿಯು ನಗುತ್ತ ಕುಸುಮಕುಮಾರಿಗೆ ನುಡಿದು:—"ಆ ಪ್ರಣಯಪತ್ರಿಕೆಯನ್ನು ಇತ್ತಕೊಡಿರಿ."

"ಅದೇಕೆ?"

"ದೇವಿ, ಅದನ್ನು ರಾಜಮಾತೆಯವರಾದ ಬೊಂಥಾದೇವಿಯವರಿಗೆ ತೋರಿ ಸುವೆನು."

"ಈಗಲೆ ಬೇಡ."

"ಮತ್ತೆ ಯಾವಾಗ ತೋರಿಸಬೇಕೆನ್ನುವಿರಿ."

"ಪ್ರಸಂಗ ಸಾಧಿಸಿ ತೋರಿಸೋಣ"

ಸರ್ವಾರ್ಥಸಿದ್ಧಿಯು ತನ್ನ ವಿಹಾರಕ್ಕೆ ಹೋದಳು. ದಾಸಿಯಾದ ಪ್ರಭಾ ವತಿಯು ತನ್ನ ಕೆಲಸದಲ್ಲಿ ತೊಡಗಿದಳು. ಕುಸುಮಕುಮಾರಿಯು ತನ್ನ ಪ್ರಣಯ ದೇವನ ಪ್ರಣಯ ಪತ್ರಿಕೆಯ ಪಾರಾಯಣಕ್ಕೆ ಪ್ರಾರಂಭಿಸಿದಳು. ಎಷ್ಟೋ ಗಳಿಗೆ ಗಳ ವರೆಗೆ ಅವಳ ಪಾರಾಯಣವು ನಡೆದೇ ಇತ್ತು.



## ಅರಿಕೇಸರಿಯಾದ ಅರಿಕೇಸರಿ!

ತ್ರೈಲಪದೇವನು ಮುಂಜನನ್ನು ಬೆನ್ನಟ್ಟಿ ಹೋದ ಕೆಲವು ದಿನಗಳಲ್ಲಿ ಗಂಗವಾಡಿಯಿಂದ ಮಾರಸಿಂಹನೂ ಸವದತ್ತಿಯಿಂದ ರಟ್ಟರಸನಾದ ಶಾಂತಿವರ್ಮನೂ ಮಾನ್ಯಖೇಟಕ್ಕೆ ಬಂದರು. ಚಾಲುಕ್ಯರ ಅರಿಕೇಸರಿಯು ಅವರು ಬರುವಷ್ಟರಲ್ಲಿ ರಾಜಧಾನಿಯೊಳಗಿನ ಬಂಡುಗಾರರನ್ನೂ, ಮಲೆತು ನಿಂತ ಪುಂಡ ಸಾಮಂತರನ್ನೂ, ತುಂಟರನ್ನೂ, ಸುಲಿಗೆಗಾರರನ್ನೂ ದಂಡಿಸಿ ರಾಜಧಾನಿಯಲ್ಲಿಯೂ ಸಾಮ್ರಾಜ್ಯದಲ್ಲಿಯೂ ತಕ್ಕ ಮಟ್ಟಿಗೆ ಸುಖಶಾಂತಿಗಳನ್ನು ನೆಲೆಗೊಳಿಸಿದ್ದನು. ಮಾಳವೆಯರ ಬೆದರಿಕೆಯಿಂದ ಓಡಿಹೋದ ರಾಜಪರಿವಾರವು ಮರಳಿ ಅರಮನೆಯನ್ನು ಸೇರಿತ್ತು. ವಿತ್ತಜೀವಿತಗಳ ರಕ್ಷಣೆಗಾಗಿ ಪುರತ್ಯಾಗಮಾಡಿದ ಪ್ರಜಾಜನರು ಒಬ್ಬೊಬ್ಬರೇ ರಾಜಧಾನಿಯನ್ನು ಸೇರಲಾರಂಭಿಸಿದ್ದರು. ರಾಜಧಾನಿಯಲ್ಲಿ ಎಲ್ಲ ಬಗೆಯ ವ್ಯವಹಾರವು ಸುಸೂತ್ರವಾಗಿ ಸಾಗಲಾರಂಭಿಸಿತು. ಮಾಳವೆಯವರಿಂದ ಸೋತು ಓಡಿ ಹೋದ ದಂಡಾಳುಗಳೂ ದಳವಾಯಿಗಳೂ ರಾಜಧಾನಿಯನ್ನು ಸೇರತೊಡಗಿದ್ದರು. ಚಾಣಾಕ್ಷನೂ, ರಾಜಕಾರಣಧುರಂಧರನೂ ಆದ ಅರಿಕೇಸರಿಯು ಮಾಳವೆಯವರಿಂದ ಹಾಳಾದ ಕೋಟೆಯ ಭಾಗವನ್ನು ಕಟ್ಟಿಸಿ, ಅದನ್ನು ಚೆನ್ನಾಗಿ ಭದ್ರಪಡಿಸಿದ್ದನು. ರಾಜಧಾನಿಯಲ್ಲೆಲ್ಲ ಅವನ ವರ್ಚಸ್ಸವು ಪ್ರಸ್ಥಾಪಿತವಾಗಿತ್ತು. ರಾಜಧಾನಿಯಲ್ಲಿ ವ್ಯವಸ್ಥೆಯನ್ನು ನೆಲೆಗೊಳಿಸುವದರ ಸಲುವಾಗಿಯೆ ತೈಲಪದೇವನು ಅರಿಕೇಸರಿಯನ್ನು ಹಿಂದೆಬಿಟ್ಟು ಹೋಗಿದ್ದನು. ಅವನು ಅರಿಕೇಸರಿಯನ್ನು ರಾಜಧಾನಿಯಲ್ಲಿರಿಸಿದ್ದರಲ್ಲಿ ಇನ್ನೊಂದು ರಹಸ್ಯವೂ ಇತ್ತು. ಕರ್ನಾಟಕ ಸಾಮ್ರಾಜ್ಯ ಸಿಂಹಾಸನವು ದುರ್ಬಲರಾದ ರಾಷ್ಟ್ರಕೂಟರ ಸ್ವಾಧೀನದಲ್ಲಿದ್ದರೆ ಅದು ಹಾಳಾಗುವದೆಂದೂ, ಅದನ್ನು ತನ್ನ ವಶದಲ್ಲಿ ತೆಗೆದುಕೊಂಡರೆ ಸಾಮ್ರಾಜ್ಯದ ಸ್ವಾತಂತ್ರ್ಯವು ಉಳಿಯುವದೆಂದೂ ಅವನು ತಿಳಿದು, ರಾಜಧಾನಿಯಲ್ಲಿ ನರಶಾರ್ದೂಲನಾದ ಅರಿಕೇಸರಿಯನ್ನು ಬಿಟ್ಟು ಹೋಗಿದ್ದನು. ಮಾರಸಿಂಹ-ಶಾಂತಿವರ್ಮ ಮೊದಲಾದ ರಾಷ್ಟ್ರಕೂಟರ ಅಭಿಮಾನಿಗಳು ಏನಾದರೊಂದು ಗೊಂದಲವೆಬ್ಬಿಸಿದರೆ, ಆಗಿಂದಾಗ ಒಂಟೆಯ ಸೈನಿಕರೊಡನೆ ಸಂದೇಶ ಕಳಿಸಬೇಕೆಂದು ಅವನು ಅರಿಕೇಸರಿಗೆ ಹೇಳಿ ಹೋಗಿದ್ದನು.

ಮಾರಸಿಂಹ-ಶಾಂತಿವರ್ಮರು ಮಾನ್ಯಖೇಟವನ್ನು ಪ್ರವೇಶಿಸುವಷ್ಟರಲ್ಲಿ ಅರಿಕೇಸರಿಯು ಎಲ್ಲ ಕಡೆಯಲ್ಲಿ ತನ್ನ ಅಧಿಕಾರವನ್ನು ಪ್ರಸ್ಥಾಪಿಸಿದ್ದನು. ಈ ಸ್ಥಿತಿಯನ್ನು ನೋಡಿ ಅವರು ಬಹಳವಾಗಿ ಬೆದರಿದರು. ಚಾಲುಕ್ಯರು ರಾಷ್ಟ್ರಕೂಟರ ವಿರೋಧಿಗಳಾಗಿದ್ದರಿಂದ ಪ್ರಸ್ತುತದ ಕ್ರಾಂತಿಯ ಸಂಧಿಯಲ್ಲಿ ಅವರು ತಮಗೆ ಲಾಭ ಮಾಡಿಕೊಳ್ಳದಿರಲಾರರೆಂದು ಮಾರಸಿಂಹ-ಶಾಂತಿವರ್ಮರಿಗೆ ತಿಳಿಯಿತು. ಅರಿಕೇಸರಿಯಂತು ರಾಷ್ಟ್ರಕೂಟರ ಕಡುಹಗೆಯಾದ್ದರಿಂದ ಅವನು ಒಳ್ಳೆಯ

ಮಾತಿನಿಂದ ರಾಜಧಾನಿಯನ್ನು ಬಿಟ್ಟುಹೋಗಲಾರನೆಂಬ ಚಿಹ್ನವಾದರೂ ಅವರಿಗೆ ತೋರಲಾರಂಭಿಸಿತು. ರಾಷ್ಟ್ರಕೂಟ ಸಾಮ್ರಾಜ್ಯವು ಚಾಲುಕ್ಯರ ಪಾಲಾಗುವದೆಂದು ಮಾರಸಿಂಹರೂ, ರಟ್ಟಸಾಮಂತರೂ, ರಾಷ್ಟ್ರಕೂಟರ ಯುವರಾಜನಾದ ಕಕ್ಕಲದೇವನೂ, ರಾಜಕುಮಾರ ಬಪ್ಪುವದೇವನೂ ತಿಳಿದುಕೊಂಡರು. ದಂಡೋಪಾಯದಿಂದ ಅರಿಕೇಸರಿಯಂಥ ವಿಕ್ರಮಶಾಲಿಯ ಪ್ರತೀಕಾರಮಾಡುವ ಸಾಮರ್ಥ್ಯವು ಅವರಲ್ಲಿದ್ದಿಲ್ಲ. ಆಗ ಅವರು ಭೇದೋಪಾಯವನ್ನು ಕೈಕೊಂಡರು. ಅರಮನೆಯಲ್ಲಿಯೂ, ಓಲಗವಲ್ಲಿಯೂ, ರಾಜಧಾನಿಯಲ್ಲಿಯೂ ಅವರ ಗೊತ್ತಿನವರೂ, ಆಪ್ತೇಷ್ಟರೂ, ನಂಬಿಗಸ್ತರೂ ಎಷ್ಟೋ ಜನರಿದ್ದುದರಿಂದ, ಆ ಜನರನ್ನು ತಮ್ಮ ಕಡೆಗೆ ಎಳೆದುಕೊಳ್ಳಲಿಕ್ಕೆ ಅವರು ಹವಣಿಸತೊಡಗಿದರು. ಚಾಲುಕ್ಯರು ತಮ್ಮ ಆಸ್ಥಿವೈರಿಗಳಾದ್ದರಿಂದ ಅವರು ಸಾಮ್ರಾಜ್ಯಸಿಂಹಾಸನವನ್ನು ಸೆಳೆದುಕೊಳ್ಳುವ ಯತ್ನದಲ್ಲಿರುವರೆಂದು ಕಕ್ಕಲ-ಬಪ್ಪುವರಾಜರು ಎಲ್ಲ ಜನರಿಗೆ ಹೇಳಿದರು. ನಾಗರಿಕರಿಗೂ, ಓಲಗದ ಅಧಿಕಾರಿಗಳಿಗೂ ಈ ಸಂಗತಿಯು ನಿಜವಾಗಿ ತೋರಿತು. ಮುಖ್ಯ ಮುಖ್ಯ ಜನರು ಅವರಿಗೆ ಅನುಕೂಲರಾದರು. ಅರಿಕೇಸರಿಯನ್ನು ರಾಜಧಾನಿಯಿಂದ ಹೊರಗೆ ಹಾಕುವವರೆಗೆ ಮಾರಸಿಂಹ-ಶಾಂತಿವರ್ಮರೂ ರಾಷ್ಟ್ರಕೂಟರ ಪಕ್ಷದ ಜನರೂ ನಿರ್ಭಯರಾಗುವಂತಿದ್ದಿಲ್ಲ. ಅವರಿಗೆ ಅರಿಕೇಸರಿಯ ಅಂಜಿಕೆಯು ಬಹಳವಾಗಿತ್ತು. ಮಾರಸಿಂಹನು ಅರಿಕೇಸರಿಯನ್ನು ಹೊರಗೆ ಹಾಕಲಿಕ್ಕೆ ಒಂದು ಹಂಚಿಕೆಯನ್ನು ತೆಗೆದನು. ಮುಂಜನು ಮಾನ್ಯಖೇಟವನ್ನು ಮುತ್ತಿದಾಗ ಕೊಟ್ಟಿಗನು ಮಡಿದಿದ್ದನಷ್ಟೆ? ಅವನ ತೆರವಾದ ಸಿಂಹಾಸನದ ಮೇಲೆ ಅವನ ತಮ್ಮ ನಿರುಪಮನ ಮಗನಾದ ಕಕ್ಕಲದೇವನನ್ನು ಕುಳ್ಳಿರಿಸಬೇಕೆಂದು ಮಾರಸಿಂಹನು ನಿಶ್ಚಯಿಸಿದನು. ಕೊಟ್ಟಿಗದೇವನಿರುವಾಗಲೆ ಕಕ್ಕಲದೇವನಿಗೆ ಯೌವರಾಜ್ಯಾಭಿಷೇಕವಾದ್ದರಿಂದ ಅವನೇ ಪಟ್ಟಬಾಧ್ಯನೆಂದು ಎಲ್ಲ ಜನರ ತಿಳುವಳಿಕೆಯಾಗಿತ್ತು. ಅವರು ಕಕ್ಕಲದೇವನನ್ನು ಪಟ್ಟಕ್ಕೆ ಕುಳ್ಳಿರಿಸುವ ಕಾರ್ಯದಲ್ಲಿ ಮಾರಸಿಂಹನಿಗೆ ಅನುಕೂಲರಾದರು. ಕಕ್ಕಲದೇವನಿಗೆ ಪಟ್ಟಗಟ್ಟಿದರೆ ಅರಿಕೇಸರಿಯು ತಾನಾಗಿ ರಾಜಧಾನಿಯನ್ನು ಬಿಟ್ಟುಹೋಗುವನೆಂಬದು ಮಾರಸಿಂಹನಿಗೆ ತಿಳಿದಿತ್ತು; ಒಂದು ವೇಳೆ ಅವನು ಹೊರಟು ಹೋಗದಿದ್ದರೆ ದಂಡೋಪಾಯದಿಂದ ಹೊರಗೆ ಹಾಕಬೇಕೆಂದು ಅವನು ನಿರ್ಧರಿಸಿದನು.

ರಾಷ್ಟ್ರಕೂಟ ಯುವರಾಜನಾದ ಕಕ್ಕಲದೇವನ ಪಟ್ಟಾಭಿಷೇಕದ ಪೂರ್ವಸಿದ್ಧತೆಯು ಮಾನ್ಯಖೇಟರಾಜಧಾನಿಯಲ್ಲಿ ಒಳ್ಳೆಯ ರಭಸದಿಂದ ನಡೆದಿತ್ತು. ರಾಜಪರಿವಾರವು ಓಲಗವನ್ನೂ, ಅರಮನೆಯನ್ನೂ, ರಾಜಧಾನಿಯನ್ನೂ ಸಿಂಗರಿಸುವದರಲ್ಲಿ ತೊಡಗಿತ್ತು. ಪೌರವಾಸಿಗಳು ತಮ್ಮ ತಮ್ಮ ಮನೆಗಳನ್ನು ಸಡಗರಗೊಳಿಸುವದಕ್ಕೆ ಪ್ರಾರಂಭ ಮಾಡಿದ್ದರು. ತಮ್ಮ ರಾಜನ ಪಟ್ಟಾಭಿಷೇಕದ ಮಂಗಲಮಹೋತ್ಸವವನ್ನು ನೋಡುವದಕ್ಕಾಗಿ ನಾಗರಿಕರು ಉತ್ಕಂಠಿತರಾಗಿ ಕುಳಿತಿದ್ದರು. ಎಲ್ಲ

ನೋಡಿದಲ್ಲಿ ಗುಡಿತೋರಣ ಪತಾಕೆಗಳು ರಾಜಧಾನಿಯ ತುಂಬ ಕಾಣತೊಡಗಿದ್ದವು. ಕೋಟೆಯನ್ನಾಶ್ರಯಿಸಿಕೊಂಡಿದ್ದ ಅರಿಕೇಸರಿಗೆ ರಾಜಧಾನಿಯಲ್ಲಿ ನಡೆದ ಸಮಾರಂಭದ ಸುದ್ದಿಯೇ ಇದ್ದಿಲ್ಲ. ಮಾರಸಿಂಹಾದಿಗಳು ತೈಲಪದೇವನಿಲ್ಲದಾಗ ಕಕ್ಕಲದೇವನಿಗೆ ಪಟ್ಟಗಟ್ಟುವರೆಂಬ ಕಲ್ಪನೆಯೇ ಅವನಿಗೆ ಬಂದಿರಲಿಲ್ಲ. ರಾಜಧಾನಿಯಲ್ಲಿ ನಡೆದ ಉತ್ಸವದ ಸಂಗತಿಯನ್ನು ಅರಿಕೇಸರಿಯ ದೂತನೊಬ್ಬನು ಅವನಿಗೆ ತಿಳಿಸಿದನು. ಮೊದಮೊದಲು ಈ ಸಂಗತಿಯು ಅರಿಕೇಸರಿಗೆ ಸಟೆಯಾಗಿ ತೋರಿತು. ಆಗ ಅವನು ತನ್ನ ನಂಬಿಗೆಯವನನ್ನು ರಾಜಧಾನಿಯಲ್ಲಿ ಕಳುಹಿಸಿದನು. ಪಟ್ಟಾಭಿಷೇಕದ ಪೂರ್ವಸಿದ್ಧತೆಯು ನಡೆದಿರುವದೆಂದೂ ನಾಳಿನ ದಿನವೇ ಕಕ್ಕಲದೇವರಾಜರು ಸಿಂಹಾಸನವನ್ನೇರುವರೆಂದೂ ಅವನ ಸೇವಕನು ಸುದ್ದೀ ತಂದನು. ಈ ಸಂಗತಿಯನ್ನು ಕೇಳಿ ಅರಿಕೇಸರಿಗೆ ಹೇಳಕೂಡದಷ್ಟು ವಿಸ್ಮಯವಾಯಿತು. ಮಾರಸಿಂಹ-ಶಾಂತಿವರ್ಮ ಮೊದಲಾದವರು ಬುದ್ಧಿಪೂರ್ವಕವಾಗಿ ತೈಲಪದೇವನಿಲ್ಲದಾಗ ಈ ಪಟ್ಟಾಭಿಷೇಕ ಸಮಾರಂಭವನ್ನು ಮಾಡತೊಡಗಿರುವರೆಂದು ಅವನು ತಿಳಿದುಕೊಂಡನು. ಅವರ ಈ ಕಾರ್ಯಕ್ಕೆ ಅಡ್ಡಾಗದಿದ್ದರೆ ತೈಲಪದೇವನೂ ತಾನೂ ಯೋಚಿಸಿದ ಕಾರಸ್ಥಾನವು ವ್ಯರ್ಥವಾಗುವದೆಂದು ಭಾವಿಸಿ, ಅವನು ಮಾರಸಿಂಹ-ಕಕ್ಕಲಮೊದಲಾದವರಿಗೆ ಭೆಟ್ಟಿಯಾಗುವದಕ್ಕೆ ಅಶ್ವಾರೋಹಿಯಾಗಿ ಅಂಗರಕ್ಷಕರೊಡನೆ ಅರಮನೆಗೆ ಬಂದನು. ಆಗ ಮಾರಸಿಂಹರೇ ಮೊದಲಾದವರು ಮಂತ್ರಣಾಗಾರದಲ್ಲಿ ಕುಳಿತಿದ್ದರು. ಅರಿಕೇಸರಿಯ ಆಕಸ್ಮಿಕವಾದ ಆಗಮನದಿಂದ ಅವರು ಸ್ವಲ್ಪಮಟ್ಟಿಗೆ ಭಯಭೀತರಾದರು ರಾಷ್ಟ್ರಕೂಟರ ರಾಜ್ಯದಲ್ಲಿ ತೈಲಪದೇವನ ವರ್ಚಸ್ಸುವು ಬಹಳವಾಗಿತ್ತು. ಅವನಿಂದಲೇ ರಾಷ್ಟ್ರಕೂಟರ ಅರ್ಥಾತ್, ಕರ್ನಾಟಕದ ಗೌರವವು ಉಳಿದಿತ್ತು. ಎಲ್ಲ ಜನರು ತೈಲಪದೇವನಿಗೆ ಬಹಳವಾಗಿ ಅಂಜುತ್ತಿದ್ದರು. ಅಂತೆಯೇ ಅವನ ಪಕ್ಷದವನಾದ ಅರಿಕೇಸರಿಯನ್ನು ಕಂಡು ಅವರು ಬೆದರಿದರು. ಅವನ ಕಿವಿಯ ಮೇಲೆ ಹಾಕದೆ ಮಾರಸಿಂಹ-ಶಾಂತಿವರ್ಮರು ಕಕ್ಕಲದೇವನ ಪಟ್ಟಾಭಿಷೇಕ ಸಮಾರಂಭವನ್ನು ಹಮ್ಮಿದ್ದರು. ತೈಲಪದೇವನು ಕಕ್ಕಲದೇವನ ಜಾಮಾತಾನೂ ಕರ್ನಾಟಕ ಸಾಮ್ರಾಜ್ಯದ ಪರಮ ಹಿತೈಷಿಯೂ ಆದುದರಿಂದ, ಅವನಿಲ್ಲದಾಗ ಸಿಂಹಾಸನಾರೋಹಣದಂತಹ ದೊಡ್ಡ ಸಮಾರಂಭವನ್ನು ನೆರವೇರಿಸತೊಡಗಿದ್ದರಿಂದ ಅವರ ಮನಸ್ಸು ಕದ್ದುತಿಂದವರ ಸ್ಥಿತಿಯನ್ನು ಹೊಂದಿತ್ತು. ಅರಿಕೇಸರಿಯು ಮಂತ್ರಣಾಗಾರವನ್ನು ಪ್ರವೇಶಿಸಿದ ಕೂಡಲೆ ಮಾರಸಿಂಹನು ಅವನನ್ನು ಎದುರುಗೊಂಡು ಕರೆದೊಯ್ದು ಉಚ್ಚಾಸನದ ಮೇಲೆ ಕುಳ್ಳಿರಿಸಿದನು. ಅನಂತರದಲ್ಲಿ ಅವನು ವಿನಯದಿಂದ:—"ಅರಿಕೇಸರಿರಾಜರೇ, ಕೊಟ್ಟಿಗದೇವ ಮಹಾರಾಜರು ಪರಲೋಕವಾಸಿಗಳಾದದ್ದರಿಂದ ಯುವರಾಜ ಕಕ್ಕಲದೇವಮಹಾರಾಜರಿಗೆ ಪಟ್ಟಾಭಿಷೇಕ ಮಾಡಬೇಕೆಂದು ಎಲ್ಲ ಜನರ ಅಭಿಪ್ರಾಯವಿರುವದು. ತೈಲಪದೇವರಾಜರು ಬರುವವರೆಗೆ ಈ ಸಮಾರಂಭವನ್ನು ಮಾಡಬಾರದೆಂದು ನನ್ನ ಅಭಿಪ್ರಾಯವಿತ್ತು.

ಪ್ರಮುಖ ನಾಗರಿಕರ ಅತ್ಯಾಗ್ರಹಕ್ಕಾಗಿಯೂ, ಸಾಮಂತರ ಒತ್ತಾಯಕ್ಕಾಗಿಯೂ ಈಗ ಪಟ್ಟಾಭಿಷೇಕವನ್ನು ಹಮ್ಮಬೇಕಾಗಿರುವದು. ತೈಲಪದೇವರಾಜರೇನು? ನೀವೇನು? ಯಾರು ಇದ್ದರೂ ಒಂದೆಯೇ ಇರುವದು. ತೈಲಪದೇವರಾಜರೇನು ಪರಕೀಯರಲ್ಲ. ರಾಜಜಾಮಾತರಾದ ಅವರಿಗೆ ತಿಳಿಸಿಯೇ ಕಾರ್ಯಮಾಡಬೇಕೆನ್ನುವಂತೆಯೂ ಇರುವದಿಲ್ಲ. "ಶುಭಸ್ಯ ಶೀಘ್ರಂ" ಎಂಬಂತೆ ಸಿಂಹಾಸನಾರೋಹಣ ಸಮಾರಂಭವನ್ನು ನಾಳಿನ ದಿನವೇ ಮಾಡಿಬಿಡಬೇಕೆಂದು ಎಲ್ಲ ಜನರ ಇಚ್ಛೆ ಇರುವದು. ನಾನು ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ಪಡೆಯುವದಕ್ಕಾಗಿ ಬರತಕ್ಕವನಿದ್ದೆನು. ಅಷ್ಟರಲ್ಲಿ ನೀವೇ ಬಂದಿರಿ. ಒಳಿತಾಯಿತು. ಎಲ್ಲರ ಸಮಕ್ಷಮ ಮಾತಿನ ಊಹಾಪೋಹೆಯಾಗುವದು ಒಳಿತು."

ಮಾರಸಿಂಹನ ಮುಂಗಾಲಪುಟಿಗೆಯ ಮಾತುಗಳ ಮರ್ಮವನ್ನು ತಿಳಿಯದಷ್ಟು ಅರಿಕೇಸರಿಯು ಹೆಡ್ಡನಿರಲಿಲ್ಲ. ಎಲ್ಲ ಸಿದ್ಧತೆ ಮಾಡಿಕೊಂಡ ನಿಮಿತ್ತಕ್ಕಾಗಿ ಮಾರಸಿಂಹನು ಹೀಗೆ ಮಾತನಾಡಿದನೆಂಬದನ್ನು ಅವನು ತಿಳಿದುಕೊಂಡನು. ಆಗ ಅವನು ಮಾರಸಿಂಹನನ್ನು ಕುರಿತು:—"ಮಾರಸಿಂಹರೇ, ಇನ್ನು ಊಹಾಪೋಹೆಯಾಗುವ ವಿಷಯವೇನಿರುವದು? ಕಕ್ಕಲದೇವರಾಜರ ರಾಜ್ಯಾರೋಹಣ ಸಮಾರಂಭದ ಸಿದ್ಧತೆಯು ಒಳ್ಳೆಯ ಭರದಿಂದ ನಡೆದಿರುವದು. ನಾಳಿನ ದಿನವೇ ಪಟ್ಟಾಭಿಷೇಕ ಮಾಡಬೇಕೆಂದು ನಿರ್ಧರಿಸಿರುವಿರಿ. ಅಂದಮೇಲೆ ಈ ವಿಷಯವಾಗಿ ನಾನು ಏನು ಮಾತಾಡಲಿ?"

"ಅರಿಕೇಸರಿಯವರೇ, ತೈಲಪದೇವರಾಜರು ರಾಷ್ಟ್ರಕೂಟ ಸಾಮ್ರಾಜ್ಯದ ಹಿತಚಿಂತಕರೂ ರಾಜಮನೆತನದ ಸಂಬಂಧಿಕರೂ ಇರುವದರಿಂದ ಅವರಿಲ್ಲದಾಗ ಸಮಾರಂಭವನ್ನು ನೆರವೇರಿಸುವ ಪ್ರಸಂಗವೊದಗಿರುವದು. ಈ ಸಂಗತಿಗಾಗಿ ಯಾರೂ ಯಾವ ಬಗೆಯ ವಿಕಲ್ಪವನ್ನೂ ತಿಳಿದುಕೊಳ್ಳಬಾರದೆಂದು ಮಾರಸಿಂಹರು ಹೇಳಿದರು. ಇಷ್ಟು ಸರಳವಾದ ಮಾತಿನ ಅರ್ಥವೇ ನಿಮಗೆ ತಿಳಿಯದಂತಾದ ಮೇಲೆ ಎಂತಹ ತಲೆಯವರೆನ್ನಬೇಕೋ ತಿಳಿಯದು."

ಬಪ್ಪುವನು ಮದಾಂಧತೆಯಿಂದ ಹೀಗೆ ನುಡಿದ ಕೂಡಲೆ ಅರಿಕೇಸರಿಯು ಸಂತಪ್ತನಾದನು. ಅವನ ಕಣ್ಣುಗಳು ಕೆಂಪಗೆ ಕೆಂಡದಂತೆ ಕಾಣತೊಡಗಿದವು. ಅರಿಕೇಸರಿಯ ಅಂತರಂಗದ ಸ್ಥಿತಿಯು ಅವನ ಮುಖಚರ್ಯೆಯ ಮೇಲಿಂದ ಎಲ್ಲರಿಗೂ ಕಾಣತೊಡಗಿತು. ಆಗ ಕಕ್ಕಲದೇವನು ಅವನ ಮನಸ್ಸಿಗೆ ಸಮಾಧಾನವಾಗುವದಕ್ಕಾಗಿ ಬಪ್ಪುವನನ್ನು ಕುರಿತು:—"ಅರಿಕೇಸರಿರಾಜರು ಪರಮ ಧೂರ್ತರಿರುವದರಿಂದಲೆ ತೈಲಪದೇವರಾಜರಿಗೆ ಬೇಕಾದವರಾಗಿರುವರು. ನಿನಗೆ ಅವರ ಗುಣಪರಿಚಯವು ಚನ್ನಾಗಿಲ್ಲದ್ದರಿಂದ ಹೀಗೆ ಮಾತನಾಡತೊಡಗಿರುವೆ. ತೈಲಪದೇವರಾಜರೂ ಅರಿಕೇಸರಿಯವರೂ ನಮಗೆ ಹೊರಗಿನವರಲ್ಲ. ಅವರು ಆಪ್ತಕೋಟಿಯವರಿರುವರಲ್ಲದೆ, ಕರ್ನಾಟಕ ಸಾಮ್ರಾಜ್ಯದ ಹಿತಚಿಂತಕರೂ ಆಗಿರುವರು."

ಎಂದು ನುಡಿದು, ಅವನು ಅರಿಕೇಸರಿಯನ್ನು ಕುರಿತು:—"ಅರಿಕೇಸರಿಯವರೆ, ನಾಳೆ ಜರುಗತಕ್ಕ ಉತ್ಸವದಲ್ಲಿ ನೀವು ತೈಲಪದೇವರಾಜರ ಸ್ಥಳದಲ್ಲಿರುವಿರಿ ಕಂಡಿರಾ? ನಿಮ್ಮಂತಹರು ಇಂಥ ದೊಡ್ಡ ಸಮಾರಂಭಗಳಲ್ಲಿ ಭಾಗತೆಗೆದುಕೊಳ್ಳುವದರಲ್ಲಿಯೆ ವಿಶೇಷವಾದ ಶೋಭೆಯಿರುತ್ತದೆ."

"ನಿಜವು; ನಿಮ್ಮ ಮಾತು ಅಕ್ಷರಶಃ ನಿಜವು." ಮುದ್ದಣ ಮಂತ್ರಿಯು ಕಕ್ಕಲದೇವನ ಮಾತಿಗೆ ಬಲಕೊಟ್ಟನು.

"ಅರಿಕೇಸರಿಯವರು ಸುಜ್ಞರಿರುವರು. ಅವರು ಪಟ್ಟಬಂಧ ಮಹೋತ್ಸವದಲ್ಲಿ ಭಾಗತೆಗೆದುಕೊಳ್ಳದೇನು ಮಾಡುವರು? ಶೋಭೆಯೂ, ಮರ್ಯಾದೆಯೂ ಯಾರಿಗೆ ಬೇಡ? ಕರ್ನಾಟಕ ಸಾಮ್ರಾಜ್ಯಸಿಂಹಾಸನಾರೋಹಣದಂತಹ ಪ್ರಸಂಗದಲ್ಲಿ ತೈಲಪದೇವರಾಜರು ಇರಬೇಕಾಗಿತ್ತು. ಅವರು ದಂಡಯಾತ್ರೆಗೆ ತೆರಳಿರುವದರಿಂದ ಬೇಗನೆ ತಿರುಗಿ ಬರುವರೆಂಬದರ ನಿಯಮವಿಲ್ಲ. ಅರಿಕೇಸರಿ-ತೈಲಪದೇವರಾಜರಲ್ಲಿ ಭೇದವಿಲ್ಲ. ಅರಿಕೇಸರಿಯುವರಿದ್ದ ಮೇಲೆ ತೈಲಪರಾಜರಿದ್ದಂತೆಯೆ ಸರಿ." ಎಂದು ಶಾಂತಿವರ್ಮನು ನುಡಿದನು.

ಮುಂಗಾಲಪುಟಿಗೆಯಿಂದ ತಲೆಗೊಂದೊಂದು ಮಾತನಾಡತೊಡಗಿದ ಮಾರಸಿಂಹಾದಿಗಳ ವಿಷಯವಾಗಿ ಅರಿಕೇಸರಿಯು ಸಂತಪ್ತನಾದನು. ಆಗ ಅವನು ನಿಷ್ಠುರವಾಣಿಯಿಂದ:—"ಮಾಳವೆಯರನ್ನು ಮಾನ್ಯಖೇಟದಿಂದ ಓಡಿಸಿದವರು ತೈಲಪದೇವರಾಜರು. ಅವರೇ ಕರ್ನಾಟಕ ಸಾಮ್ರಾಜ್ಯಕ್ಕೆ ಬಂದ ವಿಪತ್ತನ್ನು ದೂರ ಮಾಡಿರುವರು. ಅವರು ಇದುವರೆಗೂ ಮುಂಜರಾಜನೊಡನೆ ಯುದ್ಧವನ್ನು ನಡೆಯಿಸಿರುವರು. ಸಾಮ್ರಾಜ್ಯದ ಮೇಲೆ ಬಂದ ಗಂಡಾಂತರವನ್ನು ನಿವಾರಿಸಿದಂತಹ ತೈಲಪದೇವರಾಜರು ಯುದ್ಧಯಾತ್ರೆಯನ್ನು ಮುಗಿಸಿಕೊಂಡು ಬರುವವರೆಗೆ ಪಟ್ಟಬಂಧೋತ್ಸವವನ್ನು ಮಾಡಬಾರದು. ತೈಲಪದೇವರಾಜರು ಪ್ರಬಲನಾದ ಹಗೆಯೊಡನೆ ಕಾದತೊಡಗಿರುವರು. ಅವರಿಗೆ ಯಾವ ಬಗೆಯ ಸಹಾಯಬೇಕೆಂಬದನ್ನು ತಿಳಿದುಕೊಳ್ಳುತ್ತ ತಕ್ಕ ಅನುಕೂಲತೆಗಳನ್ನು ಮಾಡಿಕೊಡುವದನ್ನು ಬಿಟ್ಟು, ಈಗಾಗಲೆ ಸಿಂಹಾಸನಾರೋಹಣ ಸಮಾರಂಭವನ್ನು ನಡೆಯಿಸಿ ಬಿಟ್ಟಿರಿ. ಅವರನ್ನು ಬಿಟ್ಟು ಇಂತಹ ದೊಡ್ಡ ಕಾರ್ಯವನ್ನು ಈಡೇರಿಸಿದರೆ, ನೀವು ಅವರಿಗೆ ಮರ್ಯಾದೆ ಕೊಟ್ಟಂತಾಗುವದಿಲ್ಲ. ಸಿಂಹಾಸನವು ಮಾನ್ಯಖೇಟವನ್ನು ಬಿಟ್ಟು ಎಲ್ಲಿಯೂ ಓಡಿ ಹೋಗುವದಿಲ್ಲ. ಒಂದು ವೇಳೆ ಅದು ಕಕ್ಕಲ ಮಹಾರಾಜರ ಕೈಯಿಂದ ಜಾರಿ ಹೋಗತೊಡಗಿದರೆ, ಅದನ್ನು ಉಳಿಸಿಕೊಳ್ಳುವ ಸಾಮರ್ಥ್ಯವು ಯಾವ ರಟ್ಟ ಸಾಮಂತರಲ್ಲಿಯೂ ರಟ್ಟ ಸೇನಾನಾಯಕರಲ್ಲಿಯೂ ಇಲ್ಲ. ಸುಮ್ಮನೆ ಅವಸರ ಪಡಿಸಿ ಪಟ್ಟಾಭಿಷೇಕಕಾರ್ಯವನ್ನು ಮುಗಿಸಬಾರದು. ತೈಲಪದೇವರಾಜರು ತಮ್ಮ ಮಾವಂದಿರ ಪಟ್ಟಬಂಧೋತ್ಸವವನ್ನು ನೋಡಬಾರದೇನು? ಅವರು ಬರುವವರೆಗೆ ತಡೆಯಿರಿ. ನಿಮಗೆ ಅಷ್ಟು ಅವಸರವಿದ್ದರೆ, ನಾನು ಇಂದೇ ಐದು ಜನ ಒಂಟೆಯ ಸ್ವಾರರನ್ನು

ಅವರ ಕಡೆಗೆ ಕಳುಹಿಸುವೆನು. ಅವರು ಬಂದ ಮೇಲೆ ನೀವು ಅವರ ಸಮ್ಮತಿಯಂತೆ ನಡೆಯಿರಿ. ಅವರು ಬರುವವರೆಗೆ ನೀವು ರಾಜ್ಯಾರೋಹಣ ಸಮಾರಂಭವನ್ನು ಮಾಡಬಾರದೆಂದು ಖಂಡಿತವಾಗಿ ಹೇಳುವೆನು."

ಅರಿಕೇಸರಿಯ ಮಾತುಗಳನ್ನು ಕೇಳಿ, ಮಾರಸಿಂಹ, ಕಕ್ಕಲ, ರಟ್ಟಸಾಮಂತರು, ಮುದ್ದಣಮಂತ್ರಿ ಮೊದಲಾದವರ ಸಂಶಯವು ಹೆಚ್ಚಿತು. ತೈಲಪನು ತಿರುಗಿ ಬರುವವರೆಗೆ ಕಾಲವಿಲಂಬ ಮಾಡಿದರೆ ರಾಷ್ಟ್ರಕೂಟರ ಸಾಮ್ರಾಜ್ಯ ಸಿಂಹಾಸನವು ತೈಲಪದೇವನ ವಶವಾಗುವದೆಂದು ಅವರು ತಿಳಿದರು. ಅವನು ಬರುವದರೊಳಗೆ ಕಕ್ಕಲನೇವನಿಗೆ ಪಟ್ಟಗಟ್ಟಿ ರಾಜಧಾನಿಯ ಹಾಗು ಸಾಮ್ರಾಜ್ಯದ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕೆಂದು ಮಾರಸಿಂಹನು ಯೋಚಿಸಿದನು. ನಾಳಿನ ದಿನ ಪಟ್ಟಬಂಧೋತ್ಸವವನ್ನು ನೆರವೇರಿಸುವ ನಿಶ್ಚಯವಾಗಿರುವದರಿಂದ ಇನ್ನು ಮೇಲೆ ಈ ವಿಷಯದಲ್ಲಿ ಹೆಚ್ಚು-ಕಡಿಮೆ ಮಾಡಲಿಕ್ಕಾಗುವದಿಲ್ಲವೆಂದು ಅವನು ಅರಿಕೇಸರಿಗೆ ನಿಷ್ಠುರವಾಗಿ ಹೇಳಿದನು. ಕೂಡಲೆ ಅರಿಕೇಸರಿಯು ಅವನ ಮೇಲೆ ಸಂತಪ್ತನಾಗಿ ಅಲ್ಲಿಂದ ಹೊರಟು ಹೋದನು.

ಮಾರನೆಯ ದಿವಸ ಕಕ್ಕಲದೇವನು ಕರ್ನಾಟಕ ಸಾಮ್ರಾಜ್ಯಸಿಂಹಾಸನವನ್ನೇರಿದನು. ಪಟ್ಟಬಂಧೋತ್ಸವವು ಒಳ್ಳೆಯ ವಿಜೃಂಭಣೆಯಿಂದ ನೆರವೇರಿತು. ಅರಿಕೇಸರಿಯು ರಾಜಧಾನಿಯಲ್ಲಿದ್ದರೂ ಅವನು ಆ ಸಮಾರಂಭದಲ್ಲಿ ಭಾಗತೆಗೆದುಕೊಳ್ಳಲಿಲ್ಲ. ಕಕ್ಕಲದೇವನು ಅಧಿಕಾರಾರೂಢನಾದ ಕೂಡಲೆ ಮಾರಸಿಂಹನು ಅರಿಕೇಸರಿಯನ್ನು ಹೊರಗೆ ತಳ್ಳಬೇಕೆಂದು ಯೋಚಿಸಿದನು. ಅವನು ಕಕ್ಕಲದೇವನಿಂದ ಆಜ್ಞಾಪತ್ರವನ್ನು ಬರೆಯಿಸಿ ಅರಿಕೇಸರಿಯ ಕಡೆಗೆ ಕಳುಹಿಸಿದನು. ಆಜ್ಞಾಪತ್ರವು ತಲುಪಿದೊಡನೆಯೆ ರಾಜಧಾನಿಯನ್ನು ಬಿಟ್ಟು ಹೊರಟು ಹೋಗಬೇಕೆಂದು ಮಾರಸಿಂಹನು ಬರೆಯಿಸಿದ್ದನು. ರಾಜದೂತನು ಆಜ್ಞಾಪತ್ರವನ್ನು ಅರಿಕೇಸರಿಗೆ ತಲುಪಿಸಿದನು. ಅದರೊಳಗಿನ ಸಂಗತಿಯನ್ನು ನೋಡಿದೊಡನೆಯೆ ಅರಿಕೇಸರಿಯು ನಖಶಿಖಾಂತವಾಗಿ ಉರಿಯತೊಡಗಿದನು. ಇದೆಲ್ಲ ಕಾರಸ್ಥಾನವು ಮಾರಸಿಂಹನದೇ ಎಂಬದು ಅವನಿಗೆ ಗೊತ್ತಾಗದಿರಲಿಲ್ಲ. ಸಿಟ್ಟಿನ ಕೈಯಲ್ಲಿ ಬುದ್ಧಿಕೊಟ್ಟು ಇಲ್ಲಿಯೆ ಯುದ್ಧವನ್ನು ಪ್ರಾರಂಭಿಸುವದು ಅನಿಷ್ಟವೆಂದು ಅರಿಕೇಸರಿಯು ತಿಳಿದನು. ಮಂಗಿವರ್ಮ, ಶಾಂತಿವರ್ಮ, ಕಾರ್ತವೀರ್ಯ, ಮಾರಸಿಂಹ ಮೊದಲಾದವರ ಸೈನ್ಯವು ಅಸಂಖ್ಯಾಕವಿತ್ತು. ಈ ಎಲ್ಲ ಸೈನ್ಯಗಳ ನಡುವೆ ಒಬ್ಬೊಂಟಿಗನಾಗಿ ಸಿಕ್ಕರೆ ಒಳಿತಾಗಲಾರದೆಂದು ಅವನು ಆತ್ಮಸಂಯಮನ ಮಾಡಿಕೊಂಡು, ತನ್ನ ಸೈನ್ಯದೊಡನೆ ಮಾನ್ಯಖೇಟವನ್ನು ಬಿಟ್ಟು ಹೊರಟನು.

ಅರಿಕೇಸರಿಯು ರಾಜಧಾನಿಯನ್ನು ಬಿಟ್ಟು ಹೋದ ಎರಡು ದಿನಗಳ ಮೇಲೆ ಮಾರಸಿಂಹ-ಕಕ್ಕಲದೇವರಾಜರ ಮನಸ್ಸಿನಲ್ಲಿ ಹೊಸ ಆಲೋಚನೆಯು ತಲೆದೋರಿತು. ಅರಿಕೇಸರಿಯು ತೈಲಪದೇವನ ಬಲಗೈಯಂತಿದ್ದುದರಿಂದ, ಅವನನ್ನು ಸೆರೆ

ಹಿಡಿದಿದ್ದರೆ ತಮ್ಮ ಅರ್ಧ ಕೆಲಸವಾಗುತ್ತಿತ್ತೆಂದು ಅವರು ಬಗೆದರು. ತೈಲಪನ ಬಲವು ಕಡಿಮೆಯಾದರೆ, ಅವನಿಂದ ಮಾನ್ಯಖೇಟವನ್ನು ವಶಪಡಿಸಿಕೊಳ್ಳುವದು ಅಸಾಧ್ಯವಾಗುವದೆಂದು ವಿಚಾರಿಸಿ, ಅರಿಕೇಸರಿಯನ್ನು ಬೆನ್ನಟ್ಟಿ ಹೋಗಿ ಅವನನ್ನು ಯುದ್ಧದಲ್ಲಿ ಸೆರೆ ಹಿಡಿದುಕೊಂಡು ಬರಬೇಕೆಂದು ಮಾರಸಿಂಹ-ಕಕ್ಕಲದೇವರು ರಾಷ್ಟ್ರಕೂಟ ಸೇನಾಪತಿಯಾದ ಮುಂಗಿವರ್ಮನನ್ನು ದೊಡ್ಡ ಸೈನ್ಯದೊಡನೆ ಕಳುಹಿಸಿದರು.

ಮುಂಗಿವರ್ಮನು ದಂಡನ್ನು ತೆಗೆದುಕೊಂಡು ಅರಿಕೇಸರಿಯನ್ನು ಬೆನ್ನಟ್ಟಿ ಹೊರಟನು. ರಾಜಧಾನಿಯನ್ನು ಬಿಡುವಾಗ ಅವನು ಧೈರ್ಯದ ಮೇರುವಾಗಿದ್ದನು. ಅರಿಕೇಸರಿಯ ಸೈನವು ಸಮೀಪಿಸುತ್ತ ಹೋದಂತೆ ಅವನ ಧೈರ್ಯದ ಹಿಮಗಿರಿಯು ಕರಗುತ್ತ ನಡೆಯಿತು. ರಾಜಧಾನಿಯಲ್ಲಿ ಕಕ್ಕಲದೇವ-ಮಾರಸಿಂಹರೆದುರಿನಲ್ಲಿ ಆಡಿದ ದೊಡ್ಡ ದೊಡ್ಡ ಮಾತುಗಳು ಅವನ ಸ್ಮೃತಿಪಥದಿಂದ ತೊಲಗಿ ಹೋಗಿದ್ದವು. ಒಂದೇ ಗಳಿಗೆಯಲ್ಲಿ ವೈರಿಯನ್ನು ಸದೆಬಡೆಯುವೆನೆಂಬ ಅವನ ಬಿಂಕವು ಬೈಲಾಗಿತ್ತು. ಅರಿಕೇಸರಿಯಾದ ಅರಿಕೇಸರಿಯು ತನ್ನ ಕೊಬ್ಬನ್ನು ತಗ್ಗಿಸುವನೆಂದು ಅವನ ತಿಳುವಳಿಕೆಯಾಯಿತು. ಪ್ರಬಲನಾದ ಹಗೆಯನ್ನು ಭೇದೋಪಾಯದಿಂದ ನಾಶಗೊಳಿಸುವದು ಒಳಿತೆಂದು ತಿಳಿದು. ಮುಂಗಿವರ್ಮನು ಅವನ ನಾಶದ ಬಗ್ಗೆ ನಾನಾ ಪ್ರಕಾರದ ಯೋಚನೆ ಮಾಡತೊಡಗಿದನು. ಆಗ ಅವನಿಗೆ ಒಂದು ಹಂಚಿಕೆಯು ತೋರಿತು. ತೈಲಪದೇವನು ಮಾನ್ಯಖೇಟಕ್ಕೆ ಬಂದಿರುವನೆಂದೂ, ಅವನು ನಿಮ್ಮನ್ನು ಕರೆತರುವದಕ್ಕಾಗಿ ಕಳುಹಿರುವನೆಂದೂ ಅರಿಕೇಸರಿಗೆ ಹೇಳಿ, ಅವನನ್ನು ರಾಜಧಾನಿಗೆ ಕರೆದೊಯ್ಯಬೇಕು, ರಾಜಧಾನಿಯನ್ನು ಪ್ರವೇಶಿಸಿದ ಮೇಲೆ ಶತ್ರುವು ಬಲೆಯಲ್ಲಿ ಸಿಲುಕಿದಂತಾಗುವದು, ಎಂದು ಆಲೋಚನೆ ಮಾಡಿ ಮುಂಗಿವರ್ಮನು ತನ್ನ ಸೈನ್ಯವನ್ನು ಅರಿಕೇಸರಿಯ ಸೈನ್ಯದ ಬಳಿಯಲ್ಲಿರುವ ದೊಡ್ಡ ಅರಣ್ಯದಲ್ಲಿ ಗುಪ್ತವಾಗಿರಿಸಿದನು. ಅರಿಕೇಸರಿಯು ತನ್ನ ಮಾತನ್ನು ನಂಬುವದಿಲ್ಲೆಂಬ ಲಕ್ಷಣವು ತೋರಿದರೆ, ಅವನನ್ನು ಮೋಸದಿಂದ ಕೊಂದುಹಾಕಬೇಕೆಂದೂ ಆ ಮುಂಗಿವರ್ಮನು ನಿಶ್ಚಯಿಸಿಕೊಂಡಿದ್ದನು.

ಅರಿಕೇಸರಿಯು ಅತ್ಯಂತ ಧೂರ್ತನಾಗಿದ್ದನು. ಶತ್ರುಗಳು ತನ್ನನ್ನು ಬೆನ್ನಟ್ಟಿ ಬರುತ್ತಿದ್ದರೆ ಆ ವಾರ್ತೆಯನ್ನು ಶೀಘ್ರವಾಗಿ ತಿಳಿಸಬೇಕೆಂದು ಅವನು ಅಲ್ಲಲ್ಲಿ ಗುಪ್ತ ಚರರನ್ನಿರಿಸಿದ್ದನು. ಮುಂಗಿವರ್ಮನು ದೊಡ್ಡ ಸೈನ್ಯದೊಡನೆ ಹೊರಟಿರುವನೆಂಬ ವಾರ್ತೆಯು ಗುಪ್ತಚಾರರ ಮುಖಾಂತರವಾಗಿ ಅವನಿಗೆ ತಿಳಿದಿತ್ತು. ಅವನು ಶತ್ರುಗಳನ್ನು ಪಾರಿಪತ್ಯಗೊಳಿಸಿಯೆ ಮುಂದೆ ಸಾಗಬೇಕೆಂದು ನಿರ್ಧರಿಸಿ ಅಲ್ಲಿಯೇ ಬೀಡು ಬಿಟ್ಟನು. ಮುಂಗಿವರ್ಮನು ಹತ್ತಿಪ್ಪತ್ತು ಸೈನಿಕರೊಡನೆ ಅರಿಕೇಸರಿಯನ್ನು ಕಂಡು ತೈಲಪದೇವನು ಕರೆತರಹೇಳಿರುವನೆಂದು ವಿಜ್ಞಾಪಿಸಿಕೊಂಡನು. ಮುಂಗಿವರ್ಮನ ಕುಟಿಲತಂತ್ರವು ಅರಿಕೇಸರಿಗೆ ತಿಳಿಯದಿರಲಿಲ್ಲ. ಆಗ ಅವನು ಮುಂಗಿವರ್ಮನನ್ನು ಕುರಿತು:—"ತೈಲಪದೇವರಾಜರು ಸ್ವಸ್ಥರಿದ್ದಾರೇನು?"

"ಪ್ರತ್ಯಕ್ಷ ಸೇನಾಪತಿಯೇ ಬಂದ ಮೇಲೆ ಪತ್ರದ ಆವಶ್ಯಕತೆಯೇನು? ಚರರನ್ನು ಕಳಿಸಿದ್ದರೆ ಪತ್ರಕೊಡುತ್ತಿದ್ದರು. ದೂತರ ಹಾಗು ಪತ್ರದ ಮೇಲೆ ನಿಮ್ಮ ವಿಶ್ವಾಸ ಹುಟ್ಟಲಿಕ್ಕಿಲ್ಲವೆಂದೇ ನನ್ನನ್ನು ಬುದ್ಧಿಪೂರ್ವಕವಾಗಿ ಕಳುಹಿಸಿರುವರು."

"ಸೇನಾಪತಿಗಳೇ, ಕಳುಹಿಸಿರುವವರು ಬುದ್ಧಿಪೂರ್ವಕವಾಗಿಯೆ ಕಳುಹಿಸಿರುವರು; ನೀವು ಬಂದಿರುವದಾದರೂ ಬುದ್ಧಿಪೂರ್ವಕವಾಗಿಯೆ! ನೀವು ತೈಲಪದೇವರಾಜರ ಆಜ್ಞಾಪತ್ರವನ್ನು ತಂದರೆ ನಾನು ರಾಜಧಾನಿಗೆ ಬರುವೆನು."

"ನಿರರ್ಥಕವಾಗಿ ವೇಳೆಗಳೆಯುವಂತಿಲ್ಲ. ಕೆಲಸವು ಬಹಳೇ ಮಹತ್ವದ್ದಿರುವದಾಗಿ ತೋರುತ್ತದೆ"

"ಮಹತ್ವದ್ದಿರಬಹುದು ಮಂಗಿವರ್ಮರೇ, ನಿಮ್ಮ ಮಿಕ್ಕ ಸೈನ್ಯವನ್ನು ಎಲ್ಲಿ ಗುಪ್ತವಾಗಿರಿಸಿರುವಿರಿ? ನಾನು ನಿಮ್ಮ ಕುಟಿಲಕಾರಸ್ಥಾನವನ್ನು ತಿಳಿದೆನು ಈಗ ನೀವು ನನ್ನ ಸೆರೆಯಾಳಾದಿರಿ. ಇಲ್ಲಿಂದ ದಾಟಿ ಹೋಗಲು ನಿಮಗೆ ಮಾರ್ಗವಿಲ್ಲ."

ಅರಿಕೇಸರಿಯು ಹೀಗೆ ನುಡಿದ ಕೂಡಲೆ ಮಂಗಿವರ್ಮನು ಕೊಂಬನ್ನೂದಿದನು. ಪರಕ್ಷಣದಲ್ಲಿ ತನ್ನ ಖಡ್ಗವನ್ನು ಹಿರಿದು ಅರಿಕೇಸರಿಯ ಮೇಲೆ ಧಾವಿಸಿ ಹೋದನು. ಅರಿಕೇಸರಿಯು ಸಾಮಾನ್ಯನಿದ್ದಿಲ್ಲ. ಮುಂದೆ ಏನಾದರೊಂದು ಅನಿಷ್ಟ ಒದಗಬಹುದೆಂದು ಅವನು ಬಹಳೇ ಎಚ್ಚರದಿಂದಿದ್ದನು. ಮಂಗಿವರ್ಮನು ವಿಶ್ವಾಸಘಾತದಿಂದ ತನ್ನನ್ನು ಕೊಲ್ಲುವ ಯತ್ನ ನಡೆಯಿಸಿದ್ದನ್ನು ನೋಡಿ, ಅವನು ಅತ್ಯಂತ ಕ್ರುದ್ಧನಾದನು. ಆಗ ಅವನು ಶಸ್ತ್ರಪಾಣಿಯಾಗಿ ಧಾವಿಸಿ ಬರತೊಡಗಿದ ಮಂಗಿವರ್ಮನನ್ನು ಒಳ್ಳೆಯ ಚಪಲತೆಯಿಂದ ಇರಿದು ಕೊಂದು ಹಾಕಿದನು. ಮಂಗಿವರ್ಮನು ಗತಾಸುವಾಗಿ ಭೂಮಿಗೆ ಬೀಳುವಷ್ಟರಲ್ಲಿ ಅವನ ಸೈನ್ಯವೆಲ್ಲ ಒಬ್ಬುಳಿಗೂಡಿ ಬಂದು ಅರಿಕೇಸರಿಯ ಸೈನ್ಯವನ್ನು ಮುತ್ತಿತು. ಮಂಗಿವರ್ಮನ ಸೈನ್ಯವು ಅರಿಕೇಸರಿಯ ಸೈನ್ಯಕ್ಕಿಂತ ಬಹಳೇ ದೊಡ್ಡದಿದ್ದರೂ ಸೇನಾನಾಯಕನಿಲ್ಲದ್ದರಿಂದ ಅದು ಸ್ವಲ್ಪ ವೇಳೆಯಲ್ಲಿ ಕಾಲ್ಕಿಗೆಯುವ ಚಿಹ್ನವು ತೋರಲಾರಂಭಿಸಿತು: ಕೂಡಲೆ ಅರಿಕೇಸರಿಯೂ ಅವನ ಸೈನಿಕರೂ ಇಮ್ಮಡಿ ಉತ್ಸಾಹದಿಂದ ಕಾದತೊಡಗಿದರು. ಒಂದೆರಡು ಗಳಿಗೆಗಳಲ್ಲಿ ಮಂಗಿವರ್ಮನ ಸೈನ್ಯವು ಪಲಾಯನ ಸೂತ್ರವನ್ನು ಪಠಿಸಿತು.

ಮಂಗಿವರ್ಮನು ಸತ್ತ ಸುದ್ದಿಯನ್ನು ಕೇಳಿ ಬಯಕೆಗೆಟ್ಟ ಮಾರಸಿಂಹನು ವಿಶ್ವಪ್ರಯತ್ನ ಮಾಡಿ ಹೊಸದೊಂದು ದಂಡು ಕೂಡಿಸಿ, ಅರಿಕೇಸರಿಯನ್ನು ನಿರ್ಮೂಲ ಮಾಡಲಿಕ್ಕೆ ಕಳುಹಿ ಕೊಟ್ಟನು. ಈ ದಂಡಿಗೆ ಕಕ್ಕಲದೇವನ ತಮ್ಮನಾದ ಬಪ್ಪುವದೇವನು ಸೇನಾಪತಿಯಾಗಿದ್ದನು. ಬಪ್ಪುವದೇವನು ದಂಡು ತರುವನೆಂಬ ವಾರ್ತೆಯು ಅರಿಕೇಸರಿಯ ಕಿವಿಗೆ ಬಿದ್ದ ಕೂಡಲೆ ಅವನು ವಾತಾಪಿಪುರದ ಕೋಟೆಯನ್ನು ಸೇರಿಕೊಂಡನು. ಬಪ್ಪುವದೇವನೂ ಸೈನ್ಯದೊಡನೆ ಬಂದು ವಾತಾಪಿಪುರವನ್ನು ಮುತ್ತಿದನು. ಶೂರನೂ, ಸಾಹಸಿಯೂ, ಚಾಣಾಕ್ಷನೂ ಆದ ಅರಿಕೇಸರಿಯು ಬಪ್ಪುವನ ದಂಡಿಗೆ ಅನ್ನಸಾಮುಗ್ರಿಯು ದೊರೆಯದಂತೆ ಏರ್ಪಾಡು

ಮಾಡಿ, ಒಂದು ದಿನ ಅದು ಎಚ್ಚರದಪ್ಪಿ ಮಲಗಿದ ಇರುಳಿನಲ್ಲಿ ಪಾಳೆಯದ ಮೇಲೆ ಬಿದ್ದನು. ಆ ಸೈನಿಕರು ಎಚ್ಚರಾಗುವಷ್ಟರಲ್ಲಿ ಅರಿಕೇಸರಿಯು ತನ್ನ ಸೈನ್ಯದೊಡನೆ ಅವರನ್ನು ಜರ್ಜರಗೊಳಿಸಿದ್ದನು. ರಾತ್ರಿಯಲ್ಲಿಯೆ ಖಾಡಾಖಾಡ ಯುದ್ಧವು ಪ್ರಾ-ರಂಭವಾಯಿತು. ಅರಿಕೇಸರಿಯಾದ ಅರಿಕೇಸರಿಗೆ ಆ ಸೈನ್ಯವು ಈಡಾಗಲಿಲ್ಲ. ಸ್ವಲ್ಪ ವೇಳೆಯಲ್ಲಿ ಬಪ್ಪುವನೂ ಅವನ ಸೈನಿಕರೂ ದಿಕ್ಕಾಪಾಲಾಗಿ ಓಡಿ ಹೋದರು. ಮರು ದಿನ ಬೆಳಿಗ್ಗೆ ನೋಡಲು ಒಬ್ಬ ದಂಡಾಳುವಾದರೂ ಬಾದಾಮಿಯ ನೆರೆಯಲ್ಲಿ ಕಾಣಲಿಲ್ಲ.

ಅರಿಕೇಸರಿಯಾದ ಅರಿಕೇಸರಿಯಿಂದ ಅಪಜಯ ಹೊಂದಿದರೂ, ಮಂಗಿವರ್ಮ ನಂತೆ ಅವಸ್ಥೆಯನ್ನು ತಂದುಕೊಳ್ಳಲಿಲ್ಲವೆಂಬ ಹೆಮ್ಮೆಯಿಂದ ಬಪ್ಪುವನು ಎದೆಯು ಬ್ಬಿಸಿಕೊಂಡು ಮಾನ್ಯಖೇಟದ ದಾರೀ ಹಿಡಿದನು!

---

## ದೈವಬಲ.

ಮಾನ್ಯಖೇಟವನ್ನು ಕೈವಶಮಾಡಿಕೊಂಡು ಕರ್ನಾಟಕ ಸಾಮ್ರಾಜ್ಯದ ಮೇಲೆ ತನ್ನ ವರ್ಚಸ್ಸವನ್ನು ಪ್ರಸ್ಥಾಪಿಸಬೇಕೆಂಬ ಹೆಬ್ಬಯಕೆಯಿಂದ ಮುಂಜ ರಾಜನು ಧಾರಾನಗರಿಯಿಂದ ದಂಡೆತ್ತಿ ಬಂದಿದ್ದನು. ಅವನು ಅತುಲ ಪರಾಕ್ರಮ ದಿಂದ ಹೋರಾಡಿ ರಾಜಧಾನಿಯನ್ನು ಸುಲಿದನೇನೋ ನಿಜವು. ಕನ್ನಡ ವೀರರು ನಾಲ್ಕೂ ಕಡೆಯಿಂದ ತನ್ನನ್ನು ಮುತ್ತುವರೆಂಬದು ಗೊತ್ತಾದ ಕೂಡಲೆ, ಅವನು ಕಾಲಿಗೆ ಬುದ್ಧೀ ಹೇಳಿದನು. ಓಡಿ ಬಂದದ್ದರಿಂದ ಉಳಿದುಕೊಂಡೆನೆಂದು ಸಂಭ್ರಮ ಗೊಳ್ಳುವಷ್ಟರಲ್ಲಿ, ದಿವ್ಯಪ್ರತಾಪನಿಧಿಯಾದ ತೈಲಪದೇವನು ದೊಡ್ಡ ಸೈನ್ಯದೊಡನೆ ಬೆನ್ನಟ್ಟಿ ಹೊರಟಿರುವನೆಂಬ ಸಂಗತಿಯು ಅವನಿಗೆ ತಿಳಿಯಿತು. ಓಡಿ ಬಂದರೂ ಉಳುವಿಲ್ಲದಾಯಿತೆಂದು ಅವನು ಕ್ಲೇಶಗೊಂಡು, ಬಂದದ್ದಕ್ಕೆ ಎದುರಾಗದಿದ್ದರೆ ಗತ್ಯಂತರವಿಲ್ಲೆಂದು ತೈಲಪದೇವನ ಸೈನ್ಯದೊಡನೆ ಕಾದುವ ಸಿದ್ಧತೆಯಲ್ಲಿ ತೊಡ ಗಿದನು. ಮುಂಜರಾಜನು ಹೇಡಿಯಿದ್ದಿಲ್ಲ; ಅತ್ಯಂತ ಸಾಹಸಿಯೂ ಧೈರ್ಯ ವಂತನೂ ಆಗಿದ್ದನು. ಧಾರಾನಗರಿಯಿಂದ ತಂದ ಸೈನ್ಯದ ಬಹು ಭಾಗವು ಮಾನ್ಯ ಖೇಟದ ಯುದ್ಧದಲ್ಲಿ ಮರಣಹೊಂದಿತ್ತು. ಉಳಿದಸೈನ್ಯದೊಡನೆ ತೈಲಪದೇವನಂತಹ ಪ್ರಬಲ ಶತ್ರುವಿನೊಡನೆ ಕಾದಿ ಜಯಸಂಪಾದನೆ ಮಾಡುವದು ಅಸಾಧ್ಯವೆಂದು ಕಂಡದ್ದರಿಂದಲೆ, ಅವನು ಕಾಳಗಕ್ಕೆ ಹಿಂದೆ ಮುಂದೆ ನೋಡಲಾರಂಭಿಸಿದ್ದನು. ಧಾರಾನಗರಿಯಿಂದ ಸೈನ್ಯವನ್ನು ತರಿಸುವಷ್ಟು ಅವಕಾಶವಿಲ್ಲದ್ದರಿಂದ ಅವನು ಇದ್ದ ಸೈನ್ಯವನ್ನೇ ವ್ಯವಸ್ಥೆಗೊಳಿಸಿ ಯುದ್ಧಕ್ಕೆ ಸಿದ್ಧನಾದನು.

ವೀರಶಿರೋಮಣಿಯಾದ ತೈಲಪದೇವನು ಅವಿಶ್ರಾಂತವಾಗಿ ದಾರೀ ನಡೆ ಯುತ್ತ ತನ್ನ ಸೈನ್ಯದೊಡನೆ ಹೊರಟು ಮುಂಜರಾಜನ ಸೈನ್ಯವನ್ನು ಸಮೀಪಿ

ಸಿದನು. ಮುಂಜರಾಜನು ಕಾಳಗದ ಸಿದ್ಧತೆಯಿಂದಲೇ ಇರುವನೆಂಬದು ಅವನಿಗೆ ತಿಳಿಯಿತು. ಒಮ್ಮೆ ಮಾಳವೆಯರಿಗೆ ಕನ್ನಡ ಕಲಿಗಳ ಕೈಯನ್ನು ತೋರಿಸಿಯೆ ಬಿಡಬೇಕೆಂದು ತೈಲಪದೇವನ ಇಚ್ಛೆಯಿತ್ತು. ಅವನು ತನ್ನ ಸೈನ್ಯವನ್ನು ಎರಡು ಭಾಗ ಮಾಡಿ ಒಂದು ಭಾಗವನ್ನು ತನ್ನ ಕಡೆಗೆ ತೆಗೆದುಕೊಂಡು, ಮತ್ತೊಂದು ಭಾಗದ ಆಧಿಪತ್ಯವನ್ನು ಸೇನಾಪತಿಯಾದ ಬಾರಪ್ಪನ ಕಡೆಗೆ ಕೊಟ್ಟನು. ತೈಲಪದೇವನು ತನ್ನ ಪಥಕವನ್ನು ತೆಗೆದುಕೊಂಡು ಮುಂಜರಾಜನ ಸೈನ್ಯದ ಮೇಲೆ ಬಿದ್ದನು. ಎರಡೂ ಸೈನ್ಯಗಳ ನಡುವೆ ತುಮುಲವಾದ ಸಂಗ್ರಾಮ ನಡೆಯಿತು. ತೈಲಪದೇವನ ವೀರ ಕನ್ನಡ ಕಲಿಗಳು ಮಾಳವೆಯರ ಸೈನ್ಯವನ್ನು ನುಗ್ಗು ಮಾಡಲಾರಂಭಿಸಿದರು. ಅಷ್ಟರಲ್ಲಿ ಬಾರಪ್ಪನು ತನ್ನ ಪಥಕದೊಡನೆ ಮಾಳವೆಯರ ಸೈನ್ಯದ ಹಿಂಭಾಗದ ಮೇಲೆ ಬಿದ್ದನು. ಕೂಡಲೆ ಎರಡೂ ಸೈನ್ಯಗಳ ನಡುವೆ ಸಿಲುಕಿದ ಮಾಳವೆಯರು ಕಾಲ್ತೆಗೆಯಬೇಕೆಂಬ ಯತ್ನದಲ್ಲಿದ್ದರು. ತೈಲಪದೇವನು ಅತ್ಯಂತ ವೀರಾವೇಶದಿಂದ ಸಾಗಿ ಹೋಗಿ ಅವರ ಶಿಬಿರವನ್ನು ಸುಲಿದು, ಮಾನ್ಯಖೇಟದ ಸುಲಿಗೆಯನ್ನು ಮರಳಿ ದೊರಕಿಸಿದನು. ಇದಲ್ಲದೆ ಮಾಳವೆಯರ ಶಸ್ತ್ರಾಸ್ತ್ರಗಳೂ, ಕಾಳಗದ ಸಾಮಗ್ರಿಯೂ, ಧನವೂ ತೈಲಪದೇವನ ಸ್ವಾಧೀನವಾದವು. ಕನ್ನಡಿಗರ ವ್ಯೂಹದೊಳಗಿಂದ ಜೀವ ಉಳಿಸಿಕೊಂಡು ಹೋಗಬೇಕಾದರೆ ಮಾಳವೆಯರಿಗೆ ಸಾಕು ಸಾಕಾಗಿ ಹೋಯಿತು!

ಮುಂಜರಾಜನು ಸೈನ್ಯ ಸಹಿತನಾಗಿ ಓಡಿ ಹೋದನೆಂದು ತೈಲಪದೇವನು ಹಿಂದಿರುಗಲಿಲ್ಲ. ಅವನು ಮಾಳವೆಯರನ್ನು ಬೆನ್ನಟ್ಟಿ, ಅಲ್ಲಲ್ಲಿಗೆ ಸೋಲಿಸುತ್ತ ನಡೆದಿದ್ದನು. ಉತ್ತರಾಪಥದವರು ಕರ್ನಾಟಕದ ಹೆಸರು ಎಂದೂ ಎತ್ತದಂತೆ ಮಾಡಿ ಬಿಡಬೇಕೆಂದು ತೈಲಪದೇವನು ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಕನ್ನಡಿಗರ ಹೊಡತದಿಂದ ಮುಂಜರಾಜನ ಸೈನ್ಯವು ನುಗ್ಗುನುಗ್ಗಾಗಿ ಹೋಗಿತ್ತು. ಮಾನ್ಯಖೇಟದಲ್ಲಿ ದೊರಕಿಸಿದ ವಿಜಯಾನಂದದ ಉನ್ಮೇಷವಾದರೂ ಈಗ ಅವರಲ್ಲಿ ಉಳಿದಿರಲಿಲ್ಲ. ಓಡಿ ಹೋದರೂ [illegible] ಪ್ರಸಂಗವೊದಗಿತೆಂದು ಅವರು ಕ್ಲೇಶ ಪಡತೊಡಗಿದರು.

ಪ್ರತಾಪಶಾಲಿಯಾದ ತೈಲಪದೇವನು ಗೋದಾವರೀ ತೀರದಲ್ಲಿ ಬೀಡು ಬಿಟ್ಟಿದ್ದನು. ಅವನು ಅದೇ ಮಾಳವೆಯರಿಗೆ ಗಂಟು ಬಿದ್ದು, ಅವರನ್ನು ಹೊಡೆದೋಡಿಸಿ ವಿಶ್ರಾಂತಿ ತೆಗೆದುಕೊಳ್ಳಲಾರಂಭಿಸಿದ್ದನು. ಅವನ ಬಳಿಯಲ್ಲಿ ಬಾರಪ್ಪ ಸೇನಾಪತಿಯು ಕುಳಿತುಕೊಂಡಿದ್ದನು. ಮುಂಜರಾಜನನ್ನು ಚನ್ನಾಗಿ ಪಾರಿಪತ್ಯಗೊಳಿಸಿಯೇ ತಿರುಗಬೇಕೆಂದು ತೈಲಪದೇವನು ಬಾರಪ್ಪ ಸೇನಾಪತಿಗೆ ಹೇಳತೊಡಗಿದ್ದನು. ಹಾಳಾದ ಮಾನ್ಯಖೇಟ ರಾಜಧಾನಿಯಲ್ಲಿ ಅವ್ಯವಸ್ಥೆಯೂ ಅಶಾಂತತೆಯೂ ನೆಲೆಗೊಂಡಿರುವದರಿಂದ ಮುಂದೆ ಹೋಗುವ ಸಾಹಸ ಮಾಡದೆ, ರಾಜಧಾನಿಗೆ ತೆರಳುವದೇ ಮೇಲೆಂದು ಸೇನಾಪತಿಯು ತೈಲಪದೇವನಿಗೆ ಹೇಳಲಾರಂಭಿಸಿದ್ದನು. ಸೇನಾ

ಪತಿಯ ಅಭಿಪ್ರಾಯವು ತೈಲಪದೇವನಿಗೆ ಸರಿಯಾಗಿ ಕಾಣುತ್ತಿದ್ದರೂ, ಸಂಗ್ರಾಮ ಸ್ಫೂರ್ತಿಯು ಅವನನ್ನು ಹಿಂದಕ್ಕೆ ಹೋಗಗೊಡಲಾರದಾಗಿತ್ತು; ಆದರೂ ಅವನು ರಾಜಧಾನಿಯಲ್ಲಿಯೂ ರಾಜ್ಯದಲ್ಲಿಯೂ ನೆಲೆಗೊಂಡ ಅವ್ಯವಸ್ಥೆಯ ಕಡೆಗೆ ಲಕ್ಷ್ಯ ಗೊಟ್ಟು, ತಿರುಗಿ ಹೋಗಬೇಕೆಂದು ಮನಸ್ಸು ಮಾಡಿದನು. ಅಷ್ಟರಲ್ಲಿ ಅವನ ರಾಹುಟಿಯ ಕಾವಲುಗಾರರಲ್ಲೊಬ್ಬನು ಒಳಗೆ ಪ್ರವೇಶಿಸಿ ತೈಲಪದೇವನಿಗೆ ನಮಸ್ಕಾರ ಮಾಡಿ:—"ಮಹಾರಾಜರೆ, ದ್ವಾರದಲ್ಲಿ ಐದು ಜನ ಒಂಟೆಯ ಸ್ವಾರರು ಬಂದಿರುವರು. ಮಾನ್ಯಖೇಟದಿಂದ ಪತ್ರ ತಂದಿರುವೆವೆಂದು ಅವರು ಹೇಳುತ್ತಾರೆ. ಒಳಗೆ ಬಿಡಲಪ್ಪಣೆಯಾದರೆ ಬಿಡುವೆನು."

ಕಾವಲುಗಾರನು ಹೀಗೆ ಹೇಳಿದ ಕೂಡಲೆ, ತೈಲಪದೇವನು ಸ್ವಾರರನ್ನು ಒಳಗೆ ಕಳುಹಿಸುವದಕ್ಕೆ ಆಜ್ಞೆ ಮಾಡಿದನು. ಅನಂತರದಲ್ಲಿ ಸ್ವಾರರು ಒಳಗೆ ಬಂದು ತೈಲಪದೇವನಿಗೆ ವಂದನೆಗಳನ್ನರ್ಪಿಸಿ, ತಾವು ತಂದ ಪತ್ರಿಕೆಯನ್ನು ಅವನ ಸ್ವಾಧೀನ ಪಡಿಸಿದರು. ಆ ಪತ್ರವು ಅರಿಕೇಸರಿಯಿಂದ ಬಂದಿರುವದೆಂಬದನ್ನು ತೈಲಪದೇವನು ಆ ಕ್ಷಣದಲ್ಲಿಯೆ ಗುರುತಿಸಿ, ಅದನ್ನು ಓದಲಾರಂಭಿಸಿದನು. ಪತ್ರವನ್ನೋದುತ್ತ ಹೋದಂತೆ ಅವನ ಮುಖಚರ್ಯೆಯು ಉಗ್ರವಾಗತೊಡಗಿತು. ಪತ್ರವನ್ನೋದುವದು ಮುಗಿದ ಕೂಡಲೆ ಅವನು:—"ರಾಷ್ಟ್ರಕೂಟರ ಪುಣ್ಯವು ತೀರಿರುವದು. ಅಂತೆಯೆ ಅವರು ಮನಸೋಕ್ತನಾಗಿ ನಡೆಯುತ್ತೊಡಗಿರುವರು."

"ಮಹಾರಾಜರೆ," ತೈಲಪದೇವನ ಉದ್ಗಾರವನ್ನು ಕೇಳಿ ಬಾರಪ್ಪ ಸೇನಾಪತಿಯು ಉತ್ಕಂಠಿತನಾಗಿ:—"ಮತ್ತೇನು ವಿಶೇಷವು?"

"ಮಾರಸಿಂಹ-ಶಾಂತಿವರ್ಮ ಮೊದಲಾದ ಕಾರಸ್ಥಾನಿಗಳು ಕಕ್ಕಲದೇವರಾಜನಿಗೆ ಪಟ್ಟಾಭಿಷೇಕ ಮಾಡಿರುವರಂತೆ ಇಷ್ಟಲ್ಲದೆ, ರಾಜಧಾನಿಯನ್ನು ಬಿಟ್ಟು ತೆರಳುವದಕ್ಕಾಗಿ ಅರಿಕೇಸರಿಯವರಿಗೆ ರಾಜಾಜ್ಞೆಯಾಗಿರುವದಂತೆ!"

"ಮುಂಜರಾಜನ ದವಡೆಯೊಳಗಿಂದ ರಾಜಧಾನಿಯನ್ನು ಪಾರುಮಾಡಿ, ಸಾಮ್ರಾಜ್ಯದ ಮೇಲೆ ಬಂದ ದೊಡ್ಡ ಗಂಡಾಂತರವನ್ನು ದೂರ ಮಾಡಿದ್ದಕ್ಕಾಗಿ ಕಕ್ಕಲದೇವರಾಜರು ಉಪಕಾರ ತೀರಿಸಿದರು ಪಟ್ಟಬಂಧೋತ್ಸವದಂತಹ ದೊಡ್ಡ ಕಾರ್ಯವನ್ನು ಅರಿಕೇಸರಿಯವರ ನೆರವಿಲ್ಲದಾಗ ನೆರವೇರಿಸಿದ್ದನ್ನು ನೋಡಿದರೆ, ಅವರು ಅಮೂರ ವ್ಯಕ್ತಿಯವರೆಂಬದು ಸ್ಪಷ್ಟವಾಗುತ್ತದೆ"

"ಚಾಲುಕ್ಯರು ಕರ್ನಾಟಕ ಸಾಮ್ರಾಜ್ಯ ಸಿಂಹಾಸನವನ್ನು ಸೆಳೆದುಕೊಳ್ಳುವ ಯತ್ನದಲ್ಲಿರುವರೆಂಬ ಸಂಶಯವು ಬಂದದ್ದರಿಂದ ಕಾರಸ್ಥಾನಿಗಳಾದ ಮಾರಸಿಂಹ-ಶಾಂತಿವರ್ಮರು ಒತ್ತಾಯದಿಂದ ರಾಜ್ಯಾರೋಹಣ ಸಮಾರಂಭವನ್ನು ಪೂರೈಸಿದರೆಂದು ಅರಿಕೇಸರಿಯವರು ಪತ್ರದಲ್ಲಿ ಬರೆದಿರುವರು. ರಾಷ್ಟ್ರಕೂಟರು ನಮ್ಮ ಪೂರ್ವಜರನ್ನು ಮೋಸಗೊಳಿಸಿ ಸಾಮ್ರಾಜ್ಯವನ್ನು ಸೆಳೆದುಕೊಂಡದ್ದರ ಸೇಡನ್ನು ನಾನು ತೀರಿಸಿಕೊಳ್ಳುವೆನು. ರಾಷ್ಟ್ರಕೂಟರ ಬಲವಾದರೂ ಎಷ್ಟಿರುವದೆಂಬದು

ಒರೆಗೆ ಹಚ್ಚಲಿ. ಕೊಟ್ಟಿಗದೇವನಿಗಿಂತ ಕಕ್ಕಲದೇವನು ಹೇಡಿಯಿರುವನು. ಅವನ ವಶದಲ್ಲಿ ಸಾಮ್ರಾಜ್ಯವು ಉಳಿಯಿತೆಂದರೆ ಅದು ಸ್ವಲ್ಪ ದಿನಗಳಲ್ಲಿ ಹಾಳಾಗಿ ಹೋಗುವದು. ಸಾಮ್ರಾಜ್ಯಸಿಂಹಾಸನಕ್ಕೆ ಸ್ಥೈರ್ಯವುಂಟಾಗಬೇಕಾದರೆ ಅದನ್ನು ಬೇಗನೆ ವಶಪಡಿಸಿಕೊಳ್ಳಲಿಕ್ಕೆ ಬೇಕು. ಬಾರಪ್ಪನನರೆ, ಇನ್ನು ಮುಂಜರಾಜನ ಬೆನ್ನು ಹತ್ತಿ ಹೋಗುವ ಕಾರಣವಿಲ್ಲ. ಮಾರಸಿಂಹ, ಶಾಂತಿವರ್ಮ, ಕಾರ್ತವೀರ್ಯ ಮೊದಲಾದ ಸಾಮಂತರನ್ನೂ, ಕಕ್ಕಲದೇವನನ್ನೂ ಪರಾಭವಗೊಳಿಸಿದ ಮೇಲೆಯೆ ಬೇರೆ ಕೆಲಸ ಮಾಡಬೇಕಾಗಿದೆ. ಕಾಳಗ ಮಾಡದೆ ಮಾನ್ಯಖೇಟ ರಾಜಧಾನಿಯಲ್ಲಿ ನಮ್ಮ ಪ್ರವೇಶವಾಗಲಾರದು. ನಾಳಿನ ಬೆಳಗಿನ ಜಾವದಲ್ಲಿಯೆ ಈ ಸ್ಥಳವನ್ನು ಬಿಡುವ ಸಿದ್ಧತೆ ಮಾಡಿರಿ"

ಮಾರನೆಯ ದಿನ ಬೆಳಗಿಗೆ ತೈಲಪದೇವನ ಸೈನ್ಯವು ಮಾನ್ಯಖೇಟಕ್ಕೆ ಹೊರಟಿತು. ಕೆಲವು ದಿನ ಪ್ರಯಾಣ ಮಾಡಿದ ಮೇಲೆ ಮಾರ್ಗದಲ್ಲಿ ವಸತಿ ಮಾಡಿದಾಗ ಅರಿಕೇಸರಿಯ ಮತ್ತೊಂದು ಪತ್ರವು ಅವನ ಕೈಗೆ ಬಂತು. ಮಾನ್ಯಖೇಟವನ್ನು ಬಿಟ್ಟ ಮೇಲೆ ದಾರಿಯಲ್ಲಿ ಮಂಗಿವರ್ಮ ಸೇನಾಪತಿಯೊಡನೆ ಮಾಡಿದ ಕಾಳಗದ ಸಂಗತಿಯೂ, ಬಪ್ಪುವದೇವನು ವಾತಾಪಿಪುರವನ್ನು ಮುತ್ತಿ ಸೋತು ಓಡಿಹೋದ ಸಂಗತಿಯೂ † ಆ ಪತ್ರದಲ್ಲಿ ಬರೆಯಲ್ಪಟ್ಟಿತ್ತು. ಕಕ್ಕಲದೇವ, ಮಾರಸಿಂಹ, ಶಾಂತಿವರ್ಮ ಮೊದಲಾದವರು ಅತ್ಯಂತ ಉನ್ಮತ್ತರಾಗಿ ಮನಬಂದಂತೆ ನಡೆಯ ತೊಡಗಿರುವದನ್ನು ನೋಡಿ ತೈಲಪದೇವನ ಸಂತಾಪವು ದ್ವಿಗುಣಿತವಾಯಿತು. ಕಕ್ಕಲದೇವನು ತನ್ನ ರಾಜಧಾನಿಯನ್ನು ಮುತ್ತುವದಕ್ಕಾಗಿ ಮುಂದುವರಿದ ಮೇಲೆ ಅವನು ತೀರ ಅವಿಚಾರಿಯಿರುವನೆಂದು ತೈಲಪದೇವನು ನಿರ್ಧರಿಸಿದನು. ಮಾರಸಿಂಹಾದಿಗಳ ಉಪದೇಶದಿಂದ ಕಕ್ಕಲದೇವನು ತಾಂಡವ ನೃತ್ಯವನ್ನೇ ಪ್ರಾರಂಭ ಮಾಡಿರುವನೆಂದು ಅವನ ಗ್ರಹಿಕೆಯಾಯಿತು.

ಕಾಳಗ ಮಾಡದೆ ಮಾನ್ಯಖೇಟವನ್ನು ಪ್ರವೇಶ ಮಾಡುವದು ಸಾಧ್ಯವಿಲ್ಲೆಂದು ತೈಲಪದೇವನು ತರ್ಕಿಸಿದ್ದನು. ರಾಜಧಾನಿಯನ್ನು ಸಮೀಪಿಸಿದ ಕೂಡಲೆ ಅವನ ತರ್ಕವು ನಿಜವಾಯಿತು. ಮಾರಸಿಂಹ ಶಾಂತಿವರ್ಮರು ಯುದ್ಧಕ್ಕೆ ಸಿದ್ಧರಾಗಿರುವರೆಂದು ತೈಲಪದೇವನ ಕಡೆಯವರು ಸುದ್ದಿ ತಂದರು ಕಾಳಗದ ಪ್ರಸಂಗವೊದಗುವದೆಂದು ತೈಲಪದೇವನು ಮುಂಚಿತವಾಗಿಯೆ ತಿಳಿದಿದ್ದನು. ಅವನು ತನ್ನ ಮಾವನಾದ ಕಕ್ಕಲದೇವನ ಕೊಬ್ಬನ್ನಡಗಿಸಬೇಕೆಂದು ನಿರ್ಧರಿಸಿ ರಾಜಧಾನಿಯನ್ನು ಮುತ್ತುವದಕ್ಕಾಗಿ ರಭಸದಿಂದ ಸಾಗಿದನು.

ತೈಲಪದೇವನು ದೊಡ್ಡ ಸೈನ್ಯದೊಡನೆ ರಾಜಧಾನಿಯನ್ನು ಸಮೀಪಿಸಿರುವನೆಂಬ ವಾರ್ತೆಯು ಕಕ್ಕಲದೇವ-ಮಾರಸಿಂಹರಿಗೆ ಗೊತ್ತಾಯಿತು. ಕಕ್ಕಲದೇವನು

† ಕಕ್ಕಲನು ತನ್ನ ತಮ್ಮನೊಡನೆ ಒಂದು ದಂಡನ್ನು ಅರಿಕೇಸರಿಯನ್ನು ದಂಡಿಸಲಿಕ್ಕೆ ಕಳುಹಿದನೆಂದು ಪಂಪಭಾರತದಲ್ಲಿ ಬರೆದಿದೆ. ಪಂಪಭಾರತ, ಆಶ್ವಾಸ ೯, ಪುಟ, ೩೪೪.

ಸಿಂಹಾಸನಾರೂಢನಾಗಿ ಸಾಮ್ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಿದ್ದರೂ, ಅವನಲ್ಲಿ ಅಲ್ಪವಾದರೂ ಕಾರ್ಯಕ್ಷಮತೆಯಿರಲಿಲ್ಲ. ಅವನು ಕೇವಲ ಮಾರಸಿಂಹ ಶಾಂತಿವರ್ಮ ಮೊದಲಾದವರನ್ನು ಅವಲಂಬಿಸಿದ್ದನು ಅವನ ತಮ್ಮನಾದ ಬಪ್ಪುವ ದೇವನು ಪಾತಾಪಿಪುರದಲ್ಲಿ ಅಪಜಯ ಹೊಂದಿ ಹೊರಟಿರುವನೆಂಬ ಸುದ್ದಿಯು ರಾಜಧಾನಿಗೆ ಬಂದಿತ್ತು; ಆದರೆ ಅವನು ಮಾತ್ರ ಇನ್ನೂ ರಾಜಧಾನಿಗೆ ಬಂದಿರಲಿಲ್ಲ. ಮುಂಜರಾಜ-ಅರಿಕೇಸರಿಯರೊಡನೆ ಯುದ್ಧ ಮಾಡಿದ್ದರಿಂದ ರಾಜಧಾನಿಯೊಳಗಿನ ಬಹು ಭಾಗ ಸೈನ್ಯವು ನಾಶಹೊಂದಿತ್ತು. ಉಳಿದ ಅಲ್ಪ ಸೈನ್ಯವು ತೈಲಪದೇವನ ಮಹಾಬಲವನ್ನು ಎದುರಿಸಲಿಕ್ಕೆ ಅಸಮರ್ಥವಾಗಿತ್ತು. ಅರಿಕೇಸರಿಯು ಕಳುಹಿಸಿದ ಒಂಟೆಯ ಸ್ವಾರರು ತೈಲಪದೇವನನ್ನು ಕರೆತಂದಿರುವರೆಂಗೂ, ಪ್ರಕ್ಷುಬ್ಧ ಮನಸ್ಕನಾದ ತೈಲಪದೇವನು ರಾಜಧಾನಿಯನ್ನು ಮುತ್ತುವದಕ್ಕಾಗಿಯೆ ಸಾಗಿಬಂದಿರುವನೆಂದೂ ಮಾರಸಿಂಹಾದಿಗಳು ತಿಳಿದುಕೊಂಡರು. ಆಗ ರಾಜಧಾನಿಯಲ್ಲಿ ದಂಡು ಕಡಿಮೆಯಿದ್ದುದರಿಂದ ಸೂತ್ರಚಾಲಕನಾದ ಮಾರಸಿಂಹನು ಭಯಗೊಂಡನು. ತೈಲಪದೇವನನ್ನು ಪರಾಭವಗೊಳಿಸಿ ಕಳಿಸದಿದ್ದರೆ ರಾಷ್ಟ್ರಕೂಟರ ಸಿಂಹಾಸನವು ಅವನ ವಶವಾಗುವದೆಂದು ಮಾರಸಿಂಹನು ಚಿಂತಿಸತೊಡಗಿದನು. ಆಗ ರಾಜಧಾನಿಯಲ್ಲಿ ದಂಡಿನ ಕೊರತೆಯಿತ್ತು. ಹೊಸ ದಂಡು ಕೂಡಿಸಬೇಕೆಂದರೆ, ಬೊಕ್ಕಸದಲ್ಲಿ ಹಣವಿದ್ದಿಲ್ಲ ರಾಜಧಾನಿಯೊಳಗಿನ ಪ್ರಜಾಜನರ ಸಂಪತ್ತನ್ನು ಮುಂಜರಾಜನು ದೋಚಿಕೊಂಡು ಹೋದ್ದರಿಂದ ಸಾಲವಾಗಿ ಹಣ ದೊರೆಯುವದು ಸಹ ಕಠಿಣವಿತ್ತು. ಕಕ್ಕಲ-ಮಾರಸಿಂಹರ ಪಕ್ಷದ ಕಾರ್ಯಕ್ಕೆ ಸಾಮ್ರಾಜ್ಯದೊಳಗಿನ ಪ್ರಜೆಗಳೂ ಸರದಾರ ಸಾಮಂತಾದಿಗಳೂ ಬೇಸತ್ತಿದ್ದರು. ಇಂತಹ ಪ್ರತಿಕೂಲ ಸ್ಥಿತಿಯಲ್ಲಿ ತೈಲಪದೇವನೊಡನೆ ಕಾದುವದು ಕಠಿಣವೆಂಬುದು ಮಾರಸಿಂಹನಿಗೆ ಗೊತ್ತಾದರೂ, ಆ ಬಂಟನು ಎದೆಗುಂದದೆ ಯುದ್ಧದ ಸಿದ್ಧತೆಯಲ್ಲಿ ತೊಡಗಿದನು. ಅರಮನೆಯ ಹೆಂಗಸರ ಮುತ್ತು-ರತ್ನಗಳ ಅಲಂಕಾರಗಳನ್ನು ಸಾವುಕಾರರಲ್ಲಿ ಅಡವು ಇಟ್ಟು ಹಣತಂದು, ಸೈನ್ಯ ಕೂಡಿಸುವ ಕಾರ್ಯಕ್ಕೆ ಪ್ರಾರಂಭವಾಯಿತು. ಕಿರೀಟ ಮುಂತಾದ ರಾಜಚಿಹ್ನಗಳು ಸಹ ಸಾಹುಕಾರರ ಮನೆಯ ದಾರೀ ಹಿಡಿದವು. ಹಟವಾದಿಯಾದ ಮಾರಸಿಂಹನು ಹಾಗೂ ಹೀಗೂ ಮಾಡಿ ಬಾಡಿಗೆಯ ಸೈನ್ಯವನ್ನು ಸಿದ್ಧಪಡಿಸಿದನು. ಅಷ್ಟರಲ್ಲಿ ತೈಲಪದೇವನು ಸೈನ್ಯಸಹಿತನಾಗಿ ರಾಜಧಾನಿಯ ಸಮೀಪಕ್ಕೆ ಬಂದನೆಂಬ ಸುದ್ದಿಯು ಬಂತು

ತೈಲಪದೇವನನ್ನು ರಾಜಧಾನಿಗೆ ಬರಗೊಡದೆ, ಮಾರ್ಗದಲ್ಲಿಯೆ ಪರಾಭವಗೊಳಿಸಬೇಕೆಂದು ಯೋಚನೆ ಮಾಡಿ, ಮಾರಸಿಂಹನು ತನ್ನ ಬಾಡಿಗೆಯ ಸೈನ್ಯದೊಡನೆ ರಾಜಧಾನಿಯನ್ನು ಬಿಟ್ಟು ಹೊರಟನು. ಶಾಂತಿವರ್ಮನ ಕಡೆಗೆ ರಾಜಧಾನಿಯ ಭದ್ರತೆಯ ಕಾರ್ಯವು ವಹಿಸಲ್ಪಟ್ಟಿತ್ತು. ಮಾರಸಿಂಹನು ತನ್ನ ದಂಡನ್ನು ತೆಗೆದುಕೊಂಡು ಹೋಗಿ ತೈಲಪದೇವನೊಡನೆ ಕಾಳಗವನ್ನು ಪ್ರಾರಂಭಿಸಿದನು.

ಇಬ್ಬರೂ ನಾಮಾಂಕಿತ ಕಲಿಗಳು. ಕಾಳಗದ ಪರಿಣಾಮದ ಮೇಲೆ ಇಬ್ಬರ ಸರ್ವಸ್ವವೂ ಅವಲಂಬಿಸಿದ್ದದರಿಂದ ಅವರು ಪ್ರಾಣದ ಹಂಗುದೊರೆದು ಅತಿಸಾಹಸ ಮಾಡಿದರು. ಎಷ್ಟಾದರೂ ಮಾರಸಿಂಹನ ಒಂದು ಬಿಟ್ಟಿಯವರದಾಗಿತ್ತು. ಅವರಲ್ಲಿ ಸುವ್ಯವಸ್ಥೆಯಾಗಲಿ, ವಿಧೇಯತ್ವವಾಗಲಿ ಕಂಡು ಬರುತ್ತಿರಲಿಲ್ಲ. ತೈಲಪದೇವನ ದಂಡಾಳುಗಳು ಕಾಳಗದಲ್ಲಿ ನುರಿತವರೂ ವಿಜಯಶಾಲಿಗಳೂ ಸ್ವಾಮಿಕಾರ್ಯಕ್ಕಾಗಿ ಜೀವದ ಪರಿವೆಯನ್ನು ಬಿಡತಕ್ಕಂತಹರೂ ಆಗಿದ್ದರು. ಮಾರಸಿಂಹ-ತೈಲಪದೇವ ರಾಜರ ಸೈನ್ಯಗಳ ನಡುವೆ ತುಮುಲವಾದ ಯುದ್ಧವು ನಡೆಯಿತು. ಕೊನೆಗೆ ಜಯಲಕ್ಷ್ಮಿಯು ತೈಲಪದೇವನ ಕೊರಳಿಗೇ ಮಾಲೆ ಹಾಕಿದಳು. ಮಾರಸಿಂಹನೂ ಅವನ ಸೈನಿಕರೂ ದಾರಿ ದೊರೆತ ಕಡೆಗೆ ಓಡಿಹೋದರು.

ದೈವಶಾಲಿಯಾದ ತೈಲಪದೇವನು ಮಾರನೆಯ ದಿನ ಮಾನ್ಯಖೇಟವನ್ನು ನಿರಾತಂಕವಾಗಿ ಪ್ರವೇಶಿಸಿದನು. ದುರ್ಗ ಹಾಗು ರಾಜಧಾನಿಯ ರಕ್ಷಣೆಯ ಕಾರ್ಯವನ್ನು ವಹಿಸಿಕೊಂಡಿದ್ದ ಶಾಂತಿವರ್ಮನಾಗಲಿ, ಸಾರ್ವಭೌಮನಾಗಿದ್ದ ಕಕ್ಕಲದೇವನಾಗಲಿ ಅಲ್ಲಿ ಇದ್ದಿಲ್ಲ. ಅರಮನೆಯಲ್ಲಿ ಒಂದು ಹಕ್ಕಿಯಾದರೂ ಇರಲಿಲ್ಲ. ತನ್ನ ಮನೆತನದ ಜನರೆಲ್ಲರೂ ಅರಿಕೇಸರಿಯೊಡನೆ ವಾತಾಪಿಪುರಕ್ಕೆ ಹೋಗಿರುವರೆಂಬುದು ಅವನಿಗೆ ಗೊತ್ತಾಯಿತು ತರುಣನೂ, ಶೂರನೂ, ಸದ್ಗುಣಿಯೂ, ಪ್ರಜಾನುರಾಗಿಯೂ, ತೇಜಸ್ವಿಯೂ ಆದ ತೈಲಪದೇವನು ವಿಜಯ ಹೊಂದಿದ್ದರಿಂದ, ರಾಜಧಾನಿಯೊಳಗಿನ ಎಲ್ಲ ಪ್ರಜಾಜನರ ಆನಂದಕ್ಕೆ ಮೇರೆದಪ್ಪಿತ್ತು. ಮುದ್ದಣ ಮಂತ್ರಿಯು ತೈಲಪದೇವನಿಗೆ ಅನುಕೂಲವಾಗಿ ನಡೆಯತೊಡಗಿದನು. ಸಾಮ್ರಾಜ್ಯಸಿಂಹಾಸನವನ್ನೇರಿ ಕರ್ನಾಟಕದ ಗೌರವವನ್ನು ಕಾಯಬೇಕೆಂದು ಅನೇಕ ಮಂಡಲೇಶ್ವರರಿಂದ ಸಹಾನುಭೂತಿಪರವಾದ ಪತ್ರಗಳು ಅವನಿಗೆ ಬರತೊಡಗಿದವು. ತೈಲಪದೇವನ ದೈವಬಲವು ಒಳಿತಾಗಿದ್ದುದರಿಂದ ಅವನಿಗೆ ಕಾಲವು ಅನುಕೂಲವಾಗುತ್ತ ನಡೆಯಿತು.

ಮಾರಸಿಂಹನು ಪಲಾಯನ ಮಾಡುವಾಗ ಶಾಂತಿವರ್ಮ-ಕಾರ್ತವೀರ್ಯರೂ ಅವನ ಬೆನ್ನ ಹಿಂದೆ ನಾಗಿದರು. ನಿರಾಧಾರಿಯಾದ ರಾಷ್ಟ್ರಕೂಟ ಸಾರ್ವಭೌಮ ಕಕ್ಕಲದೇವನಾದರೂ ಅವನನ್ನು ಕೂಡಿಕೊಂಡನು. ಮಾರಸಿಂಹನು ಮುದಗಲ್ಲಿನಲ್ಲಿ ತಳವೂರಿ, ಭೇದೋಪಾಯದಿಂದ ಸಾಮ್ರಾಜ್ಯದೊಳಗಿನ ಮಂಡಲೇಶ್ವರರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಕಾರಸ್ಥಾನವನ್ನು ಪ್ರಾರಂಭಿಸಿದನು. ಕಕ್ಕಲದೇವ ಶಾಂತಿವರ್ಮ ಕಾರ್ತವೀರ್ಯ ಮೊದಲಾದ ರಾಷ್ಟ್ರಕೂಟರು ಅವನ ಪಾಳ್ಯದಲ್ಲಿಯೆ ಇದ್ದರು. ಶಾಂತಿವರ್ಮ-ಕಾರ್ತವೀರ್ಯರು ತಮ್ಮ ತಮ್ಮ ರಾಜ್ಯಗಳಿಂದ ಹೊಸ ಸೈನ್ಯವನ್ನು ಕರೆತರುವ ಆಲೋಚನೆಯಲ್ಲಿದ್ದರು. ತೈಲಪದೇವನು ನೀಚ ಸ್ವಾರ್ಥಕ್ಕೆ ಮನವೆಳಸಿ, ಪಟ್ಟಬಾಧ್ಯನಾದ ಕಕ್ಕಲದೇವನನ್ನು ಸಿಂಹಾಸನ ಭ್ರಷ್ಟನನ್ನು ಮಾಡಿರುವನೆಂದೂ, ನಿಜವಾದ ರಾಜನಿಷ್ಠರು ಸತ್ಪಕ್ಷವಾದ ತಮ್ಮ ಪಕ್ಷಕ್ಕೆ ಸಹಾಯ

ಮಾಡಬೇಕೆಂದೂ ಮಾರಸಿಂಹ ಶಾಂತಿವರ್ಮ ಮೊದಲಾದವರು ಸಾಮ್ರಾಜ್ಯದೊಳಗಿನ ಮಂಡಲೇಶ್ವರರಿಗೆ ವಿನಂತಿಪತ್ರಿಕೆಗಳನ್ನು ಕಳುಹಿದ್ದರು.

ತೈಲಪದೇವನು ಮಾನ್ಯಖೇಟದಲ್ಲಿ ನಿಂತು ಸಾಮ್ರಾಜ್ಯದ ವ್ಯವಸ್ಥೆಯನ್ನು ಮಾಡತೊಡಗಿದನು. ಕಕ್ಕಲದೇವ ಮಾರಸಿಂಹ ಮೊದಲಾದ ಶತ್ರುಗಳು ಮುಂದೆ ಏನು ಮಾಡುವ ಆಲೋಚನೆಯಲ್ಲಿರುತ್ತಾರೆಂಬದನ್ನು ತಿಳಿದುಕೊಳ್ಳಲಿಕ್ಕೆ ಅವನು ತನ್ನ ಗುಪ್ತಚಾರರನ್ನು ಕಳುಹಿಸಿದ್ದನು. ಅವರೊಳಗೊಬ್ಬನು ತಿರುಗಿ ಬಂದು—"ಜೀಯಾ, ನಾನು ಸಂನ್ಯಾಸಿಯ ವೇಷವನ್ನು ಧರಿಸಿ, ಮಾರಸಿಂಹನನ್ನು ಅರಸುತ್ತ ಹೋದೆನು. ಅವನು ಕೃಷ್ಣಾನದಿಯಾಚೆಗೆ ಮುದಗಲ್ಲಿನ ಹತ್ತರ ಪಾಳಯ ಹಾಕಿಕೊಂಡು ನಿಂತಿದ್ದಾನೆ. ಸವದತ್ತಿಯ ರಟ್ಟರೂ ಬೇರೆ ಕೆಲವರೂ ಅವನಿಗೆ ನೆರವಾಗಲಿಕ್ಕೆ ಬರತಕ್ಕವರಿದ್ದಾರೆಂಬ ವಾರ್ತೆಯಿದೆ. ಅವರ ಹಾದಿಯನ್ನು ನೋಡುತ್ತ ಮಾರಸಿಂಹನು ಕುಳಿತಿದ್ದಾನೆ. ಅವರು ಬಂದ ಮೇಲೆ ಎಲ್ಲರೂ ಒಟ್ಟಾಗಿ ತಮ್ಮ ಮೇಲೆ ಸಾಗಿಬರುವವರಿರುವರಂತೆ ಕಕ್ಕಲದೇವಮಹಾರಾಜರು ಮಾರಸಿಂಹರ ಪಾಳಯದಲ್ಲಿರುವರು ಇದ್ದ ಸಂಗತಿಯನ್ನು ಅರಿಕೆಮಾಡಿಕೊಂಡಿರುತ್ತೇನೆ. ದಿವ್ಯಚಿತ್ತಕ್ಕೆ ಬಂದಂತೆ ಮಾಡಬಹುದು."

ಈ ಸುದ್ದಿಯನ್ನು ಕೇಳಿದೊಡನೆಯೆ ಪ್ರತಾಪಶಾಲಿಯಾದ ತೈಲಪದೇವನ ಎದೆ ಉಬ್ಬಿತು; ಶತ್ರುಗಳ ಮೇಲಿನ ಸಿಟ್ಟಿನಿಂದ ಕಣ್ಣುಗಳು ಕೆಂಪಾದವು; ಮೈಯಲ್ಲಿ ವೀರಶ್ರೀಯು ತುಂಬಿತು; ಗಂಗ ರಟ್ಟರ ದಂಡಾಳುಗಳನ್ನು ತುಂಡರಿಸುವ ಸಂಕಲ್ಪವು ತಲೆದೋರಿತು. ಕೂಡಲೆ ಅವನು ತನ್ನ ಎಲ್ಲ ದಳವಾಯಿಗಳನ್ನು ಕರೆಯಿಸಿ, ಮಾರನೆಯದಿನ ಮುಂಜಾವಿನಲ್ಲಿ ಮುದಗಲ್ಲಿಗೆ ಹೊರಡಬೇಕೆಂದು ಕಟ್ಟಪ್ಪಣೆಯಿತ್ತನು. ತಾನು ಮಾರಸಿಂಹನ ಮೇಲೆ ದಂಡೆತ್ತಿ ಹೋಗುವೆನೆಂಬ ವಾರ್ತೆಯನ್ನು ಅರಿಕೇಸರಿಗೆ ತಿಳಿಸಿ, ರಾಜಧಾನಿಯ ಸಂರಕ್ಷಣೆಯ ಮಟ್ಟಿಗೆ ದಂಡನ್ನು ಬಿಟ್ಟು, ಉಳಿದ ಸೈನ್ಯವನ್ನು ತೆಗೆದುಕೊಂಡು ಹೊರಗಿಂದ ಹೊರಗೆ ಮುದಗಲ್ಲಿಗೆ ಬರಬೇಕೆಂದು ತಿಳಿಸಿದನು. ಅನಂತರದಲ್ಲಿ ಅವನು ತನ್ನ ಅಪಾರವಾದ ಸೈನ್ಯದೊಡನೆ ಮಾನ್ಯಖೇಟದಿಂದ ಹೊರಟು, ಮುದಗಲ್ಲಿನಲ್ಲಿದ್ದ ಮಾರಸಿಂಹನ ದಂಡಿನ ಮೇಲೆ ಬಿದ್ದನು. ಎರಡೂ ಸೈನ್ಯಗಳ ನಡುವೆ ನಿಕರವಾದ ಸಂಗ್ರಾಮವಾಯಿತು.

ತೈಲಪದೇವನ ದೈವಬಲವು ಚನ್ನಾಗಿತ್ತೆಂದು ನಿರ್ವಿವಾದವಾಗಿ ಹೇಳಬಹುದು. ಎರಡು ಶತಕಗಳವರೆಗೆ ಸಾಮ್ರಾಜ್ಯಲಕ್ಷ್ಮಿಗೆ ಹೊರತಾಗಿ ಅಜ್ಞಾತವಾಸದಲ್ಲಿದ್ದ ಚಾಲುಕ್ಯರ ಅಭ್ಯುದಯ ಕಾಲವೊದಗಿದ್ದರಿಂದಲೇ ತೈಲಪದೇವನ ಹಿಡಿದ ಕಾರ್ಯಗಳು ಯಶಸ್ವಿಯಾಗುತ್ತ ನಡೆದಿದ್ದವು. ಕಕ್ಕಲದೇವ ಮಾರಸಿಂಹರ ಸ್ಥಿತಿಯು ಇದಕ್ಕೆ ವಿಪರೀತವಾಗಿತ್ತು. ಗೆಲವಿನಿಂದ ಕಳೆಗೊಂಡ ಮುಖವೆತ್ತಿ ತಿರುಗಾಡುವ ಸುಕೃತವು ಅವರದಿದ್ದಿಲ್ಲವೆಂದು ಹೇಳಬಹುದು. "ಅರಕ್ಷಿತಸ್ತಿಷ್ಠತಿ

ದೈವರಕ್ಷಿತಃ | ಸುರಕ್ಷಿತೋಽ ದೈವಹತೋಽ ವಿನಶ್ಯತಿ" ಎಂಬಂತೆ ಅವರಿಗೆ ಆಗಿನ ಪರಿಸ್ಥಿತಿಯಿತ್ತು. ದೈವಹತರಾದ ಕಕ್ಕಲದೇವ-ಮಾರಸಿಂಹರು ಎಷ್ಟೇ ಪರಾಕ್ರಮದಿಂದ ಕಾದಿದರೂ ಅವರಿಗೆ ವಿಜಯವು ದೊರೆಯಲಿಲ್ಲ. ದೈವರಕ್ಷಿತನಾದ ತೈಲಪದೇವನು ಗಂಗ-ರಟ್ಟರನ್ನು ಕಾಳಗದಲ್ಲಿ ಸೋಲಿಸಿದನು. ಯುದ್ಧದಲ್ಲಿ ಕಕ್ಕಲದೇವನು ಮರಣಹೊಂದಿದನು ಮಾರಸಿಂಹ-ಶಾಂತಿವರ್ಮರು ತಮ್ಮ ಅವಶೇಷ ಸೈನ್ಯಸಹಿತವಾಗಿ ಪಲಾಯನ ಮಾಡಿದರು.

ರಟ್ಟ ಸಾಮಂತನಾದ ಶಾಂತಿವರ್ಮನು ಮುದಗಲ್ಲಿನ ಯುದ್ಧಭೂಮಿಯಿಂದ ಪಲಾಯನ ಮಾಡಿದನಷ್ಟೆ? ಅವನು ಸವದತ್ತಿಗೆ ಹೋಗುವಾಗ ರಾಷ್ಟ್ರಕೂಟ ಮಾಂಡಲಿಕರನ್ನು ತನ್ನ ಕಡೆಗೆ ಒಲಿಸಿಕೊಳ್ಳುತ್ತ ದಂಡು ಕೂಡಿಸತೊಡಗಿದನು. ರಾಷ್ಟ್ರಕೂಟ ಸಾಮ್ರಾಜ್ಯವು ಚಾಲುಕ್ಯರ ವಶವಾಗಬಾರದೆಂದು ಅವನು ದೀರ್ಘ ಸಾಹಸ ಕೈಕೊಂಡಿದ್ದನು. ಅವನು ಅನೇಕ ಮಂಡಲೇಶ್ವರರನ್ನು ತನ್ನ ಕಡೆಗೆ ಮಾಡಿಕೊಂಡು ಸಾಕಷ್ಟು ಸೈನ್ಯವನ್ನು ಕೂಡಿಸಿಕೊಂಡನು. ಶಾಂತಿವರ್ಮನ ಈ ಕಾರಸ್ಥಾನವು ಮುದಗಲ್ಲಿನಲ್ಲಿರುವಾಗಲೇ ತೈಲಪದೇವನಿಗೆ ತಿಳಿಯಿತು. ಕೂಡಲೆ ಆ ಕಲಿಯು ತಡಮಾಡದೆ ತನ್ನ ಸೈನ್ಯವನ್ನು ಸವದತ್ತಿಯ ಕಡೆಗೆ ಹೊರಳಿಸಿದನು.

ತೈಲಪದೇವನು ಶಾಂತಿವರ್ಮನ ಸೈನ್ಯವನ್ನು ಮುತ್ತಿ ಅದನ್ನು 'ತ್ರಾಹಿ ಭಗವನ್' ಎಂದೆನಿಸಿಬಿಟ್ಟನು. ರಟ್ಟರ ದಂಡು ಮತ್ತೆ ಪಲಾಯನಕ್ಕಾರಂಭಿಸಿತು. ತೈಲಪದೇವನು ಅದನ್ನು ಬೆನ್ನಟ್ಟಿ ಹೋಗಿ ಸವದತ್ತಿಯ ಬಳಿಯಲ್ಲಿ ಮತ್ತೆ ಸೋಲಿಸಿದನು. ಪ್ರತಾಪನಿಧಿಯಾದ ತೈಲಪದೇವನ ಅಬ್ಬರಕ್ಕೆ ಶಾಂತಿವರ್ಮನ ಎದೆಯು ನಡುಗಿತು. ಅವನು ಹೆದರಿ ತೈಲಪದೇವನೊಡನೆ ಒಪ್ಪಂದ ಮಾಡಿಕೊಂಡನು. ದೂರದೃಶಿಯಾದ ತೈಲಪದೇವನು ಶಾಂತಿವರ್ಮನ ಅಪರಾಧಗಳನ್ನು ಕ್ಷಮಿಸಿದನು. ಶಾಂತಿವರ್ಮನು ತೈಲಪದೇವನ ಸಾಮಂತನಾಗಿರಲಿಕ್ಕೆ ಒಡಂಬಟ್ಟು ಹೇರಳವಾದ ಕಪ್ಪುಕಾಣಿಕೆಗಳನ್ನೊಪ್ಪಿಸಿದನು. ಮಾರಸಿಂಹನಿಗೆ ಎಂದೂ ಸಹಾಯ ಮಾಡಕೂಡದೆಂದು ತೈಲಪದೇವನು ಅವನಿಂದ ವಚನ ತೆಗೆದುಕೊಂಡನು ಅಂದಿನಿಂದ ಸವದತ್ತಿಯ ರಟ್ಟರು ಚಾಲುಕ್ಯರ ಸಾಮಂತರಾದರು. | ‡ ಗಂಗ ರಟ್ಟಮನೆತನಗಳೆಂಬ

† ಶಾಂತಿವರ್ಮನು ತಾನು ತ್ಯೆಲಪ ಸಾರ್ವಭೌಮನ ಮಹಾಸಾಮಂತನೆಂದು ೯೮೦ನೇ ಇಸವಿ ಡಿಶಂಬರ ತಿಂಗಳದ ತನ್ನ ಸವದತ್ತಿಯ ಶಿಲಾಲೇಖದಲ್ಲಿ ಬರೆಯಿಸಿದ್ದಾನೆ,

‡ ಇತಿ.......ಯಸ್ಯ ಅರಿ ರಾಷ್ಟ್ರಕೂಟ ಕುಲಸಂಬಂಧಾ| ಪ್ರಭೌ ಜಾರ್ಜಿತ್ವಾ ಚರಣಾ ಇವ ಪ್ರಚಲಿತೌ ಸಾಕ್ಷಾತ್ಕಲೇಃಕ್ರಾಮತಃ || ಕ್ರೂರೌಬದ್ಧ ಶರೀರಕೌಗು

ಇತಿರುಜನ ದ್ರೋಹ ಪ್ರರೋಹಾ ವಿಡಕ್ಕೊಲಾ ಖಂಡಿತ ರಾಷ್ಟ್ರ| ಕೂಟಕ ಕುಲ ಶ್ರೀ ವಲ್ಲಿ ಜಾತಾಂಕುರೌ ಲಗ್ನೌ ಯೇನ| ಸುಖೇನ ಕರ್ಕರ ರಣಸ್ತಂಭೌ ರಣಪ್ರಾಂಗಣೇ || ಇತ್ಥಂ

(ದಾವಣಗೇರಿಯ ಶಾಸನ)

ಎರಡು ರಾಷ್ಟ್ರಕೂಟರ ರಣಸ್ತಂಭಗಳನ್ನು ಬೇರೆ ಬೇರೆಯಾಗಿ ತುಂಡರಿಸಿ, ಅಂದರೆ ಮಾರಸಿಂಹನನ್ನು ರಣಾಂಗಣದಿಂದ ಓಡಿಸಿ, ರಟ್ಟಸಾಮಂತನಾದ ಶಾಂತಿವರ್ಮನನ್ನು ಶರಣು ಬರಮಾಡಿಕೊಂಡು, ತೈಲಪದೇವನು ತನ್ನ ಪೂರ್ವಜರ ಸಾಮ್ರಾಜ್ಯವನ್ನು ದೊರಕಿಸಿದನು.

ಈ ಗೆಲವಿನಿಂದ ತನಗೆ ಸಾಮ್ರಾಜ್ಯದ ಒಡೆತನವು ಬಂತೆಂದು ತೈಲಪನು ಒಮ್ಮೆಲೆ ಸಿಂಹಾಸನಾರೋಹಣ ಮಾಡಲಿಲ್ಲ. ಅವನು ಕರ್ನಾಟಕ ಸಾಮ್ರಾಜ್ಯದೊಳಗಿನ ಮಂಡಲೇಶ್ವರರ ಹಾಗು ಪ್ರಜಾಜನರ ಮನಸ್ಸಿನ ಒಲವನ್ನು ತಿಳಿದುಕೊಳ್ಳಬೇಕೆಂದು ಯೋಚಿಸಿದನು. ಕರ್ನಾಟಕ ಸಾಮ್ರಾಜ್ಯವು ನ್ಯಾಯದಿಂದ ತನ್ನ ಪೂರ್ವಜರದೆಂತಲೂ, ರಾಷ್ಟ್ರಕೂಟರು ಕುಟಿಲ ಮಾರ್ಗದಿಂದ ಅದನ್ನು ಅಪಹರಿಸಿದ್ದರೆಂತಲೂ, ರಕ್ತಸಂಬಂಧದಿಂದಲಾದರೂ ತಾನು ರಾಷ್ಟ್ರಕೂಟರ ಪಟ್ಟಕ್ಕೆ ಸರಿಯಾದ ಬಾಧ್ಯಸ್ಥನೆಂತಲೂ ಪ್ರಕಟನಾ ಪತ್ರಿಕೆಗಳನ್ನು ಬರೆಯಿಸಿ, ಸಾಮ್ರಾಜ್ಯದೊಳಗಿನ ಎಲ್ಲ ಮಹಾ ಮಂಡಲೇಶ್ವರ, ಮಂಡಲೇಶ್ವರ, ಸಾಮಂತ, ಸಂಸ್ಥಾನಿಕ, ನಾಡಗವುಡ ಇವರಿಗೆ ಕಳುಹಿದನು. ತಾನು ರಾಷ್ಟ್ರಕೂಟ ಅರಸುಮಗಳಾದ ಜಾಕಲದೇವಿಯನ್ನು ಮದುವೆ ಮಾಡಿಕೊಂಡಿದ್ದರಿಂದಲೂ, ಕೊಟ್ಟಿಗ-ಕಕ್ಕಲರಿಗೆ ಗಂಡುಮಕ್ಕಳಾಗಲಿ ಬೇರೆ ಸಮೀಪದ ಬಾಧ್ಯಸ್ಥರಾಗಲಿ ಇಲ್ಲದ್ದರಿಂದಲೂ, ತಾನೇ ರಾಷ್ಟ್ರಕೂಟ ಸಿಂಹಾಸನಕ್ಕೆ ಸರಿಯಾದ ಬಾಧ್ಯಸ್ಥನೆಂದು ತೈಲಪದೇವನು ತಿಳಿದಿದ್ದನು.

ತೈಲಪದೇವನ ದೈವಬಲವು ಒಳಿತಾಗಿದ್ದುದರಿಂದ ಕರ್ನಾಟಕ ಸಾಮ್ರಾಜ್ಯದೊಳಗಿನ ಬಹು ಜನರು ಅವನ ಪಕ್ಷವನ್ನು ವಹಿಸಿದರು. ಚಾಲುಕ್ಯ ಕುಲತಿಲಕನಾದ ತೈಲಪದೇವನಿಂದ ಕರ್ನಾಟಕ ಸಾಮ್ರಾಜ್ಯದ ಗೌರವವು ಅಭಿವೃದ್ಧಿಹೊಂದುವದೆಂದು ಬಗೆದು, ಅವರು ಸಾಮ್ರಾಜ್ಯ ಸಿಂಹಾಸನಾರೋಹಣ ಮಾಡುವದಕ್ಕಾಗಿ ಸಂತೋಷದಿಂದ ಒಪ್ಪಿಗೆಯನ್ನಿತ್ತರು. ಬಹು ಜನರು ತನಗೆ ಅನುಕೂಲರಾದ್ದರಿಂದ ತೈಲಪದೇವನು ಆನಂದಬಟ್ಟನು. ಅವನು ಸುಮುಹೂರ್ತದಲ್ಲಿ ಪಟ್ಟಬಂಧೋತ್ಸವವನ್ನು ನೆರವೇರಿಸಿ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ, ಶ್ರೀ ಪೃಥ್ವೀವಲ್ಲಭ, ಸಮಸ್ತಭುವನಾಶ್ರಯ, ಆಹವಮಲ್ಲ, ಸತ್ಯಾಶ್ರಯ ಕುಲತಿಲಕ, ಚಾಲುಕ್ಯಾಭರಣ, ಭುಜಬಲ ಚಕ್ರವರ್ತಿ ಎಂಬ ಬಿರುದುಗಳನ್ನು ಧರಿಸಿದನು. ಎರಡು ಶತಕಗಳ ವರೆಗೆ ಸಾಮ್ರಾಜ್ಯವನ್ನು ಕಳೆದುಕೊಂಡು ಅಜ್ಞಾತವಾಸದಲ್ಲಿದ್ದ ಚಾಲುಕ್ಯರಿಗೆ ಮತ್ತೆ ಸಾಮ್ರಾಜ್ಯಸಿಂಹಾಸನವು ದೊರೆತದ್ದು ದೈವಬಲದಿಂದಲ್ಲವೆ?



## ನೀನು ಅಣ್ಣನಲ್ಲ ನಾನು ತಂಗಿಯಲ್ಲ!

ಕುಸುಮ ಕುಮಾರಿಯು ಮುಂಜರಾಜನಲ್ಲಿ ಪ್ರಣಯವುಳ್ಳವಳಾದ ಸಂಗತಿಯು ಅವಳ ದಾಸಿಯಾದ ಪ್ರಭಾವತಿಯು ಹಾಗು ಬೌದ್ಧ ತಾಪಸಿಯಾದ ಸರ್ವಾರ್ಥ ಸಿದ್ಧಿಯ ಮುಖಾಂತರವಾಗಿ ರಾಜಮಾತೆಯಾದ ಬೊಂಥಾದೇವಿಗೂ ರಾಜಪತ್ನಿ ಯಾದ ಜಾಕಲದೇವಿಗೂ ತಿಳಿದಿತ್ತು. ಬೊಂಥಾದೇವಿಗೆ ಕುಸುಮ ಕುಮಾರಿಯು ವಾತ್ಸಲ್ಯದ ಪುತ್ರಿಯು. ಏಕಮಾತ್ರ ಮಗಳ ಇಚ್ಛೆಯನ್ನು ಮುರಿಯುವದೆಂದರೆ ಅವಳಿಗೆ ಜೀವದ ಸುತ್ತು ಬಂದಂತಾಗುತ್ತಿತ್ತು. ಪ್ರತ್ಯಕ್ಷವಾಗಿ ಕಾಣದೆ, ಕೇವಲ ಭಾವಚಿತ್ರಪ್ರಣಯ ಪತ್ರಿಕೆಗಳನ್ನವಲಂಬಿಸಿ ತನ್ನ ಮನಸ್ಸನ್ನು ಪರವಶ ಮಾಡಿದ ಕುಸುಮ ಕುಮಾರಿಯ ಸ್ವಭಾವವು ಅವಳಿಗೆ ಸರಿಯಾಗಿ ತೋರಲಿಲ್ಲ. ಅವಳು ಅದೂರ ದೃಷ್ಟಿಯವಳಿರುವಳೆಂದು ಬೊಂಥಾದೇವಿಯು ಭಾವಿಸಿದಳು ಮುಂಜ ರಾಜನು ಶೂರನೂ ಸಾಹಸಿಯೂ ಎಂಬದನ್ನು ಅವಳು ಕೇಳಿ ಅರಿತಿದ್ದಳು; ಆದರೆ ಅವನು ಕರ್ನಾಟಕ ಸಾಮ್ರಾಜ್ಯದ ಅಸ್ಥಿವೈರಿಯಾಗಿದ್ದನು; ತನ್ನ ಪುತ್ರನಾದ ತೈಲಪ ದೇವನ ಕಡುಹಗೆಯಾಗಿದ್ದನು. ಶತ್ರುವಿಗೆ ತನ್ನ ಒಡಹುಟ್ಟಿದವಳನ್ನು ಕೊಡಲಿಕ್ಕೆ ತೈಲಪದೇವನು ಸಿದ್ಧನಾಗಲಿಕ್ಕಿಲ್ಲವೆಂಬ ಸಂಶಯವು ಬೊಂಥಾದೇವಿಗೆ ಬರತೊಡ ಗಿತ್ತು. ಮುಂಜರಾಜನಾದರೂ ಕುಸುಮಕುಮಾರಿಯನ್ನು ಕಣ್ಣಾರೆ ಕಂಡಿದ್ದಿಲ್ಲ; ಅವನು ಅವಳ ಗುಣರೂಪಗಳ ಖ್ಯಾತಿಯನ್ನು ಕರ್ಣೋಪಕರ್ಣವಾಗಿ ಕೇಳಿದ್ದನು. ಗುಣರೂಪಗಳ ಪ್ರತ್ಯಕ್ಷ ಪರಿಚಯವಿಲ್ಲದವರ ಪ್ರೇಮವು ಸ್ಥಿರ್ಯಾಜವಿರಲಾರ ದೆಂದು ರಾಜಮಾತೆಯ ಗ್ರಹಿಕೆಯಾಗಿತ್ತು. ಪ್ರತಿಯೊಂದು ವಿಷಯಗಳ ಬಗ್ಗೆ ಆಲೋಚಿಸಿದರೂ ಅವಳಿಗೆ ಪ್ರತಿಕೂಲ ಸ್ವರೂಪವೇ ದೃಗ್ಗೋಚರವಾಗಲಾರಂಭಿ ಸಿತ್ತು. ಹೇಗಾದರೂ ಮಾಡಿ ಮಗಳ ಮನಸ್ಸನ್ನು ತಿರುಗಿಸಬೇಕೆಂದು ನಿಶ್ಚಯಿಸಿ ಕೊಂಡು, ಅವಳು ಕುಸುಮಕುಮಾರಿಯನ್ನು ತನ್ನ ಮಂದಿರಕ್ಕೆ ಕರೆಯಿಸಿಕೊಂ ಡಳು. ಕುಸುಮಕುಮಾರಿಯು ತಾಯಿಯ ಬಳಿಗೆ ಬಂದು, ಅವಳ ಮಂಚದ ಮೇಲೆ ಕುಳಿತುಕೊಂಡಳು. ಅಷ್ಟರಲ್ಲಿ ರಾಜಪತ್ನಿಯಾದ ಜಾಕಲದೇವಿಯೂ ಆಗಮಿಸಿದಳು. ಪರಕ್ಷಣದಲ್ಲಿ ಕುಸುಮಕುಮಾರಿಯ ದಾಸಿಯಾದ ಪ್ರಭಾವತಿಯೂ ಬಂದಳು. ಅನಂತರದಲ್ಲಿ ಬೊಂಥಾದೇವಿಯು ಕುಸುಮಕುಮಾರಿಯನ್ನು ಕುರಿತು—

"ಕುಸುಮ, ಈಗ ನೀನು ಎಷ್ಟಾದರೂ ಪ್ರೌಢದಶೆಯನ್ನು ಹೊಂದಿರುವೆ; ಹಾಗು ಸುವಿದ್ಯಾಸಂಪನ್ನಳಿರುವೆ. ಚಿಕ್ಕವರು ಹಿರಿಯರ ಆಜ್ಞಾಪಾಶಪರಿವೃತ ರಿರಬೇಕೆಂಬ ಮಾತನ್ನು ಸದ್ಗುಣಮಂಡಿತಳಾದ ನಿನಗೆ ಹೇಳಲಿಕ್ಕೆ ಬೇಡ. ಅದೂರ ದೃಷ್ಟಿಯಿಂದುಂಟಾದ ಅಯೋಗ್ಯವಾದ ಮನೋಲಹರಿಗಳಿಗೆ ಅಡ್ಡಿಮಾಡುವ ಮನ

ಶ್ಯಕ್ತಿಯಾದರೂ ನಿನ್ನಲ್ಲಿರುವದು. ಯೋಗ್ಯವಿರಲಿ, ಅಯೋಗ್ಯವಿರಲಿ; ಹಿರಿಯರು ಹೇಳಿದಂತೆ ವರ್ತಿಸುವದು ಪುತ್ರಿಯಾದ ನಿನ್ನ ಧರ್ಮವಾಗಿರುವದು."

ಬೊಂಥಾದೇವಿಯ ಪ್ರಾಸ್ತಾವಿಕ ಭಾಷಣದ ಮರ್ಮವು ಕುಸುಮಕುಮಾರಿಗೆ ಹೊಳೆಯಲಿಲ್ಲ. ತನ್ನ ತಾಯಿಯು ಹೀಗೆ ಸಂಧಿಗ್ಧ ಮಾತುಗಳನ್ನಾಡಿದ ಕಾರಣವೇನಿರಬಹುದೆಂದು ಅವಳು ಕೆಲವು ಹೊತ್ತಿನ ವರೆಗೆ ವಿಚಾರಿಸಿದಳು. ಕಡೆಗೆ ಅವಳಿಗೆ ಏನೂ ತಿಳಿಯದಂತಾಯಿತು. ಆಗ ಅವಳು ತನ್ನ ತಾಯಿಯನ್ನು ಕುರಿತು- "ಅವ್ವಾ, ಪೀಠಿಕೆಯು ಯಾವ ವಿಷಯಕ್ಕೆ ಸಂಬಂಧಿಸಿದ್ದೆಂಬದೇ ನನಗೆ ಹೊಳೆಯದಿದ್ದ ಮೇಲೆ ಉತ್ತರವನ್ನೇನು ಕೊಡಲಿ?"

"ರಾಜಪುತ್ರಿಯವರೆ," ಪ್ರಭಾವತಿಯು ಕುಸುಮಕುಮಾರಿಯನ್ನು ಕುರಿತು- "ಪೀಠಿಕೆ ಪ್ರಕರಣಗಳೆರಡೂ ಗೊತ್ತಿದ್ದರೂ ಉತ್ತರವನ್ನು ಕೊಡದಂತಹ ಕೆಲವು ವಿಷಯಗಳು ಇರುವದುಂಟು"

"ಅಂತಹ ವಿಷಯಗಳು ಎಷ್ಟೋ ಇರುವವು. ಒಮ್ಮೊಮ್ಮೆ ಮನಸ್ಸಿಗೆ ಸಂಕೋಚವೆನಿಸುವ ವಿಷಯಗಳನ್ನು ಬೈಲಿಗಿರಿಸಿ, ಮನಸ್ಸಿನ ಇಚ್ಛೆಯನ್ನು ಈಡೇರಿಸಿಕೊಳ್ಳಬೇಕಾದ ಪ್ರಸಂಗವು ಬರುತ್ತಿರುವದುಂಟು"

ತೈಲಪದೇವನ ಪಟ್ಟಮಹಿಷಿಯಾದ ಜಾಕಲದೇವಿಯು ಹೀಗೆ ನುಡಿಯಲು, ರಾಜಮಾತೆಯಾದ ಬೊಂಥಾದೇವಿಯು-"ಅಪ್ರಶಸ್ತವಾದ ವಿಚಾರಗಳನ್ನು ಮನಸ್ಸಿನಲ್ಲಿ ತಂದುಕೊಂಡು, ಅದೂರದೃಷ್ಟಿಯಿಂದ ಮನಬಂದಂತೆ ನಡೆಯತೊಡಗಿದರೆ, ಅವರ ಇಚ್ಛೆಗೆ ವಿರುದ್ಧವಾಗಿ ನಡೆಯುವ ಪ್ರಸಂಗವು ಹಿರಿಯರಾದವರಿಗೆ ಬರುವದು"

ಬೊಂಥಾದೇವಿ ಜಾಕಲದೇವಿ ಪ್ರಭಾವತಿ ಮೊದಲಾದವರು ತಮತಮಗೆ ತಿಳಿದಂತೆ ಮಾತನಾಡತೊಡಗಿದ್ದನ್ನು ನೋಡಿ ಕುಸುಮಕುಮಾರಿಗೆ ಪರಮಾಶ್ಚರ್ಯವಾಯಿತು. ಅವರು ಹೀಗೆ ಮಾತನಾಡತೊಡಗಿದ ಕಾರಣವೇನಿರುವದೆಂದು ಅವಳು ವಿಚಾರಮಾಡತೊಡಗಿದಳು. ಅವರ ಮಾತುಗಳ ರಹಸ್ಯವೇನಿರುವದೆಂಬದನ್ನು ತಿಳಿದುಕೊಳ್ಳಬೇಕೆಂಬ ಆತುರತೆಯು ಅವಳ ಮನಸ್ಸಿನಲ್ಲಿ ಉದಯಿಸಿ ಕ್ಷಣಕ್ಷಣಕ್ಕೆ ಬೆಳೆಯತೊಡಗಿತು. ಆಗ ಅವಳು ತನ್ನ ತಾಯಿಯನ್ನು ಕುರಿತು—

"ಅವ್ವಾ, ನಿಮ್ಮ ಮಾತಿಗೆ ನಾನು ಏನು ಉತ್ತರ ಕೊಡಲಿ?"

"ಅದೇಕೆ? ಉತ್ತರವೀಯಲಿಕ್ಕೆ ಭಾಷೆಯು ಬರುತ್ತಿರುವದಿಲ್ಲವೇನು?"

"ಅಸ್ಪಷ್ಟವಾದ ಮಾತುಗಳಿಗೆ ಉತ್ತರವೀಯುವಷ್ಟು ಜಾಣ್ಮೆಯು ನನ್ನಲ್ಲಿಲ್ಲ."

"ಮಾತುಗಳು ಸ್ಪಷ್ಟವಾದವುಗಳಿರುವವು." ಎಂದು ಜಾಕಲದೇವಿಯು ನುಡಿದು ನಗುತ್ತ—"ಅತ್ತೆಯವರಾಡಿದ ಮಾತುಗಳು ನನಗೂ ಪ್ರಭಾವತಿಗೂ ಕೇಳಿರುವವು. ಇಲ್ಲಿಯೆ ಕುಳಿತ ನಿಮಗೆ ಹೇಗೆ ಕೇಳಲಿಲ್ಲವೋ!"

"ಕೇಳಿದ್ದರೂ ಮರ್ಮವು ತಿಳಿಯಲಿಲ್ಲ."

"ನೀನು ಮರ್ಮಭೇದಕಳಿದ್ದು ನನ್ನ ಮಾತಿನ ಮರ್ಮವನ್ನು ಹೇಗೆ ಅರಿಯು ಲಿಲ್ಲ?"

"ಅವ್ವಾ!"

"ಅದೇಕೆ ಕುಸುಮಕುಮಾರಿ?"

"ನಾನು ಮರ್ಮಭೇದಕಳೆ?"

"ಅಲ್ಲವೆ ಮತ್ತೆ?"

"ಅದು ಹೇಗೆ?"

"ಹಿರಿಯರ ಇಚ್ಛೆಯ ವಿರುದ್ಧವಾಗಿ ಮನಬಂದಂತೆ ನಡೆಯುವ ಮಕ್ಕಳು ಹಿರಿಯರ ಮರ್ಮವನ್ನು ಭೇದಿಸುವರೇ ಸರಿ."

"ಅವ್ವಾ ನನ್ನಿಂದ ಅಂತಹ ಕೆಲಸವೇನು ಘಟಿಸಿತು?"

"ಇಂಥಹರಿಗೇ ಹಗಲುಸುಲಿಗೆಯವರೆನ್ನಬೇಕು!" ಎಂದು ಜಾಕಲದೇವಿಯು ನಗುತ್ತ ನಗುತ್ತ ನುಡಿದು—"ಗುಪ್ತವಾಗಿರಿಸಲಿಕ್ಕೆ ಬಾರದ ವಿಷಯುಗಳನ್ನು ಮುಚ್ಚಿ ಕೊಳ್ಳಲೆತ್ನಿಸುವ ಉದ್ದೇಶವೇನಿರುವದು?"

"ಪ್ರಭಾವತಿ," ಕುಸುಮ ಕುಮಾರಿಯು ತನ್ನ ದಾಸಿಯನ್ನು ಕುರಿತು— "ಇದೇನೆ? ನೀವೆಲ್ಲರು ನನ್ನನ್ನು ತೊಡರಿನಲ್ಲಿ ಹಾಕುವ ಯತ್ನವಿದ್ದಂತೆ ತೋರು ವದು. ನಾನು ನಿಮ್ಮ ವ್ಯೂಹದಲ್ಲಿ ಸಿಲುಕತಕ್ಕವಳಲ್ಲ. ನೀವು ನನ್ನನ್ನು ಗೊಂದಲ ದಲ್ಲಿ ಕೆಡಹಬೇಕೆಂದು ಹೀಗೆ ಭೂಮಿಕೆಯನ್ನು ರಚಿಸಿಕೊಂಡಿರುವಿರಿ. ನಿಮ್ಮ ಮನೋದಯವನ್ನು ತಿಳಿಯದಷ್ಟು ನಾನು ಹೆಡ್ಡಳಲ್ಲ."

"ಕುಸುಮಕುಮಾರಿದೇವಿ," ಜಾಕಲದೇವಿಯು—"ನೀವು ಸಾಮರ್ಥ್ಯವುಳ್ಳ ವರಿರುವಿರಿ; ಬುದ್ಧಿಶಾಲಿಗಳಿರುವಿರಿ. ಅಂತೆಯೇ ಸ್ವಾವಲಂಬನ ತತ್ವವನ್ನವಲಂಬಿ ಸಿರುವಿರಿ"

"ಮತ್ತೆ ಅದೇ ಪ್ರಸಂಗಕ್ಕೆ ಪ್ರಾರಂಭವಾಯಿತು ಅತ್ತಿಗೆಯವರೇ, ನೀವೂ ಅವ್ವನೂ ವಿನೋದಕ್ಕೆ ಪ್ರಾರಂಭಿಸಿರುವಿರಿ. ನಿಮಗೆ ಇಂದು ಹೊತ್ತು ಹೋಗದ್ದ ಕ್ಕಾಗಿ ಹೀಗೆ ವಿನೋದ ಪ್ರಸಂಗವನ್ನು ಉಪಸ್ಥಿತಗೊಳಿಸಿದಂತೆ ತೋರುತ್ತದೆ." ಎಂದು ಕುಸುಮಕುಮಾರಿಯು ನುಡಿದು, ಪ್ರಭಾವತಿಯನ್ನು ಕುರಿತು:—"ಪ್ರಭೆ, ನೀನಾದರೂ ನಿಜಸ್ಥಿತಿಯೇನೆಂಬದನ್ನು ಹೇಳಬಾರದೇನೆ?"

"ದೇವಿ, ನಾನೇನು ಹೇಳಲಿ? ನೀವು ಬಂದ ಬಳಿಕ ನಾನು ಬಂದಿರುವೆನು. ನಾನು ಯಾವ ವಿಷಯುವನ್ನೂ ಅರಿಯೆನು. ನೀವು ಹಿರಿಯರ ಕಿವಿಯ ಮೇಲೆ ಹಾಕದೆ ಯಾವದೋ ಒಂದು ಕಾರ್ಯವನ್ನು ಪ್ರಾರಂಭಿಸಿರುವಿರೆಂಬದು ಸದ್ಯದ ಪ್ರಸಂಗದಿಂದ ವ್ಯಕ್ತವಾಗುತ್ತದೆ ನೀವು ಮುಂಜಮಹಾರಾಜರಲ್ಲಿ ಪ್ರಣಯವುಳ್ಳ ವರಾಗಿರುವಿರಷ್ಟೆ? ಈ ವಿಷಯುವು ರಾಜ್ಞಿಯವರ ಹಾಗು ಮಹಾರಾಣಿಯರ ಕಿವಿಗೆ ಬಿದ್ದಿರಬಹುದು."

ಪ್ರಭಾವತಿಯ ಮಾತುಗಳನ್ನು ಕೇಳಿ ಕುಸುಮಕುಮಾರಿಯು ಮುಖವನ್ನು ಕೆಳಗೆ ಮಾಡಿದಳು ಲಜ್ಜಾ ಭಯಗಳಿಂದ ಅವಳ ಮೋರೆಯು ಕೆಂಪಡರಿತು. ಮಾತನಾಡಬೇಕೆಂದರೆ ಮುಖದಿಂದ ಅಕ್ಷರಗಳೆ ಹೊರಡದಾದವು. ಆಗ ಬೊಂಥಾದೇವಿಯು—"ಕುಸುಮಕುಮಾರಿ, ಕರ್ನಾಟಕ ಸಾಮ್ರಾಜ್ಯದ ಅಸ್ಥಿವೈರಿಯಾದ ಮುಂಜನಲ್ಲಿ ಪ್ರೀತಿಯನ್ನಿಟ್ಟದ್ದು ಅಯೋಗ್ಯವಲ್ಲವೆ? ಅಪಾತ್ರದಲ್ಲಿ ಪ್ರಣಯದಾನ ಮಾಡಿದರೆ ಹಿಂದಿನಿಂದ ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾದೀತೆಂಬ ವಿಚಾರವನ್ನು ನೀನು ಮಾಡಲಿಲ್ಲವೆಂಬಂತೆ ತೋರುತ್ತದೆ. ತೈಲಪನು ತನ್ನ ಹಗೆಯೊಡನೆ ಶರೀರ ಸಂಬಂಧ ಮಾಡಬಹುದೆ? ಪ್ರಬುದ್ಧಳಾದ ನೀನು ಸಾರಾಸಾರ ವಿಚಾರ ಮಾಡದೆ ನಿನ್ನ ಹೃದಯದಲ್ಲಿ ಕಂಡಕಂಡವರಿಗೆ ಸ್ಥಳವೀಯಬಹುದೆ? ಕುಲೀನ ಲಲನೆಯರು ಚನ್ನಾಗಿ ವಿಚಾರ ಮಾಡಿ ಪ್ರೇಮದಾನ ಮಾಡುವದು ಯೋಗ್ಯವು ನಿನ್ನ ವಿಚಾರಕ್ಕೆ ತೈಲಪನು ವಿರೋಧವುಳ್ಳವನಾಗಿರುವನು. ನೀನು ನಿನ್ನ ಸದ್ಯದ ಆಲೋಚಯನ್ನು ಮನಸ್ಸಿನೊಳಗಿಂದ ತೆಗೆದುಹಾಕು."

ಬೊಂಥಾದೇವಿಯ ಈ ಮಾತುಗಳಿಂದ ಕುಸುಮಕುಮಾರಿಯು ಹೃದಯಕ್ಕೆ ಶಲ್ಯಪ್ರಹಾರವಾದಂತಾಯಿತು. ಉತ್ತರವೀಯಲಿಕ್ಕೆ ಬುದ್ಧಿ ಸಾಲದಂತಾದ ಕುಸುಮಕುಮಾರಿಯು ಮ್ಲಾನವದನೆಯಾಗಿ ಸುಮ್ಮನೆ ಕುಳಿತಳು. ಆಗ ಅವಳನ್ನು ಕುರಿತು ಜಾಕಲದೇವಿಯು--"ಕುಸುಮಕುಮಾರಿದೇವಿ, ಅತ್ತೆಯವರ ಮಾತುಗಳು ನಿಮ್ಮ ಮನಸ್ಸಿಗೆ ನೋವನ್ನುಂಟು ಮಾಡಿದಂತೆ ತೋರುವದು. ಪ್ರಣಯಿಗಳಿಗೆ ಆಶಾಭಂಗವಾದರೆ ಈ ಸ್ಥಿತಿಯು ಒದಗುವದು ನಿಜವು. ಆದರೂ ಮನೋನಿಗ್ರಹ ಮಾಡಿಕೊಳ್ಳಬೇಕು."

"ಕುಸುಮಕುಮಾರಿ ದೇವಿಯವರು ಮುಂಚಿತವಾಗಿಯೇ ಎಲ್ಲ ಬಗೆಯ ವಿಚಾರ ಮಾಡಿ ಪ್ರೇಮದಾನ ಮಾಡಬೇಕಾಗಿತ್ತು. ಮುಂಜರಾಜರು ದೇವಿಯವರಿಗೆ ಅನುರೂಪರಿರುವದೇನೋ ನಿಜವು; ಆದರೆ ಅವರು ನಮ್ಮ ಮಹಾರಾಜರ ವೈರಿಗಳಿರುವರು ವೈರಿಗಳೊಡನೆ ಆಪ್ತತ್ವ ಬಳೆಯಿಸಲಿಕ್ಕೆ ಮಹಾರಾಜರು ಸಿದ್ಧರಿಲ್ಲವೆಂಬಂತೆ ತೋರುತ್ತದೆ" ಎಂದು ಪ್ರಭಾವತಿಯು ನಿರ್ವಿಕಾರಮನಸ್ಕಳಾಗಿ ನುಡಿದಳು.

"ಅಂತೆಯೆ ಇವಳ ಮನಸ್ಸನ್ನು ತಿರಗಿಸುವ ಪ್ರಸಂಗವೊದಗಿರುವದು" ಎಂದು ಬೊಂಥಾದೇವಿಯು ನುಡಿದಳು.

ಇಷ್ಟು ವೇಳೆಯ ವರೆಗೆ ಲಜ್ಜಾಭಯಗಳಿಂದ ತಟಸ್ಥಳಾಗಿ ಕುಳಿತ ಕುಸುಮಕುಮಾರಿಗೆ ಮಾತನಾಡದಿದ್ದರೆ ಗತ್ಯಂತರವಿಲ್ಲದಾಯಿತು ಆಗ ಅವಳು ಸ್ಪಷ್ಟವಾದ ವಾಣಿಯಿಂದ—"ಅವ್ವಾ, ನಾನು ಅತ್ಯಂತ ನೀಚಕಾರ್ಯ ಮಾಡಿರುವೆನೆಂದು ನಿಮಗೆ ಕಾಣತೊಡಗಿರುವದೇನು? ಪ್ರಬುದ್ಧ ವಯಸ್ಕಳು ತನಗೆ ಬೇಕಾದ ವರನಲ್ಲಿ ಪ್ರೀತಿಯನ್ನಿಡಲಿಕ್ಕೆ ಸ್ವತಂತ್ರಳಾಗಿರುವಳು. ಮುಂಜಮಹಾರಾಜರು ಸಾಮಾನ್ಯರಿಲ್ಲ. ನಾನು ಕುಪಾತ್ರದಲ್ಲಿ ಪ್ರಣಯದಾನ ಮಾಡಿಲ್ಲ. ಅವರು ತೈಲಪದೇವ

ರಾಜರಿಗೆ ವೈರಿಗಳಾಗಿರುವರೆಂಬ ಮಾತು ನನಗೆ ಗೊತ್ತಿದೆ. ಕರ್ನಾಟಕ ಸಾಮ್ರಾಜ್ಯಕ್ಕಾದರೂ ಅವರು ಕಡುಹಗೆಗಳಾಗಿರುವರು. ಈ ವೈರಭಾವನೆಯು ನನ್ನ ಪ್ರಣಯಲಹರಿಗೆ ಅಡ್ಡಾಗುವ ಕಾರಣವೇನು?"

"ಕುಸುಮಕುಮಾರಿದೇವಿ," ಜಾಕಲದೇವಿಯು ಅಭಿಮಾನದಿಂದ—"ವೈರಿಯೊಡನೆ ಆಪ್ತಸಂಬಂಧವನ್ನು ಬಳಿಯಿಸಹೋದರೆ ಹೇಡಿಗಳೆಂಬ ದೋಷಕ್ಕೆ ಗುರಿಯಾಗಬೇಕಾಗುವದು. ಮಹಾರಾಜರು ನಿಮ್ಮ ಇಚ್ಛೆಯಂತೆ ಮಹತ್ವಾಕಾಂಕ್ಷಿಯಾದ ಮುಂಜರಾಜನೆದುರಿಗೆ ತಲೆಬಾಗಲಿಕ್ಕೆ ಸಿದ್ಧರಿರಲಾರರೆಂದು ನನ್ನ ಗ್ರಹಿಕೆ."

"ಅತ್ತಿಗೆಯವರೆ, ಮುಂಜಮಹಾರಾಜರು ಈಗ ವೈರಿಗಳಾಗಿದ್ದರೆ, ಆಪ್ತಸಂಬಂಧವಾದ ಮೇಲೆ ಆ ವೈರವು ನಿಸ್ಸಂದೇಹವಾಗಿ ನಾಶವಾಗುವದು."

"ಕುಸುಮ, ನಿನ್ನ ಮಾತುಗಳು ನಿರಾಧಾರವಾದವುಗಳಿರುವವು" ಬೊಂಥಾದೇವಿಯು ತನಗೆ ತಿಳಿದ ಮಟ್ಟಿಗೆ ರಾಜನೀತಿಯನ್ನು ಹೇಳತೊಡಗಿದಳು. ಚಾಲುಕ್ಯ ಸಾಮ್ರಾಜ್ಯವು ರಾಷ್ಟ್ರಕೂಟರ ವಶದಲ್ಲಿ ಹೋಗಬೇಕಾದರೆ ಕೀರ್ತಿವರ್ಮ ದಂತಿದುರ್ಗರಲ್ಲಿಯ ಆಪ್ತತ್ವವೇ ಕಾರಣವು. ರಾಷ್ಟ್ರಕೂಟ ರಾಜ್ಯವು ನಿನ್ನ ಅಣ್ಣನಿಗೆ ಸುಲಭವಾಗಿ ವಶವಾಗಲಿಕ್ಕಾದರೂ ಕಕ್ಕಲದೇವನು ನಿನ್ನ ಅಣ್ಣನಿಗೆ ತನ್ನ ಮಗಮಗಳಾದ ಈ ಜಾಕಲದೇವಿಯನ್ನಿತ್ತದ್ದೇ ಕಾರಣವಾಗಿರುವದು. ಅದರಂತೆ ನೀನು ಮುಂಜರಾಜನನ್ನು ವರಿಸಿದರೆ ಕರ್ನಾಟಕ ಸಾಮ್ರಾಜ್ಯವು ದುರಾಕಾಂಕ್ಷಿಯಾದ ಮುಂಜರಾಜನ ಭಕ್ಷ್ಯಸ್ಥಾನಕ್ಕೆ ಬೀಳಬಹುದೆಂಬ ಭಯವಿದೆ"

"ಅತ್ತೆಯವರ ಅಭಿಪ್ರಾಯವು ಯಥಾಯೋಗ್ಯವಾದದ್ದಿರುವದು." ಎಂದು ಜಾಕಲದೇವಿಯು ನುಡಿದಳು. ಆಗ ಕುಸುಮಕುಮಾರಿಯು ಸಿಟ್ಟಿನಿಂದ:—"ಅವ್ವಾ, ಅತ್ತಿಗೆಯವರೆ, ಈ ಸಂಬಂಧದಿಂದ ಕರ್ನಾಟಕ ಸಾಮ್ರಾಜ್ಯವೇ ಮಾಳವೆಯರ ವಶವಾಗುವದೆಂದು ಹೇಗೆ ಹೇಳುವಿರಿ? ಒಂದುವೇಳೆ ಮಾಳವೆಯರ ರಾಜ್ಯವು ಕರ್ನಾಟಕ ಸಾಮ್ರಾಜ್ಯ ಛತ್ರದಲ್ಲಿ ಬರಬಹುದು. ನನ್ನ ಅಣ್ಣಂದಿರು ಕೊಟ್ಟಿಗ ಕಕ್ಕಲದೇವ ರಾಜರಂತೆ ಹೇಡಿಗಳಾಗಿಲ್ಲ. ಅವರು ಮುಂಜಮಹಾರಾಜರನ್ನು ಪರಾಭವಗೊಳಿಸಿದ ಸಂಗತಿಯು ಯಾರಿಗೇನು ಅರಿಯದಿರುವದೆ?"

"ಕುಸುಮಕುಮಾರಿದೇವಿ, ನೀವು ನನ್ನ ತಂದೆಯವರನ್ನೂ ಅಜ್ಜಂದಿರನ್ನೂ ಹೇಡಿಗಳೆಂದು ದೂಷಿಸಬೇಡಿರಿ. ಪ್ರತಿಕೂಲ ಕಾಲಪರಿಸ್ಥಿತಿಯ ಮೂಲಕ ಅವರು ಅಪಯಶಸ್ಕರಾದರು. ಗತಗೋಷ್ಠಿಯನ್ನು ತೆಗೆದುಕೊಂಡು ಈಗ ಮಾಡುವದೇನು? ಮುಂಜರಾಜನು ಕರ್ನಾಟಕ ಸಾಮ್ರಾಜ್ಯದ ಕಡುತರ ಹಗೆಯಾಗಿರುವದರಿಂದ ಅವನಿಗೆ ನಿಮ್ಮನ್ನು ಕೊಡಬಾರದೆಂದು ಮಹಾರಾಜರ ಅಭಿಪ್ರಾಯವಿರುವದು."

ಜಾಕಲದೇವಿಯು ಹೀಗೆ ನುಡಿದ ಕೂಡಲೆ ಕುಸುಮಕುಮಾರಿಯು ಸಿಟ್ಟಿನಿಂದ—"ಅಣ್ಣಂದಿರ ಅಭಿಪ್ರಾಯಕ್ಕೆ ನೀವೆಲ್ಲರು ಅನುಮೋದನ ಕೊಟ್ಟಂತೆ ತೋರುವದು."

"ಕುಸುಮಕುಮಾರಿ" ಬೊಂಥಾದೇವಿಯು ಮಗಳನ್ನು ಸಮಾಧಾನ ಪಡಿಸ ಬೇಕೆಂದು—"ನೀನು ಸುಮ್ಮಸುಮ್ಮನೆ ಎರಡನೆಯವರ ಮೇಲೆ ಸಿಟ್ಟಾಗಬೇಡ. ಯಾರೇನು ನಿನ್ನ ಅಹಿತ ಚಿಂತನೆ ಮಾಡಬೇಕೆಂದು ನಿಶ್ಚಯಿಸಿಕೊಂಡಿಲ್ಲ. ನಿನ್ನ ಹಿತಕ್ಕಾಗಿಯೆ ನಾವೆಲ್ಲರು ಪ್ರಯತ್ನಿಸುತ್ತಿರುವೆವು. ಯುದ್ಧಭೂಮಿಯಲ್ಲಿ ಪರಾ ಜಿತನಾಗಿ ಪಲಾಯನ ಮಾಡಿದ ವೈರಿಗೆ ತನ್ನ ಭಗಿನಿಯನ್ನು ಕೊಡಹೋಗುವದು ತೈಲಪನಂತಹ ಲಬ್ಧಪ್ರತಿಷ್ಠನಿಗೆ ಉಚಿತವೆನಿಸುವದೆ? ನೀನು ಚನ್ನಾಗಿ ವಿಚಾರಿಸಿ ನೋಡು. ನಿನ್ನ ಅಣ್ಣನಾಗಲಿ, ನಾನಾಗಲಿ, ಈ ಜಾಕಲದೇವಿಯಾಗಲಿ ನಿನ್ನನ್ನು ನಿರಾಶಗೊಳಿಸಬೇಕೆಂದು ಸಂಕಲ್ಪ ಮಾಡಿಕೊಂಡಿರುವದಿಲ್ಲ. ಮುಂಜರಾಜನಿ ಗಿಂತಲೂ ಶ್ರೇಷ್ಠನಾದ ವರನನ್ನು ನೋಡಿ, ನಿನ್ನ ವಿವಾಹ ಕಾರ್ಯವನ್ನು ನೆರ ವೇರಿಸಬೇಕೆಂದು ನಿನ್ನ ಅಣ್ಣನು ಯೋಚಿಸಿರುವನು. ಇಂತಹ ಸಂಧಿಯಲ್ಲಿ ನೀನು ಹಟಮಾರಿಯಾಗಿ ಅವನ ಮನಸ್ಸನ್ನು ನೋಯಿಸಬೇಡ. ನೀನು ಮುಂಜರಾಜ ನನ್ನು ಪ್ರತ್ಯಕ್ಷವಾಗಿ ಕಂಡಿಲ್ಲ; ಅವನ ಗುಣಶೀಲಗಳನ್ನಾದರೂ ಅರಿತುಕೊಂಡಿಲ್ಲ. ಹೀಗಿದ್ದರೂ ಮನೋಲಹರಿಗೆ ಸಿಲುಕಿ ಅಪ್ರಶಸ್ತವಾದ ಕೃತಿಯನ್ನು ಮಾಡತೊಡ ಗಿರುವೆ. ಮೋಸಗಾರನಾದ ಮುಂಜನು ನಿನ್ನ ಸಾಧುಭಾವ ಖ್ಯಾತಿಯನ್ನು ಕೇಳಿ ಕೊಂಡು, ನಿನ್ನನ್ನು ವಶಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ತನ್ನ ಜಾಣ್ಮೆಯನ್ನು ಪತ್ರದಲ್ಲಿ ತೋರಿಸಿರುವನು. ನೀನು ಬೆಳ್ಳಗಿದ್ದದ್ದನ್ನು ಹಾಲೆಂದು ನಂಬಿದರೆ ಹಿಂದಿ ನಿಂದ ಪಶ್ಚಾತ್ತಾಪದ ಫಲವನ್ನು ಅನುಭವಿಸಬೇಕಾದೀತು. ನೀನೇನು ಅಪ್ರಬುದ್ಧ ಳಲ್ಲ; ಅಜ್ಞಳಲ್ಲ ಇದಕ್ಕಿಂತ ಹೆಚ್ಚಾಗಿ ನಿನಗೆ ಬೋಧಿಸಬೇಕೆನ್ನುವ ಅವಶ್ಯಕತೆ ಯಿಲ್ಲ. ಕೈಸಾಗದ ಕಾರ್ಯದಲ್ಲಿ ಕೈಹಾಕಿ ದಣಿಯಬೇಡ."

ಬೊಂಥಾದೇವಿಯ ಮಾತುಗಳನ್ನು ಕೇಳಿದ ಕೂಡಲೆ ಕುಸುಮಕುಮಾರಿಯು ಕ್ಲೇಶಗೊಂಡಳು. ತಾಯಿಯೂ, ಅಣ್ಣನೂ, ಅತ್ತಿಗೆಯೂ ತನ್ನ ಹೃದಯದಲ್ಲಿ ನೆಲೆಗೊಂಡ ಪ್ರಣಯಮೂರ್ತಿಯನ್ನು ಕಿತ್ತಿ ಒಗೆಯಲಿಕ್ಕೆ ಟೊಂಕಕಟ್ಟಿರುವರೆಂ ಬಂತೆ ಅವಳಿಗೆ ತೋರಿತು. ಆಗ ಅವಳ ನೇತ್ರಗಳು ಸಜಲವಾದವು. ತನ್ನ ಒಡ ತಿಯ ಮನಸ್ಸ್ಥಿತಿಯು ಪ್ರಭಾವತಿಗೆ ತಿಳಿಯದಿರಲಿಲ್ಲ ಅವಳು ಇಷ್ಟು ವೇಳೆಯ ವರೆಗೆ ಸಂಭಾಷಣವನ್ನು ಕೇಳುತ್ತ ತಟಸ್ಥಳಾಗಿ ಕುಳಿತಿದ್ದಳು. ಬೊಂಥಾದೇವಿಯ ಕಠೋರ ವಾಣಿಯಿಂದ ಕುಸುಮಕುಮಾರಿಯು ದುಃಖಿತಳಾದಳೆಂಬದನ್ನು ಅವ ಳಿಗೆ ಗೊತ್ತಾಯಿತು. ಅವಳು ತನ್ನ ಒಡತಿಯ ಪಕ್ಷವನ್ನು ವಹಿಸಿ:—"ರಾಣಿ ಯವರೆ, ಮಕ್ಕಳ ಇಚ್ಛೆಗೆ ಅಡ್ಡಾಗುವದು ನಿಮ್ಮ ಧರ್ಮವಲ್ಲೆಂದು ನನ್ನ ಅಲ್ಪ ಮತಿಗೆ ತೋರುತ್ತದೆ. ದೇವಿಯವರಿಂದ ಅಂತಹ ಅಪರಾಧವೇನು ಘಟಿಸಿರುವ ದೆಂದು ನೀವೆಲ್ಲರು ಈ ಬಗೆಯಾಗಿ ಚಂಡಿತನ ಹಿಡಿದಿರುವಿರಿ? ಕುಸುಮಕುಮಾರಿ ದೇವಿಯವರು ಮುಂಜರಾಜರನ್ನು ವರಿಸಿದ ಮೇಲೆ ಮೊದಲಿನ ವೈರಭಾವನೆಗಳೆಲ್ಲ

ಅಳಿದು ಹೋಗಿ ಪರಸ್ಪರರಲ್ಲಿ ಸ್ನೇಹವು ನೆಲೆಗೊಳ್ಳುವದು. ಮಹಾರಾಜರು ತಮ್ಮ ಭಗಿನಿಯನ್ನು ಮುಂಜಮಹಾರಾಜರಿಗೆ ಕೊಡಲೊಪ್ಪಿದರೆ ಇದರಲ್ಲಿ ಹೇಡಿತನವೂ ಅಪ್ರತಿಷ್ಠೆಯೂ ಆಗುವದಿಲ್ಲ. ನಾನು ತಮ್ಮ ದಾಸಿಯಾಗಿದ್ದರೂ ಅಲ್ಪ ಬುದ್ಧಿಗೆ ತಿಳಿದಷ್ಟು ವಿಜ್ಞಾಪಿಸಿರುವೆನು. ಒಬ್ಬ ಕೋಮಲ ಹೃದಯದ ಬಾಲಿಕೆಯ ಹೃದಯವನ್ನು ವಿದಗ್ಧಗೊಳಿಸಿದ ಪಾಪಕ್ಕೆ ಪಾಲುಗಾರರಾಗಬಾರದೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು."

"ಪ್ರಭೆ!" ಬೊಂಥಾದೇವಿಯು ತಾರಸ್ವರದಿಂದ—"ನೀನು ನಿನ್ನ ಕರ್ತವ್ಯಕ್ಷೇತ್ರವನ್ನು ಮೀರತೊಡಗಿರುವೆ. ದಾಸಿಯಾದ ನೀನು ಈ ಕುಸುಮಕುಮಾರಿಯ ಸಲಿಗೆಯಿಂದ ಮೈಮೇಲೆ ಬರುತ್ತಿರುವೆ. ನೀನು ನಮಗೆ ಬುದ್ಧಿವಾದ ಹೇಳುವೆಯಾ? ಸಾಧುಭಾವದ ಈ ಕುಸುಮಳ ಮನಸ್ಸನ್ನು ವಿಪರೀತಸ್ಥಿತಿಗೆ ಮುಟ್ಟಿಸಿದವಳು ನೀನೇ! ನೀನು ಆ ಮುಂಜನ ಕೀರ್ತಿವೈಭವಗಳನ್ನು ಇವಳೆದುರಿನಲ್ಲಿ ಮನಸ್ವಿಯಾಗಿ ಬಣ್ಣಿಸಿರುವದರಿಂದಲೇ ಇವಳ ಸ್ಥಿತಿಯು ಹೀಗಾಗಿದೆ. ಬೌದ್ಧತಾಪಸಿಯಾದ ಸರ್ವಾರ್ಥಸಿದ್ಧಿಯು ಸಹ ಇವಳ ಮನಸ್ಸನ್ನು ಕೆಡಿಸಿಬಿಟ್ಟಿರುವಳು. ಮುಂಜನೇನು ಅವಳಿಗೆ ಅಣ್ಣನ ಮಗನಾಗಬೇಕೋ ಹೇಗೋ!"

"ರಾಣಿಯವರೆ, ನಾನು ಅಪರಾಧಿಯಿರಲಿ, ಇಲ್ಲದಿರಲಿ; ನನಗೆ ಏನೆಂದರೂ ನಿರಾತಂಕವಿರುವದು. ಆದರೆ ಸರ್ವಾರ್ಥಸಿದ್ಧಿಯವರನ್ನು ದೂಷಿಸಬೇಡಿರಿ. ಸಂಸಾರಿಕರಾದ ನಮ್ಮ ವಿಷಯಗಳಲ್ಲಿ ಅವರು ಮನಸ್ಸು ಹಾಕುತ್ತಿರುವದಿಲ್ಲ. ನಿಜವಾಗಿ ಹೇಳಬೇಕಾದರೆ, ನಾನು ದೇವಿಯವರಿಗೆ ಮುಂಜರಾಜರನ್ನು ವರಿಸುವ ಬಗ್ಗೆ ಒಂದು ಅಕ್ಷರವನ್ನಾದರೂ ಬೋಧಿಸಿಲ್ಲ. ದಾಸಿಯಾದ ನನಗೆ ಇಲ್ಲದ ಉಸಾಬರಿಯು ಯೇಕೆ ಬೇಕು?"

"ಅವ್ವಾ! ನೀವು ಇದೇನು ಪ್ರಸಂಗವನ್ನು ತೆಗೆದಿರಿ?" ಕುಸುಮಕುಮಾರಿಯು ಸಂತಪ್ತವಾಣಿಯಿಂದ—"ನೀವು ನಿರರ್ಥಕವಾಗಿ ಜನರನ್ನು ದೂಷಿಸತೊಡಗಿರುವಿರಿ. ಅಪರಿಚಿತರಾದ ಮುಂಜರಾಜರ ಕಡೆಗೆ ನನ್ನ ಅಚಲವಾದ ಮನಸ್ಸು ಹರಿಯಬೇಕಾದರೆ ಅವರು ನನ್ನ ಪತಿಗಳಾಗಬೇಕೆಂದು ಈಶ ಸಂಕಲ್ಪವಿರಲಿಕ್ಕೆ ಬೇಕು. ನಿಸರ್ಗಸಿದ್ಧವಾದ ನನ್ನ ಮನೋಧರ್ಮದ ಮೇಲೆ ನೀವು ವರ್ಚಸ್ವವನ್ನು ಪ್ರಸ್ಥಾಪಿಸಲಿಕ್ಕೆ ಅಸಮರ್ಥರಿರುವಿರಿ. ನನ್ನ ಹೃದಯವು ದುರ್ಭೇದ್ಯವಾದದ್ದಿರುವದು. ಅಂಥ ಇಂಥ ಕಾರಣಗಳಿಂದ ಅದು ಅನ್ಯರಿಗೆ ಸ್ಥಳವೀಯತಕ್ಕಂತಹದಿಲ್ಲ. ಒಮ್ಮೆ ಸ್ಥಳವಿತ್ತಮೇಲೆ ಮುಂದೆ ಯಾವ ಕಾರಣಗಳಿಂದಲೂ ಅದು ಕರ್ತವ್ಯಚ್ಯುತಿಹೊಂದತಕ್ಕಂತಹದಲ್ಲ. ಅವ್ವಾ, ನಾನು ಅನ್ಯರ ಪ್ರೇರಣೆಯಿಂದ ಮನಬಂದಂತೆ ನಡೆಯುವದಿಲ್ಲ. ನನ್ನ ಮನಸ್ಸು ಸ್ವತಂತ್ರವಿರುವದು. ನಾನು ಮುಂಜ ಮಹಾರಾಜರನ್ನು ವರಿಸಬೇಕೆಂದು ಸಂಕಲ್ಪ ಮಾಡಿಕೊಂಡಿರುವೆನು. ಯಾವ ಕಾರಣದಿಂದಲೂ ನನ್ನ ಮನಸ್ಸು ತಿರುಗಲಾರದು. ನನ್ನ ಹಟಮಾರಿತನಕ್ಕಾಗಿ ನೀವು ಬೇರೆ

ಯವರ ಮೇಲೆ ದೋಷವೀಯಬೇಡಿರಿ."

"ಕುಸುಮಕುಮಾರಿ, ನೀನು ನನ್ನ ಆಜ್ಞೆಯನ್ನು ಮನ್ನಿಸುವದಿಲ್ಲವೆ? ಹಿರಿಯರ ಆಜ್ಞಾಭಂಗ ಮಾಡುವದು ಯೋಗ್ಯವಲ್ಲ. ತಿಳಿದು ನೋಡು."

'ಹಿರಿಯರಾದವರು ಅನುಚಿತವಾದ ಆಜ್ಞೆಮಾಡುವದಾದರೂ ಯೋಗ್ಯವಲ್ಲ.'

"ನೀನು ಆ ಮುಂಜನನ್ನೇ ವರಿಸುವಿಯಾ?"

"ನಾನು ಖಂಡಿತವಾಗಿ ಮುಂಜಮಹಾರಾಜರನ್ನೇ ವರಿಸುವೆನು."

"ನಿನ್ನ ಈ ಇಚ್ಛೆಯು ಈಡೇರಲಾರದು."

"ಈಡೇರದಿದ್ದರೆ ಅವಿವಾಹಿತಳಾಗಿರಲಿಕ್ಕೆ ಯಾವ ಪ್ರತಿಬಂಧವಿರುವದು?"

"ಕುಸುಮ, ನನಗೂ ನಿನ್ನ ಬಂಧುವಾದ ತೈಲಪದೇವನಿಗೂ ದುಃಖ ಕೊಡಬೇಡ. ಅಸ್ಥಿವೈರಿಯಾದವನಿಗೆ ನಿನ್ನನ್ನು ಧಾರೆಯೆರೆದುಕೊಡಲಿಕ್ಕೆ ನಿನ್ನ ಅಣ್ಣನು ಒಪ್ಪುವದಿಲ್ಲ. ಸುಮ್ಮನೆ ಇಲ್ಲದ ಗೊಂದಲವೆಬ್ಬಿಸಬೇಡ. ತೈಲಪನು ನಿನಗೆ ಅನುರೂಪನಾದ ವರನನ್ನು ಶೋಧಿಸಿ ಲಗ್ನಮಾಡುವನು. ನೀನು ಸ್ವೇಚ್ಛಾಚಾರಿಯಾಗಿ ವರ್ತಿಸಬೇಡ."

"ಅವ್ವಾ, ನೀವು ಸಾವಿರ ಹೇಳಿದರೂ ನಾನು ಕೇಳುವವಳಲ್ಲ. ವರಿಸಿದರೆ ಮುಂಜಮಹಾರಾಜರನ್ನೇ ವರಿಸುವೆನು; ಇಲ್ಲದಿದ್ದರೆ ಅವಿವಾಹಿತಳಾಗಿರುವೆನು. ಇದೇ ನನ್ನ ನಿಶ್ಚಯುವು!"

ಕುಸುಮಕುಮಾರಿಯು ನಿಶ್ಚಯಪೂರ್ವಕವಾದ ಮಾತುಗಳನ್ನಾಡುವಷ್ಟರಲ್ಲಿ ತೈಲಪದೇವನು ಅಲ್ಲಿಗೆ ಬಂದಿದ್ದನು. ಅವನು ತನ್ನ ಭಗಿನಿಯ ಚಂಡಿತನದ ಮಾತುಗಳನ್ನು ಕೇಳಿ ರೇಗಿಗೆದ್ದನು. ಅವನು ಕಠೋರವಾಣಿಯಿಂದ—"ಕುಸುಮಕುಮಾರಿ, ನೀನು ಇಷ್ಟು ಚಂಡಿಯಿರುವೆಯೆಂದು ನಾನು ತಿಳಿದಿರಲಿಲ್ಲ. ಕರ್ನಾಟಕ ಸಾಮ್ರಾಜ್ಯದ ಹಗೆಯಾಗಿ ನಿಂತವನಿಗೆ ನಾನು ನಿನ್ನನ್ನು ಕೊಡಬೇಕೆ? ಕಂಡರೆ ಕತ್ತಿಯನ್ನು ಹಿರಿಯುವ ಕುಲಗೇಡಿ ಮುಂಜನ ಬಳಿಗೆ ಹೋಗಿ, ನನ್ನ ಭಗಿನಿಯನ್ನು ಸ್ವೀಕರಿಸಬೇಕೆಂದು ಹೇಳಿಕೊಳ್ಳಬೇಕೆ? ಕುಸುಮ, ನೀನು ಹಟಮಾರಿಯಾಗಬೇಡ. ಮುಂಜನೇನು ಸುರಥನಲ್ಲ; ಸುಧನ್ವನಲ್ಲ, ಮನ್ಮಥನಲ್ಲ. ಗುಣರೂಪಯೌವನಗಳಲ್ಲಿ ಅವನಿಗಿಂತ ಬಲಾಢ್ಯನಾದವನಿಗೆ ನಿನ್ನನ್ನು ಕೊಡುವೆನು. ಕರ್ನಾಟಕ ಸಾಮ್ರಾಜ್ಯದಲ್ಲಿ ಶೌರ್ಯ ಸದ್ಗುಣಮಂಡಿತರಾದ ಮಹಾ ಮಂಡಲೇಶ್ವರರಿಗೇನು ಕೊರತೆಯಿಲ್ಲ. ಕರ್ನಾಟಕ ಸಾಮ್ರಾಜ್ಯದ ಸಮ್ರಾಟನಾದವನು ಅವನಿಗಿಂತ ಪರಾಭೂತನಾದ ಒಬ್ಬ ಯಃಕಶ್ಚಿತ್ ಹಗೆಯೊಡನೆ ಶರೀರ ಸಂಬಂಧ ಮಾಡಿದನೆಂಬ ಮಾತು ವಿಮಲ ಕೀರ್ತಿಗೆ ಕುಂದು ತರುವಂತಹದಲ್ಲವೆ? ಪ್ರತಿಷ್ಠೆಗೆ ಕಲಂಕಪ್ರಾಯವಾಗುವಂತಹದಲ್ಲವೆ? ನೀನು ನಿನ್ನ ಚಂಡಿತನವನ್ನು ಬಿಟ್ಟರೆ ಸುಖಿಯಾಗುವಿ; ದುರಾಗ್ರಹಗೊಂಡೆಯಾದರೆ, ನಿನಗೆ ನಿಜವಾಗಿ ಶಾಂತಿ ಸಮಾಧಾನಗಳು ದೊರೆಯಲಾರವು"

"ಅಣ್ಣಾ!" ಕುಸುಮಕುಮಾರಿಯು ಗದ್ಗದ ಕಂಠದಿಂದ—"ನನ್ನ ಮನ

ಶ್ಯಾಂತಿಯನ್ನು ನಾಶಗೊಳಿಸಬೇಕೆಂದು ನೀವು ಹೆಬ್ಬಯಕೆಯುಳ್ಳವರಾಗಿದ್ದರೆ ಅದಕ್ಕೆ ನನ್ನ ಉಪಾಯವೇನು? ನನ್ನ ಮನಸ್ಸಿನಂತೆ ಕಾರ್ಯವು ನೆರವೇರಬೇಕೆಂದು ನಾನು ಹಟವನ್ನು ಹಿಡಿಯಲಾರೆನು. ಮುಂಜಮಹಾರಾಜರಿಗೆ ನನ್ನನ್ನು ಧಾರೆಯೆರೆದುಕೊಡುವದರಿಂದ ನಿಮ್ಮ ಗೌರವಕ್ಕೆ ಕುಂದು ಬರುತ್ತಿದ್ದರೆ, ನಾನು ವಿವಾಹದ ಬಗ್ಗೆ ಚಂಡಿತನವನ್ನು ಹಿಡಿಯುವದಿಲ್ಲ. ವಿಧಿಯು ನನ್ನ ಹಣೆಯಲ್ಲಿ ವಿವಾಹವನ್ನು ಬರೆದಿಟ್ಟರದಿದ್ದರೆ ಅದಕ್ಕೆ ನಾನೇನು ಮಾಡಲಿ?"

"ಹುಚ್ಚಿ, ನೀನು ಹೀಗೇಕೆ ಮಾತನಾಡುವೆ? ಮುಂಜರಾಜನ ಹೊರತು ಜಗತ್ತಿನಲ್ಲಿ ಅನುರೂಪ ವರಗಳಿರುವದಿಲ್ಲವೆಂದು ನಿನ್ನ ಭಾವನೆಯಿರುವದೇನು?"

"ಬಹುರತ್ನಾನಿ ವಸುಂಧರಾ. ನಾನು ಹಾಗೇಕೆ ಭಾವಿಸಲಿ? ಒಬ್ಬರಿಗಿಂತ ಹೆಚ್ಚಿನವರು ಮತ್ತೊಬ್ಬರು; ಮತ್ತೊಬ್ಬರಿಗಿಂತ ಹೆಚ್ಚಿನವರು ಮಗದೊಬ್ಬರು. ಹೀಗೆ ಜಗತ್ತಿನಲ್ಲಿ ಇರತಕ್ಕವರೇ. ಆ ಪ್ರಸಂಗವನ್ನು ತೆಗೆದುಕೊಂಡು ನಾನು ಮಾಡುವದೇನು? ಸೃಷ್ಟಿಯಲ್ಲಿ ಶ್ರೇಷ್ಠವಾದವನನ್ನೇ ವರಿಸಬೇಕೆಂದು ನಾನು ಸ್ವಯಂವರ ಪ್ರತಿಜ್ಞೆ ಮಾಡಿಲ್ಲ. ಮುಂಜ ಮಹಾರಾಜರು ಶ್ರೇಷ್ಠರಿರಲಿ, ಕನಿಷ್ಠರಿರಲಿ; ಅವರಲ್ಲಿ ನನ್ನ ಮನಸ್ಸು ಸೇರಿಕೊಂಡಿರುವದು. ಪರವಶತೆಯನ್ನು ಹೊಂದಿದ ಮನಸ್ಸಿನ ಮೇಲೆ ಬುದ್ಧಿಶಕ್ತಿಯ ವರ್ಚಸ್ಸವು ನಡೆಯದಾಗಿದೆ. ಅದಕ್ಕೆ ನಾನೇನು ಮಾಡಲಿ? ಅಣ್ಣಾ, ನೀವು ಮುಂಜಮಹಾರಾಜರನ್ನು ಶತ್ರುಗಳೆಂದು ಉಪೇಕ್ಷಿಸಬೇಡಿರಿ. ಶತ್ರುಗಳಾಗಿದ್ದವರು ಮಿತ್ರರಾಗಬಹುದು. ಮಿತ್ರರಿದ್ದವರು ಶತ್ರುಗಳಾಗಬಹುದು. ಶತ್ರುಗಳನ್ನು ಮಿತ್ರರಾಗಮಾಡಿಕೊಳ್ಳುವದರಲ್ಲಿ ಹೆಚ್ಚಿನ ಸ್ವಾರಸ್ಯವಿರುವದು."

"ಕುಸುಮಕುಮಾರಿ, ನೀನು ನಿರ್ಲಜ್ಜಳಿರುವೆ! ಅವಿಧೇಯಳಿರುವೆ! ಸ್ವೇಚ್ಛಾಪ್ರವೃತ್ತಳಿರುವೆ! ನೀನು ಚಾಲುಕ್ಯ ವಂಶದ ನಿರ್ಮಲ ಕೀರ್ತಿಗೆ ಕಲಂಕಪ್ರಾಯಳಾಗಿರುವೆ! ನಾನು ನಿನ್ನನ್ನು ಆ ನೀಚ ಮುಂಜನಿಗೆ ಎಂದೂ ಕೊಡಲಾರೆನು."

"ಅಣ್ಣಾ, ನನ್ನನ್ನು ಮುಂಜರಾಜನಿಗೆ ಕೊಡದಿರುವದು ನಿಮ್ಮ ಕೈಯೊಳಗಿನದಿರುವಂತೆ, ಅನ್ಯರನ್ನು ವರಿಸದಿರುವದು ನನ್ನ ಕೈಯೊಳಗಿನ ಮಾತಾಗಿರುವದು. ನೀವು ನನ್ನ ಮನಸ್ಸಿನ ಮೇಲೆ ಯಾವ ಬಗೆಯ ಅಧಿಕಾರವನ್ನೂ ಪ್ರಸ್ಥಾಪಿಸಲಾರಿರಿ. ನೀವು ನನ್ನನ್ನು ಮುಂಜಮಹಾರಾಜನಿಗೆ ಕೊಡದಿದ್ದರೆ ನಾನು ಕಡೆತನಕ ಅವಿವಾಹಿತಳಾಗಿಯೆ ಉಳಿಯುವೆನೆಂದು ಸತ್ಯವನ್ನು ಸ್ಮರಿಸಿ ಹೇಳುವೆನು."

"ಕುಸುಮಕುಮಾರಿ, ನೀನು ಆತ್ಮಸುಖಪರಾಯಣಳೂ ಉದ್ದಾಮಳೂ ಆಗಿರುವೆ. ಕಠೋರಕರ್ಮಿಯಾದ ನಿನ್ನನ್ನು ಕಡೆತನಕ ಕಾರಾಗೃಹದಲ್ಲಿಡಿಸುವೆನು. ನನ್ನ ಅಸ್ಥಿವೈರಿಯನ್ನು ವಿವಾಹವಾಗಬೇಕೆಂದು ಇಚ್ಛಿಸುವ ನೀನು ನನ್ನ ವೈರಿಯಿರುವೆ! ಇಂದಿನಿಂದ ನಾನು ನಿನ್ನ ಅಣ್ಣನಲ್ಲ; ನೀನು ನನ್ನ ತಂಗಿಯಲ್ಲ!"

ತೈಲಪದೇವನು ಹೀಗೆ ಸಂತಪ್ತವಾಣಿಯಿಂದ ನುಡಿದು, ಅಲ್ಲಿಂದ ಹೊರಟು ಹೋದನು. ಅಣ್ಣನ ವಾಕ್ಪ್ರಹಾರದಿಂದ ಹತಾಶಳಾದ ಕುಸುಮಸದೃಶ ಹೃದಯದ ಕುಸುಮಕುಮಾರಿಯು ವಾತಾಹತಕದಳಿಯಂತೆ ಭೂಮಿಗೆ ಬಿದ್ದು ಮೂರ್ಛಿತ ಳಾದಳು.

ಬೊಂಥಾದೇವಿ ಜಾಕಲದೇವಿ ಪ್ರಭಾವತಿ ಮೊದಲಾದವರು ಕುಸುಮಕುಮಾರಿಗೆ ಶೈತ್ಯೋಪಚಾರವನ್ನು ನಡೆಯಿಸಿದರು. ಎಷ್ಟೋಹೊತ್ತಿನ ಮೇಲೆ ಅವಳು ಚೇತರಿಸಿಕೊಂಡು ಎದ್ದು ಕುಳಿತಳು. ಅವಳ ಕಣ್ಣೆದುರಿಗೆ ತೈಲಪದೇವನ ಕಠೋರವಾದ ಹೃದಯ ಚಿತ್ರವು ಕಾಣಲು, ಅವಳಿಗೆ ತಿಳಿಯದೆ ಅವಳ ಮುಖದಿಂದ— "ನೀನು ಅಣ್ಣನಲ್ಲ; ನಾನು ತಂಗಿಯಲ್ಲ!" ಎಂಬ ಉದ್ಗಾರವು ಹೊರಟಿತು!

———

## ಮಂತ್ರಣಾಗಾರದಲ್ಲಿ.

ಮುದಗಲ್ಲು ಕಾಳಗದಲ್ಲಿ ಪರಾಭೂತನಾದ ಮಹಾತ್ವಾಕಾಂಕ್ಷಿ ಮಾರಸಿಂಹನು ಬನವಾಸಿಗೆ ಓಡಿಹೋದನು. ತೈಲಪದೇವನು ಮಾನ್ಯಖೇಟದಲ್ಲಿ ಸಿಂಹಾಸನಾರೋಹಣ ಸಮಾರಂಭವನ್ನು ಒಳ್ಳೆಯ ವಿಜೃಂಭಣೆಯಿಂದ ನೆರವೇರಿಸಿಕೊಂಡು ಕರ್ನಾಟಕ ಸಾಮ್ರಾಜ್ಯದ ಸೂತ್ರಚಾಲಕನಾಗಿರುವನೆಂಬದು ಗೊತ್ತಾದಕೂಡಲೆ ಮಾರಸಿಂಹನ ಹೊಟ್ಟೆಯಲ್ಲಿ ಕಿಚ್ಚುಸುರುವಿದಂತಾಯಿತು. ಅವನು ಉತ್ತರ ಕೊಂಕಣದ ಮಹಾ ಸಾಮಂತನಾದ ಅಪರಾಜಿತನನ್ನೂ, ಸೇವುಣದೇಶದ ಮಂಡಲೇಶ್ವರನಾದ ಇಮ್ಮಡಿ ಭಿಲ್ಲಮನನ್ನೂ ತನ್ನ ಕಡೆಗೆ ಒಲಿಸಿಕೊಂಡು ತನ್ನ ನೋದರಳಿಯನಾದ ರಾಷ್ಟ್ರಕೂಟ ನಾಲ್ಕನೆಯ ಇಂದ್ರನನ್ನು ಬನವಾಸಿಯಲ್ಲಿ + ಪಟ್ಟಗಟ್ಟಿದನು. ಚಾಲುಕ್ಯರ ತೈಲಪನು ರಾಷ್ಟ್ರಕೂಟ ಸಾಮ್ರಾಜ್ಯ ಸಿಂಹಾಸನವನ್ನು ಮೋಸದಿಂದ ವಶಪಡಿಸಿಕೊಂಡಿರುವನೆಂದೂ, ಅವನು ನಿಜವಾದ ಸಾರ್ವಭೌಮನಲ್ಲದ್ದರಿಂದ ಯಾರೂ ಅವನ ಒಡೆತನವನ್ನು ಒಪ್ಪಬಾರದೆಂದೂ ಮಾರಸಿಂಹನು

+ ಬನವಾಸಿಯ ಮಹಾಮಂಡಲೇಶ್ವರನಾದ ಭೀಮರಸನು ತೈಲಪದೇವನ ಅಂಕಕಾರನಾಗಿದ್ದನೆಂದು ಮೈಸೂರ ಸಂಸ್ಥಾನದ ತಾಳಗುಂದ ಶಾಸನದಲ್ಲಿ ಬರೆದಿದೆ. ಇವನು ತೈಲಪದೇವನ ಬಳಗ್ಗೆಯಾಗಿದ್ದರೆ, ಮಾರಸಿಂಹನು ಬನವಾಸಿಯಲ್ಲಿ ತಳವೂರಿದ ಹಾಗು ರಾಷ್ಟ್ರಕೂಟ ಮೂರನೆಯ ಕೃಷ್ಣನ ಮೊಮ್ಮಗನಾದ ನಾಲ್ಕನೆಯ ಇಂದ್ರನಿಗೆ ಪಟ್ಟಗಟ್ಟಿದ್ದ ಸಂಗತಿಗಳು ಆಕ್ಷೇಪಾರ್ಹವಿರುವದೆಂದು ಊಹಿಸಬಹುದ. ಬನವಾಸಿ ಪ್ರಾಂತದಲ್ಲಿಯ ಯಾವದೊಂದು ಗ್ರಾಮದಲ್ಲಿ ಇಂದ್ರನು ಪಟ್ಟಾಭಿಷಿಕ್ತನಾಗಿರಬಹುದು.

ತಾಲ್ಲೂಕಕಡೆಗೆ ಪ್ರಕಟನಾಪತ್ರಿಕೆಗಳನ್ನು ಕಳುಹಿಸಿದನು. ಮಾರಸಿಂಹನು ದೀರ್ಘ ಸಾಹಸಿಯೂ ಎದೆಗಾರನೂ ಇದ್ದದರಿಂದ ಹಲಕೆಲವು ಮಂಡಲೇಶ್ವರರು ಅವನ ಪಕ್ಷ ವನ್ನು ಹಿಡಿದರು. ಎರಡು ಶತಕಗಳಿಂದ ಕರ್ಣಾಟಕ ಸಾಮ್ರಾಜ್ಯಕ್ಕೆ ರಾಷ್ಟ್ರ ಕೂಟರೇ ಸಾರ್ವಭೌಮರಿದ್ದುದರಿಂದ ಎಷ್ಟೋ ಮಂಡಲೇಶ್ವರರಿಗೆ ತೈಲಪನ ಕೃತಿಯು ಅನ್ಯಾಯವೆಂದು ತೋರಲಾರಂಭಿಸಿತ್ತು. ಮುಂಜರಾಜನನ್ನು ಪರಾಭವಗೊಳಿ ಸಿದ್ದಕ್ಕಾಗಿ ತಾನೇ ಕರ್ನಾಟಕದ ಸಾರ್ವಭೌಮನಾದೆನೆಂದು ತಿಳಿದುಕೊಂಡ ತೈಲಪ ದೇವನನ್ನು ಎಷ್ಟೋ ಜನರು ನೀರಲ್ಲಿ ನೋಡಲಾರಂಭಿಸಿದ್ದರು. ಇಂದ್ರನು ರಾಷ್ಟ್ರ ಕೂಟವಂಶಜನೂ ಪಟ್ಟಬಾಧ್ಯನೂ ಇರುವನೆಂದೂ ಕೆಲವು ಜನರು ತಿಳಿದುಕೊಂಡು, ಮಾರಸಿಂಹನ ಪಕ್ಷವನ್ನು ಹಿಡಿದು, ತೈಲಪದೇವನೊಡನೆ ಕಾದಲಿಕ್ಕೆ ಸಿದ್ಧರಾದರು. ಇಂದ್ರನು ಕರ್ನಾಟಕದ ಸಾರ್ವಭೌಮನಿರುವದರಿಂದ ಸಾಮ್ರಾಜ್ಯದೊಳಗಿನ ಎಲ್ಲ ಮಂಡಲೇಶ್ವರರು ಅವನಿಗೆ ಕಪ್ಪಕಾಣಿಕೆಗಳನ್ನೊಪ್ಪಿಸಬೇಕೆಂದೂ, ಯಾರಾದರೂ ಈ ರಾಜಾಜ್ಞೆಯನ್ನುಲ್ಲಂಘಿಸಿ ತೈಲಪನಿಗೆ ಕಾಣಿಕೆಯರ್ಪಿಸಿದರೆ ಅವರು ರಾಜದಂಡ ನೆಗೆ ಗುರಿಯಾಗಬೇಕಾಗುವದೆಂದೂ ಮಾರಸಿಂಹನು ಸಾರತೊಡಗಿದ್ದರಿಂದ ಎಷ್ಟೋ ಮಂಡಲೇಶ್ವರರು ಮಾರಸಿಂಹನ ಭಯದಿಂದ ಇಂದ್ರನ ಪಕ್ಷವನ್ನು ವಹಿಸಿದರು.

ತೈಲಪದೇವನು ಸಾಮಾನ್ಯಕೋಟಿಯೊಳಗಿನವನಲ್ಲವೆಂಬದನ್ನು ಮಾರ ಸಿಂಹನು ಗುರುತಿಸಿದ್ದನು. ಪ್ರತಾಪನಿಧಿಯಾದ ತೈಲಪದೇವನೊಡನೆ ಕಾದಬೇ ಕಾದರೆ ಉತ್ತಮವಾದ ರೀತಿಯಿಂದ ಸಂಗ್ರಾಮಸಿದ್ಧತೆ ಮಾಡಿಕೊಳ್ಳುವದು ವಿಹಿತ ವೆಂದು ತಿಳಿದು, ಮಾರಸಿಂಹನು ಸೈನ್ಯವನ್ನು ಕೂಡಿಸತೊಡಗಿದನು. ತೈಲಪದೇ ವನು ತನ್ನ ಮೇಲೆ ದಂಡೆತ್ತಿ, ಹೊರಟರೆ ಎಲ್ಲ ಮಾಂಡಲಿಕರು ತಮ್ಮ ತಮ್ಮ ಸೈನ್ಯ ದೊಡನೆ ಹೊರಟುಬರಬೇಕೆಂದು ಅವನು ತನ್ನ ಪಕ್ಷದ ಮಂಡಲೇಶ್ವರರಿಗೆ ತಿಳಿಸಿ ದ್ದನು. ಉತ್ತರ ಕೊಂಕಣದ ಮಹಾ ಸಾಮಂತನಾದ ಅಪರಾಜಿತನೂ ಸೇವುಣದ ಭಿಲ್ಲಮನೂ ಮಾರಸಿಂಹನಂತೆ ಮಹತ್ವಾಕಾಂಕ್ಷಿಗಳೂ ಕೆಚ್ಚೆದೆಯವರೂ ಸಾಹಸಗಾ ರರೂ ಆಗಿದ್ದರು. ಅವರು ಇಂದ್ರನ ಸಿಂಹಾಸನಕ್ಕೆ ಸ್ಥೈರ್ಯವುಂಟಾಗುವದಕ್ಕೆ ಶಕ್ತಿಮೀರಿ ಸಹಾಯಮಾಡುವೆವೆಂದು ಮಾರಸಿಂಹನಿಗೆ ಮಾತು ಕೊಟ್ಟಿದ್ದರು. ಮಾರಸಿಂಹನ ಪಕ್ಷವು ದಿನದಿನಕ್ಕೆ ಬಲಿಯಲಾರಂಭಿಸಿತು. ಅವನು ತೈಲಪದೇವ ನೊಡನೆ ಕಾದುವದಕ್ಕೆ ಸಡ್ಡುಹೊಡೆದು ನಿಂತನು.

ರಾಷ್ಟ್ರಕೂಟ ಇಂದ್ರನನ್ನು ಬನವಾಸಿಯಲ್ಲಿ ಪಟ್ಟಕ್ಕೆ ಕುಳ್ಳಿರಿಸಿದ ಸಂಗತಿಯು ತೈಲಪದೇವನಿಗೆ ತಿಳಿದ ಕೂಡಲೆ ಅವನು ನಖಶಿಖಾಂತವಾಗಿ ಉರಿಯತೊಡಗಿ ದನು. ಮಾರಸಿಂಹನನ್ನು ನಾಶಗೊಳಿಸದಿದ್ದರೆ ಸಾಮ್ರಾಜ್ಯದಲ್ಲಿ ಸುಖ-ಶಾಂತಿಗಳು ನೆಲೆಗೊಳ್ಳಲಾರವೆಂಬದು ಅವನಿಗೆ ಗೊತ್ತಾಯಿತು. ಕೂಡಲೆ ಅವನು ತನ್ನ ಪಕ್ಷದ ಎಲ್ಲ ಮಂಡಲೇಶ್ವರರಿಗೆ ಯುದ್ಧದ ಸಿದ್ಧತೆಯನ್ನು ಮಾಡಿಕೊಳ್ಳುವದಕ್ಕೆ ತಿಳಿಸಿದನು. ಕುಂಡಿನಾಡಿನ ರಟ್ಟ ಮನೆತನದ ಒಂದನೆಯ ಕಾರ್ತವೀರ್ಯನೂ,

ಸವದತ್ತಿಯ ಶಾಂತಿವರ್ಮನೂ, ಕದಂಬಲಿಗೆಯ ಸಾಮಂತನಾದ ಜಾತರಸನೂ ಕಿಸುಕಾಡು ಬೆಳ್ವೊಳಗಳ ಮಹಾಮಂಡಲೇಶ್ವರನಾದ ಎರಡನೆಯ ಅರಿಕೇಸರಿಯೂ ಅವನ ಮಗನಾದ ಭೀಮರಸನೂ, ಎಡೆನಾಡಿನ ಸಾಮಂತನಾದ ಕೀರ್ತಿವರ್ಮನೂ ತೈಲಪದೇವನ ಪಕ್ಷವನ್ನು ಹಿಡಿದು ಮಾರಸಿಂಹನೊಡನೆ ಕಾದುವದಕ್ಕೆ ಸಿದ್ಧರಾದರು.

ತೈಲಪದೇವನು ವಿಚಾರಗೃಹದಲ್ಲಿ ಒಬ್ಬನೇ ಕುಳಿತುಕೊಂಡಿದ್ದನು. ಮಾರಸಿಂಹನನ್ನು ಸುಲಭವಾದ ರೀತಿಯಿಂದ ಪರಾಭವಗೊಳಿಸಿ ಸಾಮ್ರಾಜ್ಯವನ್ನು ಹೇಗೆ ನಿಷ್ಕಂಟಕ ಮಾಡಬೇಕೆಂಬ ಆಲೋಚನೆಯಲ್ಲಿ ಅವನು ಮುಳುಗಿದ್ದನು. ಯುದ್ಧದಲ್ಲಿ ಜಯಾಪಜಯುಗಳು ದೈವಾಧೀನವಾದವುಗಳೆಂಬದನ್ನು ಅವನು ಅರಿತಿದ್ದರಿಂದ ಜಯಶ್ರೀಯನ್ನು ಹೇಗೆ ವಶಪಡಿಸಿಕೊಳ್ಳಬೇಕೆಂದು ವಿಚಾರಿಸತೊಡಗಿದ್ದನು. ಉತ್ತರಕೊಂಕಣದ ಅಪರಾಜಿತನೂ ಭಿಲ್ಲಮನೂ ಮಾರಸಿಂಹನಂತೆ ವಿಕ್ರಮಶಾಲಿಗಳಿದ್ದರು. ಅವರ ಸಹಾಯವು ಮಾರಸಿಂಹನಿಗೆ ದೊರೆತರೆ ಅವನು ಅಜೇಯನಾಗಬಹುದೆಂದು ತಿಳಿದು, ಯುಕ್ತಿ ಪ್ರಯುಕ್ತಿಗಳಿಂದ ಅವರ ನೆರವು ಮಾರಸಿಂಹನಿಗೊದಗದಂತೆ ಮಾಡಬೇಕೆಂದು ಅವನು ನಿರ್ಧರಿಸಿದನು. ಅಷ್ಟರಲ್ಲಿ ಮಂತ್ರಣಾಗಾರದ ದ್ವಾರಪಾಲಕನು ಒಳಗೆ ಬಂದು—"ಮಹಾರಾಜರೆ, ಬನವಾಸಿಯಿಂದ ಗುಪ್ತಚರರ ಮುಖ್ಯಾಧಿಕಾರಿಗಳಾದ ದುರ್ಗಾನಾಥರು ಬಂದಿರುವರು."

ಸೇವಕನು ಹೀಗೆ ನುಡಿದ ಕೂಡಲೆ ತೈಲಪದೇವನು ದುರ್ಗಾನಾಥನನ್ನು ಒಳಗೆ ಕಳುಹಿಸಿಕೊಡಬೇಕೆಂದು ಆಜ್ಞಾಪಿಸಿದನು. ಪರಕ್ಷಣದಲ್ಲಿ ದುರ್ಗಾನಾಥನು ಮಂತ್ರಣಾರವನ್ನು ಪ್ರವೇಶಿಸಿ, ತೈಲಪದೇವನಿಗೆ ಪ್ರಣಾಮ ಮಾಡಿದನು. ತೈಲಪದೇವನು ಅವನನ್ನು ಯೋಗ್ಯಸ್ಥಳದಲ್ಲಿ ಕುಳ್ಳಿರಿಸಿದ ಬಳಿಕ—"ದುರ್ಗಾನಾಥರೆ, ನೀವು ಈಗ ಎಲ್ಲಿಂದ ಬಂದಿರಿ? ಬನವಾಸಿಯ ಕಡೆಯ ವರ್ತಮಾನವೇನು?"

"ಮಹಾರಾಜರೆ," ದುರ್ಗಾನಾಥನು ನಮ್ರತೆಯಿಂದ—"ಗಂಗರಸನಾದ ಮಾರಸಿಂಹನು ರಾಷ್ಟ್ರಕೂಟ ನಾಲ್ಕನೆಯ ಇಂದ್ರನನ್ನು ಸಾರ್ವಭೌಮನನ್ನಾಗಿ ಮಾಡಿದ ಸಂಗತಿಯು ತಮಗೆ ವಿದಿತವಿರುವದು. ಈಗ ಅವನು ಕೊಂಕಣ-ಸೇವುಣಗಳ ಮಂಡಲೇಶ್ವರರ ಸಹಾನುಭೂತಿಯನ್ನು ದೊರಕಿಸಿರುವನು. ಸಾಮ್ರಾಜ್ಯದೊಳಗಿನ ಎಷ್ಟೋ ಮಂಡಲೇಶ್ವರರು ಅವನ ಪಕ್ಷಕ್ಕೆ ಸೇರಿರುವರು. ಸದ್ಯಕ್ಕೆ ಮಾರಸಿಂಹನ ಸೈನ್ಯವು ತಮ್ಮ ಸೈನ್ಯಕ್ಕೆ ಸರಿಯಾಗಿದ್ದು, ಇನ್ನೂ ಹೆಚ್ಚಾಗಿ ಸೇನಾಸಂಗ್ರಹ ಮಾಡಬೇಕೆಂದು ಯೋಚಿಸಿರುವನು. ಸಾಕಷ್ಟು ಸೈನ್ಯವು ಕೂಡಿದೊಡನೆಯೆ ಮಾನ್ಯಖೇಟ ರಾಜಧಾನಿಯನ್ನು ಮುತ್ತಬೇಕೆಂದು ಅವನ ಸಾಹಸವಿರುವದು. ಅಷ್ಟರಲ್ಲ ನೀವು ಬನವಾಸಿಗೆ ದಂಡೆತ್ತಿ ಹೋದರೆ ಒಳಿತಾಗುವದು. ಮಾರಸಿಂಹನಿಗೆ ಸಹಾಯ ಮಾಡುವದಕ್ಕೆ ಅನೇಕ ಮಂಡಲೇಶ್ವರರು ಸಜ್ಜಾಗಿ ಕುಳಿತುಕೊಂಡಿರುವರು. ಅಪರಾಜಿತ-ಭಿಲ್ಲಮರಂತು ಮಾರಸಿಂಹನ ಪತ್ರದ ದಾರೀ

ನೋಡುತ್ತಿರುವರು. ಸದ್ಯದ ಎಡರು ಕಠಿಣವಾದದ್ದಿರುವದರಿಂದ ಯುಕ್ತಿಯಿಂದ ಪಾರಾಗತಕ್ಕದ್ದು. ಮಾರಸಿಂಹನ ಪಕ್ಷವನ್ನು ಪ್ರಬಲ ಮಾಡಗೊಡದೆ, ಬೇಗನೆ ಅವನ ಮೇಲೆ ದಂಡೆತ್ತಿ ಹೋಗಬೇಕೆಂದು ಅರಿಕೇಸರಿ-ಭೀಮರಸರ ಅಭಿಪ್ರಾಯ ವಿರುವದು. ಅರಿಕೇಸರಿಯವರು ನಿಮ್ಮ ಬರವನ್ನು ನಿರೀಕ್ಷಿಸುತ್ತಲಿರುವರು."

"ದುರ್ಗಾನಾಥರೆ, ಮಾರಸಿಂಹನು ರಾಷ್ಟ್ರಕೂಟರನ್ನು ಪುನರುಜ್ಜೀವನ ಗೊಳಿಸಬೇಕೆಂದು ಸಿದ್ಧನಾಗಿರುವನೆಂದಂತಾಯಿತು. ಏನೂ ಚಿಂತೆಯಿಲ್ಲ. ಚಾಲುಕ್ಯರ ಸಾಮರ್ಥ್ಯವು ಎಷ್ಟಿರುವದೆಂಬದು ಚನ್ನಾಗಿ ಗೊತ್ತಾದಹೊರತು, ಅವನ ಹಾಗು ಅವನ ಪಕ್ಷದ ಜನರ ಭ್ರಾಂತಿಯು ಬಯಲಾಗಲಾರದು. ನತದೃಷ್ಟರಾದ ರಾಷ್ಟ್ರಕೂಟರನ್ನು ಮತ್ತೆ ನೆಲೆಗೊಳಿಸಿ, ಸಾಮ್ರಾಜ್ಯವನ್ನು ಅವನತಿಗೊಳಿಸಬೇಕೆಂದು ಅವನ ಸಾಹಸವಿದ್ದಂತಾಯಿತು. ದುರ್ಗಾನಾಥರೆ, ನಾನು ನಾಳಿನದಿನವೆ ಮಾರಸಿಂಹನ ಮೇಲೆ ದಂಡೆತ್ತಿ ಹೋಗುವೆನು. ನೀವು ನಿಮ್ಮ ಗುಪ್ತಚರರ ಜಾಲವನ್ನು ನಾಲ್ಕೂ ಕಡೆಗೆ ಪಸರಿಸಿ, ಶತ್ರುಗಳ ಕಡೆಯ ಗುಪ್ತ ಸಂಗತಿಗಳು ನನಗೆ ತಿಳಿಯುವಂತೆ ವ್ಯವಸ್ಥೆಯನ್ನಿರಿಸಬೇಕು."

"ತಮ್ಮ ಆಜ್ಞೆಯಂತೆ ನಡೆದುಕೊಳ್ಳುವೆನು."

"ಈಗ ನೀವು ಮಂತ್ರಿಗಳಾದ ಮುದ್ದಣ-ರಾಮನಾಥರನ್ನೂ, ಸಿದ್ಧಸೇನ-ಬಾರಪ್ಪಸೇನಾಪತಿಗಳನ್ನೂ ಕರೆತರುವ ಬಗ್ಗೆ ಸೇವಕರಿಗೆ ಆಜ್ಞಾಪಿಸಿ, ನಿಮ್ಮ ಕೆಲಸಕ್ಕೆ ಹೋಗಿರಿ."

ದುರ್ಗಾನಾಥನು ತೈಲಪದೇವನ ಹೇಳಿಕೆಯಂತೆ ರಾಜಮಂಡಳವನ್ನು ಕರೆತರುವದಕ್ಕಾಗಿ ಸೇವಕರಿಗೆ ಆಜ್ಞಾಪಿಸಿ ತನ್ನ ಕಾರ್ಯಕ್ಕಾಗಿ ತೆರಳಿದನು. ಅನಂತರದಲ್ಲಿ ಸ್ವಲ್ಪ ವೇಳೆಯ ಮೇಲೆ ಮಂತ್ರಿ-ಸೇನಾಪತಿಗಳು ಮಂತ್ರಣಾಗಾರಕ್ಕೆ ಬಂದರು. ತೈಲಪದೇವನು ಅವರಿಗೆ ದುರ್ಗಾನಾಥನು ಹೇಳಿದ ವೃತ್ತಾಂತವನ್ನೆಲ್ಲ ತಿಳಿಸಿದನು. ಪರಾಭೂತನಾದ ಮಾರಸಿಂಹನು ಈಗ ಮಾರ್ಮಲೆತು ನಿಂತುಕೊಂಡಿರುವನೆಂದು ಎಲ್ಲರು ತಿಳಿದರು. ಮಾರಸಿಂಹನನ್ನು ದಂಡೆತ್ತಿ ಬರಗೊಡದೆ, ಅವನ ಮೇಲೆಯೆ ಸೈನ್ಯವನ್ನು ತೆಗೆದುಕೊಂಡು ಹೋಗುವದು ನೆಟ್ಟಗೆಂದು ಮಂತ್ರಿಯಾದ ರಾಮನಾಥನು ತನ್ನ ಅಭಿಪ್ರಾಯವನ್ನು ತಿಳಿಸಿದನು. ಸಿದ್ಧಸೇನ-ಬಾರಪ್ಪಸೇನಾಪತಿಗಳು ರಾಮನಾಥ ಮಂತ್ರಿಯಂತೆಯೆ ಅಭಿಪ್ರಾಯವಿತ್ತರು. ಎಲ್ಲ ರಾಜಪರಿವಾರವು ನಿರ್ದಾಕ್ಷಿಣ್ಯದಿಂದ ತಮ್ಮ ತಮ್ಮ ಮತ ಪ್ರದರ್ಶನ ಮಾಡಿದರೂ, ಮುದ್ದಣ ಮಂತ್ರಿಯು ತಟಸ್ಥ ವೃತ್ತಿಯಿಂದ ಕುಳಿತದ್ದನ್ನು ನೋಡಿ ತೈಲಪದೇವನ ಮನಸ್ಸು ಒಂದು ವಿಧವಾಗಿ ಶಂಕಾಕುಲವಾಯಿತು. ಆಗ ಅವನು ಮುದ್ದಣಮಂತ್ರಿಯನ್ನು ಕುರಿತು—"ಮಹಾಮಂತ್ರಿಗಳೆ, ಮಾರಸಿಂಹನ ಮೇಲೆ ದಂಡೆತ್ತಿ ಹೋಗುವ ಬಗ್ಗೆ ನಿಮ್ಮ ಅಭಿಪ್ರಾಯವೇನಿರುವದು?"

"ಮಹಾರಾಜರೇ, ನಿಮ್ಮ ಅಭಿಪ್ರಾಯಕ್ಕೆ ನಾನು ವಿರೋಧಿಸಿಕೊಂಡಿಲ್ಲ. ಮಾರಸಿಂಹನು ಎಷ್ಟೇ ಬಲಿಷ್ಠನಾಗಿದ್ದರೂ ಅವನು ತಮ್ಮ ಪ್ರಚಂಡ ಶಕ್ತಿಗೆ ಈಡಾಗಲಾರನು. ಆಡು ಬೆಳೆದರೆ ಆನೆಯಾಗಬಲ್ಲದೆ? ನೀವು ಅವನನ್ನು ನಿಶ್ಚಯವಾಗಿ ನಾಶಗೊಳಿಸುವಿರೆಂಬದರಲ್ಲಿ ಸಂದೇಹವಿಲ್ಲ."

"ಮುಪ್ಪಣರೆ, ಈ ಮಾತುಗಳಿಂದ ನಿಮ್ಮ ಸ್ಪಷ್ಟವಾದ ಅಭಿಪ್ರಾಯವು ವ್ಯಕ್ತವಾಗುವದಿಲ್ಲ. ಎಲ್ಲ ರೀತಿಯಿಂದ ವಿಚಾರಿಸಿದರೆ ಸದ್ಯದ ಪರಿಸ್ಥಿತಿಯಲ್ಲಿ ದಂಡಯಾತ್ರೆ ಮಾಡುವದು ಯೋಗ್ಯವಾಗುವದೇನೆಂಬದರ ಬಗ್ಗೆ ನಾನು ನಿಮ್ಮನ್ನು ಕೇಳಿದೆನು."

"ನೀವು ದಂಡೆತ್ತಿ ಹೋಗದಿದ್ದರೆ, ಮಾರಸಿಂಹನು ರಾಜಧಾನಿಯನ್ನು ಮುತ್ತುವದಕ್ಕಾಗಿ ಹೊರಟು ಬರುವನು. ಬನವಾಸಿಯಂತಹ ದೂರಿನ ಪ್ರದೇಶಕ್ಕೆ ಸೈನ್ಯವನ್ನು ತೆಗೆದುಕೊಂಡು ಹೋಗಿ ಹೆಚ್ಚಿನ ಅರ್ಥಹಾನಿ ಪ್ರಾಣಹಾನಿ ಮಾಡುವದಕ್ಕಿಂತ, ಶತ್ರುಗಳನ್ನೇ ಸ್ಥಳಬಿಟ್ಟು ಬರುವಂತೆ ಮಾಡುವದೊಳಿತು. ಹೀಗಿದ್ದರೂ ಮಾರಸಿಂಹನಿಗೆ ಸೋಲು ಕಟ್ಟಿಟ್ಟದ್ದೇ. ಅದರಲ್ಲಿ ಅವನಾಗಿ ದಂಡೆತ್ತಿ ಬರುವದರಲ್ಲಿ ವಿಶೇಷವಾದ ಲಾಭವಿರುವದು. ರಾಜಪರಿವಾರವು ಸಂಗ್ರಾಮೋತ್ಸುಕವಾಗಿರುವದು. ಅವರ ಓಟ-ಮೇಲಾಟಗಳನ್ನು ತಡೆಯುವದು ನಿಹಿತವಲ್ಲೆಂದು ತಿಳಿದು ನಾನು ಸುಮ್ಮನಿದ್ದೆನು. ತಮ್ಮ ವರ್ಚಸ್ವವು ಸಾಮ್ರಾಜ್ಯದಲ್ಲಿ ಇನ್ನೂ ಚನ್ನಾಗಿ ನೆಲಗೊಂಡಿಲ್ಲ. ರಾಜ್ಯದಲ್ಲಿ ಶಾಂತಿ-ಸುವ್ಯವಸ್ಥೆಗಳು ಪ್ರಸ್ಥಾಪಿತವಾದ ಮೇಲೆ ಉತ್ತರಾಪಥಕ್ಕೆ ಸಹ ದಂಡೆತ್ತಿ ಹೋಗಬಹುದು. ಪ್ರಭಾವಶಾಲಿಗಳಾದ ನೀವು ಬೇಗನೆ ಎಲ್ಲೆಡೆಯಲ್ಲಿ ಸುಖ-ಶಾಂತಿಗಳನ್ನು ನೆಲೆಗೊಳಿಸುವಿರೆಂಬ ನಂಬಿಗೆಯಿದೆ. ನೀವು ಬನವಾಸಿಯನ್ನು ಮುತ್ತ ಹೋದರೆ, ಮುತ್ತೊಬ್ಬ ಮಂಡಲೇಶ್ವರನು ಮನ್ಯಖೇಟವನ್ನು ಮುತ್ತಬಹುದೆಂಬ ಭಯವಿದೆ. ನೀವು ಅದರ ಭಯವನ್ನು ಬಿಟ್ಟ ಕೊಂ... ಣದ ಅಪರಾಜಿತನೂ ಮಾರಸಿಂಹನ ಅಭಿಮಾನಿಗಳಿದ್ದು, ನಿಮಗೆ ವಿರೋಧಿಗಳಾಗಿರುವರು. ಅವರಿಬ್ಬರೂ ನಾಮಾಂಕಿತ ಯೋಧರು. ಎಲ್ಲ ಬಗೆಯಿಂದ ವಿಚಾರಿಸಿದರೆ, ಇನ್ನೂ ಕೆಲವು ದಿನಗಳ ವರೆಗೆ ನೀವು ರಾಜಧಾನಿಯನ್ನು ಬಿಡಬಾರದೆಂದು ನನ್ನ ಸ್ಪಷ್ಟವಾದ ಅಭಿಪ್ರಾಯವಿರುವದು."

ಮಹಾ ಮಂತ್ರಿಯಾದ ಮುಪ್ಪಣನ ಅಭಿಪ್ರಾಯವನ್ನು ಕೇಳಿ ... ಸೇನಾಪತಿಯು ನಸುನಕ್ಕನು ಆಗ ಅವನು ತೈಲಪದೇವನನ್ನು ನುಡಿದನು – "ಮಹಾರಾಜರೆ, ಮಹಾಮಂತ್ರಿಗಳು ಹೀಗೆ ಮಾತನಾಡಿದ ಕಾರಣವೇನೆಂಬದು ನನಗೆ ... ಯವಾಗಿದೆ; ಆದರೂ ಅವರು ಶತ್ರುಗಳಿಗೆ ಹೆದರುವರೆಂದು ಹೇಳಲಿಕ್ಕೆ ಬರುವದಿಲ್ಲ. ತಮ್ಮ ಶಕ್ತಿಪರೀಕ್ಷೆಯಿಲ್ಲದ ಮಂತ್ರಿಗಳ ಅಭಿಪ್ರಾಯವನ್ನು ... ವಿಹಿತವು.'

' ಮಹಾರಾಜರೆ," ಬಾರಪ್ಪ ಸೇನಾಪತಿಯು ... – "ಮಹಾಮಂತ್ರಿಗಳು ರಾಷ್ಟ್ರಕೂಟರ ಉಪ್ಪುಂಡವರಾಗಿರುವರು. ಆದ್ದರಿಂದಲೇ ...

ಹಾಗು ಮಾರಸಿಂಹನ ಮೇಲೆ ದಂಡೆತ್ತಿ ಹೋಗಬಾರದೆಂದು ಅವರ ಅಭಿಪ್ರಾಯ ವುಂಟು. ರಾಷ್ಟ್ರಕೂಟರ ಪ್ರಾಣಪ್ರತಿಷ್ಠೆ ಮಾಡುವದಕ್ಕೆ ಟೊಂಕಕಟ್ಟಿದ ಮಾರ ಸಿಂಹನಿಗೆ ಮಹಾ ಮಂತ್ರಿಗಳು ಅನುಕೂಲರಿರುವರೆಂಬದು ಅವರ ಮಾತುಗಳಿಂದ ನಿಚ್ಚಳವಾಗಿ ತಿಳಿಯುತ್ತದೆ. ಶತ್ರುಗಳನ್ನು ರಾಜಧಾನಿಯ ವರೆಗೆ ಬರಗೊಡಬೇ ಕೆಂಬ ಮಾತಿಗೆ ಯಾವ ಸಮಂಜಸ ಮನುಷ್ಯನು ಒಪ್ಪಬಹುದು?

ಬಾರಪ್ಪನ ಹಾಗು ಸಿದ್ಧಸೇನನ ಮಾತುಗಳನ್ನು ಕೇಳಿ ಮುದ್ದಣ ಮಂತ್ರಿಯು ಸಂತಾಪಗೊಂಡನು. ಸಾಮ್ರಾಜ್ಯನಿಷ್ಠನಾದ ತನ್ನ ಮೇಲೆ ಸೇನಾಪತಿಗಳಿಬ್ಬರೂ ನಿಷ್ಕಾರಣವಾಗಿ ದೋಷಾರೋಪಣೆ ಮಾಡಿದ್ದರಿಂದ ಅವನ ಮನಸ್ಸು ವ್ಯಾಕುಲ ಗೊಂಡಿತು. ಆಗ ಅವನು ಸ್ಪಷ್ಟವಾಣಿಯಿಂದ—“ಸೇನಾಪತಿಗಳೆ, ತಮ್ಮ ವಿಚಾರ ಗಳು ತೀರ ಕುತ್ಸಿತವಾದವುಗಳಿರುವವು. ನೀವು ನನ್ನ ಸ್ವಭಾವಪರಿಚಯವಿಲ್ಲದವ ರಿದ್ದುದರಿಂದ ಹೀಗೆ ಮಾತನಾಡತೊಡಗಿರುವಿರಿ. ನಾನು ರಾಷ್ಟ್ರಕೂಟ ಸಾರ್ವಭೌ ಮರ ಸೇವೆಯಲ್ಲಿದ್ದದ್ದು ನಿಜವು. ಅವರಿಂದ ಸಾಮ್ರಾಜ್ಯರಕ್ಷಣೆಯ ಕಾರ್ಯವಾಗದ್ದ ರಿಂದ ತೈಲಪದೇವ ಮಹಾರಾಜರು ಸಾಮ್ರಾಜ್ಯ ಸಿಂಹಾಸನವನ್ನು ಸ್ವಾಧೀನಪಡಿಸಿ ಕೊಂಡರು. ಮಹಾರಾಜರು ಗುಣಗ್ರಾಹಿಗಳಿರುವದರಿಂದಲೆ ಏಕನಿಷ್ಠ ಸೇವಕನಾದ ನನ್ನನ್ನು ತಮ್ಮ ಸೇವೆಯಲ್ಲಿರಿಸಿಕೊಂಡರು. ನಾನು ಕರ್ನಾಟಕ ಸಾಮ್ರಾಜ್ಯದ ಏಕನಿಷ್ಠ ಸೇವಕನಿರುವೆನೆಂಬವನ್ನು ನೀವು ಮರೆತಂತೆ ತೋರುವದು. ನಾನು ಕೇವಲ ರಾಷ್ಟ್ರಕೂಟ ವಂಶದ ಅಭಿಮಾನಿಯಾಗಿದ್ದರೆ ಮಾರಸಿಂಹನಂತೆ ಬಂಡುಗಾರ ನಾಗುತ್ತಿದ್ದೆನು; ಇಂದ್ರ ಮಹಾರಾಜರಿಗೆ ಸಿಂಹಾಸನವು ದೊರೆಯುವದಕ್ಕಾಗಿ ಪ್ರಯ ತ್ನಿಸುತ್ತಿದ್ದೆನು. ಚಾಲುಕ್ಯರದಾಗಿದ್ದ ಕರ್ನಾಟಕ ಸಾಮ್ರಾಜ್ಯವು ಚಾಲುಕ್ಯರ ವಶ ವಾದರೆ ನನಗೆ ದುಃಖವೇಸಿರುವದು? ರಾಷ್ಟ್ರಕೂಟರೂ ಕನ್ನಡಿಗರೇ; ಚಾಲುಕ್ಯರೂ ಕನ್ನಡಿಗರೇ; ಇವರಲ್ಲಿ ಯಾರು ಪಟ್ಟಬಾಧ್ಯರಾದರೂ ನನಗ ಅಸೂಯೆಯಿಲ್ಲ. ತೈಲ ಪದೇವ ಮಹಾರಾಜರಂತಹ ತೇಜಸ್ವಿಗಳು ಸಾಮ್ರಾಜ್ಯಕ್ಕೆ ಒಡೆಯರಾದ್ದರಿಂದ ನನಗೆ ಆನಂದವಾಗಿದೆ. ಸಾಮ್ರಾಜ್ಯದಲ್ಲಿ ನೆಮ್ಮದಿಯು ನೆಲೆಗೊಳ್ಳುವ ವರೆಗೆ ದಂಡಯಾತ್ರೆ ಮಾಡಬಾರದೆಂದು ನನ್ನ ಅಭಿಪ್ರಾಯವಿರುವದು. ನನ್ನ ಈ ಮಾತಿನ ವಿಪರ್ಯಾಸ ಮಾಡಿದರೆ ಅದಕ್ಕೆ ನನ್ನ ಉಪಾಯವಿಲ್ಲ.”

ಮುದ್ದಣಮಂತ್ರಿಯ ಮಾತುಗಳನ್ನು ಕೇಳಿ ತೈಲಪನ ಮನಸ್ಸು ಸಮಾಧಾನ ಗೊಂಡಿತು. ಮಂತ್ರಿ-ಸೇನಾಪತಿಗಳಾದರೂ ಅವನ ವಿಷಯದಲ್ಲಿ ನಿಶ್ಯಂಕಮನಸ್ಕ ರಾದರು. ಮಹಾಮಂತ್ರಿಯು ನಿಜವಾದ ರಾಜನಿಷ್ಠನಿರುವನೆಂದು ಎಲ್ಲರೂ ತಿಳಿ ದರು. ಆಗ ತೈಲಪದೇವನು ಮಂತ್ರಿಯನ್ನು ಸಮಾಧಾನಗೊಳಿಸುವದಕ್ಕಾಗಿ:— “ಮಹಾಮಂತ್ರಿಗಳೇ, ನಾನು ನಿಮ್ಮ ಸದ್ಗುಣಗಳನ್ನು ಚನ್ನಾಗಿ ಅರಿತಿರುವೆನು. ಇಂದಿನ ನಿಮ್ಮಮಾತುಗಳನ್ನು ಕೇಳಿ, ನನ್ನ ಮನಸ್ಸು ಮತ್ತಿಷ್ಟು ನಿರ್ಮಲವಾಯಿತು. ನಿಮ್ಮ ಅಭಿಪ್ರಾಯವನ್ನು ನಾನು ಎಂದೂ ಅಲ್ಲಗಳೆಯಲಾರೆನು. ಮಾರಸಿಂಹನು

ಮಾನ್ಯಖೇಟದ ಮೇಲೆ ದಾಳಿಮಾಡುವನೆಂಬ ಸುದ್ದಿಯಿರುವದೇನೋ ನಿಜವು; ಆದರೆ ಅವನು ಹಾಗೆ ಎಂದೂ ಮಾಡಲಾರನು. ಅಲ್ಲಿಯೇ ತನ್ನ ಪಕ್ಷವನ್ನು ಬಲಿಸಿಕೊಂಡು ಸಾಮ್ರಾಜ್ಯದ ಕೆಲವು ಪ್ರಾಂತಗಳ ಮೇಲೆ ತನ್ನ ವರ್ಚಸ್ವವನ್ನು ನೆಲೆಗೊಳಿಸಬೇಕೆಂದು ಅವನ ಹಂಚಿಕೆಯಿರುವದು. ಇಂತಹ ಸ್ಥಿತಿಯಲ್ಲಿ ನಾವು ಅವನನ್ನು ಉಪೇಕ್ಷಿಸುತ್ತಹೋದರೆ, ಮುಂದೆ ಅವನು ಬಲಿಷ್ಠನಾಗಿ ಜಯಿಸಲ ಸಾಧ್ಯನಾಗಬಹುದು. ರಾಜಧಾನಿಯ ರಕ್ಷಣೆಗಾಗಿ ತಕ್ಕಷ್ಟು ಸೈನ್ಯವಿರಿಸಿ, ದಂಡ ಯಾತ್ರೆಯನ್ನು ಮಾಡುವದೇ ಒಳಿತು. ಮಾರಸಿಂಹನ ಪಕ್ಷದ ಜನರು ಅವನನ್ನು ಕೂಡುವದಕ್ಕಾಗಿ ಧಾವಿಸುವರಲ್ಲದೆ ರಾಜಧಾನಿಯ ಕಡೆಗೆ ಎಂದೂ ಬರಲಾರರು. ಕುಂಡಿನಾಡಿನ ಕಾರ್ತವೀರ್ಯನೂ, ಸವದತ್ತಿಯ ಶಾಂತಿವರ್ಮನೂ, ಕಿಸುಕಾಡು ಬೆಳ್ವಳದ ಅರಿಕೇಸರಿ-ಭೀಮರಸರೂ ತಿಳಿಸಿದಾಗ ಸೈನ್ಯವನ್ನು ತೆಗೆದುಕೊಂಡು ಬರುವರು. ಉತ್ತರಕೊಂಕಣದ ಅಪರಾಜಿತ, ಸೇವುಣದ ಭಿಲ್ಲಮ ಮೊದಲಾದ ಕೆಲವು ಜನ ಮಾಂಡಲಿಕರು ರಾಷ್ಟ್ರಕೂಟ ಇಂದ್ರನ ಪಕ್ಷವನ್ನು ವಹಿಸಿರುವರು. ಈ ಅಲ್ಪ ಸಂಖ್ಯಾಕರು ನಮ್ಮ ಮಹಾಬಲಕ್ಕೆ ಈಡಾಗಲಾರರು. ಮಾರಸಿಂಹನು ಸಾಹಸಿಗನಿರುವನಲ್ಲದೆ ಚಾಣಾಕ್ಷನಿರುವನು. ರಾಷ್ಟ್ರಕೂಟ ರಾಜ್ಯವನ್ನು ನುಂಗಿದವರ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕಾಗಿ ತನ್ನ ಪ್ರಯತ್ನವಿರುವದೆಂದು ಹೇಳುತ್ತ ಅವನು ತನ್ನ ಬಲವನ್ನು ಬೆಳಿಸಿಕೊಳ್ಳತೊಡಗಿರುವನು. ಈ ಸಂಧಿಯಲ್ಲಿ ನಾವು ತಟಸ್ಥರಾಗಿ ಕುಳಿತುಕೊಂಡರೆ ಅನರ್ಥವಾಗುವದೆಂಬದರಲ್ಲಿ ಸಂದೇಹವಿಲ್ಲ."

ತೈಲಪದೇವನು ಹೀಗೆ ಹೇಳುತ್ತಿರುವಾಗ ಪ್ರತಿಹಾರಿಯು ಬಂದು ಅವನಿಗೆ ನಮಸ್ಕಾರಮಾಡಿ—"ಜಿಯಾ, ಸವದತ್ತಿಯ ಶಾಂತಿವರ್ಮರಿಂದ ದೂತನು ಬಂದಿರುವನು" ಎಂದು ಹೇಳಲು ಅವನನ್ನು ಒಳಗೆ ಕಳಿಸುವದಕ್ಕಾಗಿ ತೈಲಪದೇವನು ಆಜ್ಞಾಪಿಸಿದನು ಅನಂತರದಲ್ಲಿ ಸವದತ್ತಿಯ ದೂತನು ಮಂತ್ರಣಾಗಾರವನ್ನು ಪ್ರವೇಶಿಸಿ, ತೈಲಪದೇವನಿಗೆ ನೆಲಮುಟ್ಟಿ ವಂದನೆಗಳನ್ನರ್ಪಿಸಿ, ಒಂದು ಪತ್ರವನ್ನು ಅವನ ಕಡೆಗೆ ಕೊಟ್ಟನು. ದಕ್ಷಿಣ ಕರ್ನಾಟಕದಲ್ಲಿ ಮಾರಸಿಂಹನ ಉಬ್ಬಾಳುತನವು ಮಿತಿಮೀರಿರುವದೆಂದೂ, ಅವನನ್ನು ನಿಗ್ರಹಿಸದಿದ್ದರೆ ಸಾಮ್ರಾಜ್ಯದಲ್ಲಿ ಎರಡು ಪಂಗಡಗಳಾಗುವವೆಂದೂ ಶಾಂತಿವರ್ಮನು ಪತ್ರದಲ್ಲಿ ಬರೆದಿದ್ದನು. ಪತ್ರವನ್ನೋದಿದ ಮೇಲೆ ತೈಲಪದೇವನು ಎಲ್ಲ ಸಂಗತಿಗಳನ್ನು ಮಂತ್ರಿ ಸೇನಾಪತಿಗಳಿಗೆ ತಿಳಿಸಿದನು. ಅನಂತರದಲ್ಲಿ ಅವನು—"ಸೇನಾಪತಿಗಳೆ, ಮಾರಸಿಂಹನ ಮೇಲೆ ಬೇಗನೆ ದಂಡೆತ್ತಿ ಹೋಗುವ ಆವಶ್ಯಕತೆಯಿರುವದು. ನೀವು ಸೈನ್ಯವನ್ನು ಸಜ್ಜುಗೊಳಿಸಿ ಪ್ರಯಾಣದ ಸಿದ್ಧತೆಯಲ್ಲಿರತಕ್ಕದ್ದು." ಎಂದು ಹೇಳಿ, ಮಹಾಮಂತ್ರಿಯನ್ನು ಕುರಿತು—"ಮುದ್ದಣರೆ, ನೀವು ಎಲ್ಲ ಮಂಡಲೇಶ್ವರರಿಗೆ ಇಂದೇ ಪತ್ರಗಳನ್ನು ಕಳುಹಿಸಿರಿ. ಸವದತ್ತಿಯಲ್ಲಿ ವಸತಿ ಮಾಡಿದಾಗ ಎಲ್ಲರೂ ಕೂಡಬೇಕೆಂದು ಪತ್ರದಲ್ಲಿ ಕರಣಿಕರಿಂದ ಸ್ಪಷ್ಟವಾಗಿ ಬರೆಯಿಸಿರಿ."

ಮುಸ್ತಣಮಂತ್ರಿಯು ತ್ರೈಲಪದೇವನ ಆಜ್ಞೆಯ ಮೇರೆಗೆ ಕದಂಬಲಿಗೆಯ ಜಾತರಸ, ಅರಿಕೇಸರಿ, ಕಾರ್ತವೀರ್ಯ ಮೊದಲಾದ ಮಹಾಮಂಡಲೇಶ್ವರರಿಗೆ ಕರಣಿಕರಿಂದ ಪತ್ರಬರೆಯಿಸಿ ಸೇವಕರೊಡನೆ ಕಳುಹಿಸಿದನು. ಅನಂತರದಲ್ಲಿ ತ್ರೈಲಪದೇವನು ಒಬ್ಬ ಸೇವಕನನ್ನು ಕರೆದು:—"ಗುಪ್ತಚರರ ಅಧಿಕಾರಿಗಳಾದ ದುರ್ಗಾನಾಥರಿಗೆ ಬರಹೇಳು. ಅವರು ಪ್ರಯಾಣಸಿದ್ಧತೆಯಲ್ಲಿರಬಹುದು. ಒಂದು ವೇಳೆ ಇಷ್ಟರಲ್ಲಿ ಅವರು ರಾಜಧಾನಿಯಿಂದ ಹೊರಟುಹೋಗಿದ್ದರೆ, ಅವರನ್ನು ಕರೆತರುವದಕ್ಕಾಗಿ ಒಂಟೆಯ ಸ್ವಾರನನ್ನು ಕಳುಹಿಸು"

ಸೇವಕನು ಹೊರಟುಹೋದ ಮೇಲೆ ರಾಮನಾಥ ಮಂತ್ರಿಯು ತ್ರೈಲಪದೇವನನ್ನು ಕುರಿತು—"ಮಹಾರಾಜರೆ, ಮಾರಸಿಂಹನನ್ನು ಪರಾಭವಗೊಳಿಸಬೇಕಾದರೆ ಒಳಿತಾಗಿ ಸಿದ್ಧತೆಯನ್ನು ಮಾಡಿಕೊಳ್ಳಬೇಕಾಗುವದು. ಈಗ ಅವನು ಮೊದಲಿನ ಮಾರಸಿಂಹನಲ್ಲ. ಅವನ ಬಣವು ಚನ್ನಾಗಿ ಬಲಿತಂತೆ ಕಾಣುವದು. ಚಾಲುಕ್ಯಸೈನ್ಯವು ಮಾನ್ಯಖೇಟದಿಂದ ಹೊರಟಿರುವದೆಂಬ ಸುದ್ದಿಯು ತಿಳಿದೊಡನೆಯೆ ಅವನು ಅಪರಾಜಿತ-ಭಿಲ್ಲಮ ಮೊದಲಾದ ಮಹಾಸಾಮಂತರನ್ನು ಸಹಾಯಕ್ಕಾಗಿ ಕರೆಯಿಸುವನು. ಅನೇಕ ಬಗೆಯ ಯುಕ್ತಿಪ್ರಯುಕ್ತಿಗಳಿಂದ ಮಾರಸಿಂಹನಿಗೆ ಅವರ ಸಹಾಯಪ್ರಾಪ್ತವಾಗದಂತೆ ಮಾಡಿಸತಕ್ಕದು. ಅನೇಕ ವಿಧದ ಕಾರಸ್ಥಾನಗಳಿಂದ ವಿಜಯಶ್ರೀಯನ್ನು ಸುಲಭವಾಗಿ ವಶಪಡಿಸಿಕೊಳ್ಳುವದರಲ್ಲಿಯೆ ನಿಜವಾದ ರಾಜಕಾರಣದ ಮರ್ಮವಿರುವದು."

"ಕಾರಸ್ಥಾನದಿಂದ ಕಾರ್ಯಸಿದ್ಧಿ ಮಾಡಿಕೊಳ್ಳಬೇಕೆಂದೇ ದುರ್ಗಾನಾಥರನ್ನು ಕರೆಯಿಸಿರುವೆನು. ದುರ್ಗಾನಾಥರು ಅದ್ವಿತೀಯ ಬುದ್ಧಿಕೌಶಲ್ಯದವರಿರುವರು. ಅವರು ಎಂತಹ ಕಾರ್ಯಗಳನ್ನಾದರೂ ಅನಾಯಾಸವಾಗಿ ನೆರವೇರಿಸುವರು"

"ದುರ್ಗಾನಾಥರೇನು ಸಾಮಾನ್ಯರಲ್ಲ. ವಿಲಕ್ಷಣ ಕಾರಸ್ಥಾನದಿಂದ ಮಂಗಳೀಶ ಮಹಾರಾಜರನ್ನು ನಾಶಗೊಳಿಸಿ, ಪುಲಕೇಶಿ ಮಹಾರಾಜರಿಗೆ ಸಾಮ್ರಾಜ್ಯಸಿಂಹಾಸನವನ್ನು ದೊರಕಿಸಿಕೊಟ್ಟ ವೀರಸೇನ ಮಂತ್ರಿಗಳ ವಂಶದಲ್ಲಿ ಅವರು ಜನಿಸಿರುವರು"

"ರಾಮನಾಥರೆ, ದುರ್ಗಾನಾಥರು ಮಂತ್ರಿಯ ಕೆಲಸವನ್ನು ನಡೆಯಿಸುವಂತಹ ಕರ್ತೃತ್ವಶಕ್ತಿಯುರಿರುವರು. ಗುಪ್ತಚರರ ಮೇಲಧಿಕಾರದ ಸ್ಥಳದಲ್ಲಿ ನಿಷ್ಣಾತರಾದವರು ಇನ್ನೂ ದೊರೆಯದ್ದರಿಂದ ಅವರನ್ನು ಆ ಕೆಲಸದ ಮೇಲೆ ನಿಯಮಿಸಿರುವೆನು. ದುರ್ಗಾನಾಥರ ಪೂರ್ವಜರು ಎಂತಹ ಪ್ರಸಂಗಗಳಲ್ಲಿಯೂ ಚಾಲುಕ್ಯರನ್ನು ಬಿಡಲಿಲ್ಲ. ಸತ್ಯಸಾಮ್ರಾಟ ಸತ್ಯವರ್ಮರ ವಂಶಜರಾದ ನಿಮ್ಮ ಮನೆತನದವರೂ ಅದೇ ಬಗೆಯಾಗಿ ಏಕನಿಷ್ಠೆಯಿಂದ ನಡೆದಿರುವರು."

ತೈಲಪದೇವನು ಹೀಗೆ ಮಾತಾಡುವಷ್ಟರಲ್ಲಿ ದುರ್ಗಾನಾಥನು ವಿಚಾರ ಗೃಹವನ್ನು ಪ್ರವೇಶಿಸಿ:—"ಮಹಾರಾಜರೇ, ಒಳ್ಳೆಯ ಅವಸರದಿಂದ ಕರೆಯಿಸೋಣವಾಯಿತು? ಇನ್ನು ಅರ್ಧಗಳಿಗೆಯಲ್ಲಿ ನಾನು ಮಾನ್ಯಖೇಟವನ್ನು ಬಿಡುತ್ತಿದ್ದೆನು."

"ನೀವು ಎಲ್ಲಿಗೆ ಪ್ರಯಾಣ ಮಾಡುತ್ತಿದ್ದಿರಿ?"

"ಬನವಾಸಿ ಪ್ರಾಂತಕ್ಕೆ."

"ನಾವೂ ಅತ್ತ ಕಡೆಗೆ ಹೊರಡಬೇಕಾಗಿರುವದು. ಮಾರಸಿಂಹನೊಡನೆ ಮಾಡಬೇಕಾದ ಕಾಳಗದ ಸಮಯದಲ್ಲಿ ನೀವಿರುವದು ಅವಶ್ಯವೆನಿಸಿದ್ದರಿಂದ ಕರೆಯಿಸಿರುವೆನು. ನೀವು ನಮ್ಮ ಸಂಗಡ ಪ್ರಯಾಣಮಾಡತಕ್ಕದ್ದು. ಹಾನುಂಗಲ್ಲಿಗೆ ಹೋದ ಮೇಲೆ ನಿಮಗೆ ಕೆಲಸಗಳನ್ನೊಪ್ಪಿಸುವೆನು. ನೀವು ನಿಮ್ಮೊಡನೆ ನುರಿತ ಗುಪ್ತಚರರನ್ನು ತೆಗೆದುಕೊಳ್ಳಿರಿ."

"ಮಹದಾಜ್ಞೆ" ಎಂದು ನುಡಿದು ದುರ್ಗಾನಾಥನು ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ತೈಲಪದೇವನು ಬಾರಪ್ಪನನ್ನು ಕುರಿತು—"ಸೇನಾಪತಿಗಳೇ, ನಾನು ಈ ಸಾರೆಯ ದಂಡಯಾತ್ರೆಗೆ ಸಿದ್ಧಸೇನ ಸೇನಾಪತಿಗಳನ್ನು ಕರೆದೊಯ್ಯುವೆನು. ನೀವು ರಾಜಧಾನಿಯನ್ನು ಒಳ್ಳೆಯ ಜಾಗ್ರತೆಯಿಂದ ರಕ್ಷಿಸತಕ್ಕದ್ದು. ನಮಗೆ ಇನ್ನೊಬ್ಬ ಪ್ರಬಲನಾದ ವೈರಿಯಿರುವನು. ಪರಮಾರ ಮುಂಜರಾಜನು ಕರ್ನಾಟಕದ ಮೇಲೆ ಕಣ್ಣಿಟ್ಟಿರುವನು. ಅವನು ಎಂತಹ ವೇಳೆಯಲ್ಲಿ ದಂಡೆತ್ತಿಬರುವನೆಂಬದರ ನಿಯಮವಿಲ್ಲ. ನಾವು ದಂಡೆತ್ತಿಹೊರಟ ವಾರ್ತೆಯನ್ನು ಕೇಳಿದೊಡನೆಯೆ ಅವನು ಇಲ್ಲಿಗೆ ದಂಡೆತ್ತಿ ಬರಬಹುದಾಗಿದೆ. ನೀವು ದೂರದವರೆಗೆ ಗುಪ್ತಚರರನ್ನಿರಿಸಿ ಶತ್ರುಗಳ ಸುಳಿವನ್ನು ತಿಳಿದುಕೊಳ್ಳುತ್ತಿರಬೇಕು. ಶತ್ರುಗಳ ದಾಳಿಯು ಬರುವ ಲಕ್ಷಣವು ತೋರಿದ ಕೂಡಲೆ ನಮಗೆ ಸುದ್ದಿಯನ್ನು ಹಚ್ಚತಕ್ಕದ್ದು. ಈ ಕಾರ್ಯದಲ್ಲಿ ತಿಲಾಂಶವಾದರೂ ಉಪೇಕ್ಷೆಮಾಡಲಾಗದು. ನಿಮಗೆ ಇನ್ನೊಂದು ವಿಷಯವನ್ನು ತಿಳಿಸುವದಿರುವದು. ಅದೇನಂದರೆ, ಕುಸುಮಕುಮಾರಿಯು ಮುಂಜರಾಜನಲ್ಲಿ ಪ್ರಣಯವುಳ್ಳವಳಾಗಿರುವಳು. ಅವಳು ಇಲ್ಲಿಂದ ಪಾರಾಗಿ ಹೋಗಲಿಕ್ಕೆ ನೀವು ಅವಳ ಮಂದಿರದ ಸುತ್ತುಮುತ್ತು ಬಿಗಿಯಾದ ಕಾವಲಿರಿಸತಕ್ಕದ್ದು. ಕಾವಲು ಅತ್ಯಂತ ಗುಪ್ತರೀತಿಯಲ್ಲಿರಬೇಕು. ತಾನು ಬಂಧನೆಯಲ್ಲಿರುವನೆಂಬದರ ಕಲ್ಪನೆಯು ಕುಸುಮಕುಮಾರಿಯ ಮನಸಿನಲ್ಲಿ ಹುಟ್ಟಬಾರದು. ಅವಳಿಂದ ಗುಪ್ತಚರರು ಧಾರಾನಗರಿಗೆ ಹೋಗುವ ಸಂಭವವಿರುವದು. ಯಾರಾದರೂ ಗುಪ್ತಚರರು ನಿಮ್ಮ ಕಾವಲುಗಾರರ ದೃಷ್ಟಿಗೆ ಬಿದ್ದರೆ ಅವರನ್ನು ಸೆರೆಮನೆಯಲ್ಲಿರಿಸುವ ವ್ಯವಸ್ಥೆಯಾಗಬೇಕು" ಎಂದು ತೈಲಪದೇವನು ಬಾರಪ್ಪನಿಗೆ ಹೇಳಿದನು. ಮುಂದೆ ಕೆಲವು ವೇಳೆಯ ವರೆಗೆ ದಂಡಯಾತ್ರೆಯ ವಿಷಯವಾಗಿ ವಾದವಿವಾದ ನಡೆದ ಮೇಲೆ ಸಭೆಯು ವಿಸರ್ಜನೆಯಾಯಿತು.

---

## ಅರ್ಜುನಸಂನ್ಯಾಸಿ!

ಪರಮಾರ ವಾಕ್ಪತಿ ಮುಂಜರಾಜನನ್ನು ವರಿಸುವೆನೆಂದು ಕುಸುಮಕುಮಾರಿಯು ಹಟಹಿಡಿದಾಗಿನಿಂದ ರಾಜಪರಿವಾರವೆಲ್ಲವು ಅವಳ ಮೇಲೆ ಕ್ಷೋಭೆಗೊಂಡಿತ್ತು. ತೈಲಪದೇವ, ಜಾಕಲದೇವಿ, ಬೊಂಥಾದೇವಿ ಮೊದಲಾದವರು ಕುಸುಮಕುಮಾರಿಯ ಮನಸ್ಸನ್ನು ತಿರುಗಿಸುವದಕ್ಕೆ ಬಹುಪರಿಯಾಗಿ ಯತ್ನಿಸಿ, ಕಡೆಗೆ ನಿರಾಶರಾದರು. ವರಿಸಿದರೆ ಮುಂಜರಾಜನನ್ನೇ ವರಿಸುವೆನೆಂದೂ, ಇಲ್ಲದಿದ್ದರೆ ಆಮರಣವಾಗಿ ಕೌಮಾರ್ಯದಿಂದ ಬಾಳುವೆನೆಂದೂ ಅವಳು ತಾಯಿಗೂ ಅಣ್ಣನಿಗೂ ಸ್ಪಷ್ಟವಾಗಿ ಹೇಳಿಬಿಟ್ಟಿದ್ದಳು. ತಂಗಿಯ ಇಚ್ಛೆಯಂತೆ ಶತ್ರುವಾದ ಮುಂಜರಾಜನ ಮುಂದೆ ತಲೆಬಾಗಲಿಕ್ಕೆ ತೈಲಪದೇವನ ಮನಸ್ಸು ಒಪ್ಪದಾಗಿತ್ತು. ಕುಸುಮಕುಮಾರಿಯು ಅವಿವಾಹಿತಳಾಗಿ ಉಳಿದರೂ ಚಿಂತೆಯಿಲ್ಲ. ಅವಳನ್ನು ಅಸ್ಥಿವೈರಿಯಾದ ಮುಂಜರಾಜನಿಗೆ ಕೊಡಲಾರೆನೆಂದು ಅವನು ತನ್ನ ತಾಯಿಯಾದ ಬೊಂಥಾದೇವಿಯ ಮುಂದೆ ಸ್ಪಷ್ಟವಾಗಿ ಆಡಿ ತೋರಿಸಿದ್ದನು. ಮಗಳು ಮುಂಜರಾಜನನ್ನು ವರಿಸುವೆನೆಂದು ದೃಢನಿಶ್ಚಯ ಮಾಡಿದ್ದರಿಂದ ಬೊಂಥಾದೇವಿಯು ಮೊದಮೊದಲು ಅವಳ ಮೇಲೆ ಸಂತಾಪಗೊಂಡಿದ್ದಳು; ಬರಬರುತ್ತ ಅವಳ ಮಾತೃಹೃದಯವು ದ್ರವಿಸತೊಡಗಿತು. ಕುಸುಮಕುಮಾರಿಯು ಅವಳ ವಾತ್ಸಲ್ಯದ ಪುತ್ರಿಯಾಗಿದ್ದಳು. ಮಗಳ ಮನಸ್ಸಿನ ವಿರುದ್ಧವಾಗಿ ನಡೆದು, ಅವಳಿಗೆ ದುಃಖ ಕೊಡುವದೆಂದರೆ ಬೊಂಥಾದೇವಿಗೆ ಜೀವದ ಸುತ್ತುಬಂದಂತಾಯಿತು. ಆಗ ಅವಳು ಕುಸುಮಕುಮಾರಿಯನ್ನು ಮುಂಜರಾಜನಿಗೆ ಕೊಡುವದಕ್ಕಾಗಿ ತೈಲಪದೇವನಿಗೆ ಹೇಳಿದಳು. ದೃಢನಿಶ್ಚಯದವನೂ ಅಭಿಮಾನಿಯೂ ಆದ ತೈಲಪದೇವನು ತಾಯಿಯ ಮಾತುಗಳನ್ನು ಪೂರಾ ಅಲ್ಲಗಳೆದನು.

ತೈಲಪದೇವನು ಮಾರಸಿಂಹನ ಮೇಲೆ ದಂಡೆತ್ತಿ ಹೋಗುವಾಗ ರಾಜಧಾನಿಯ ರಕ್ಷಣೆಯ ಕಾರ್ಯವನ್ನು ಬಾರಪ್ಪ ಸೇನಾಪತಿಗೆ ವಹಿಸಿದ್ದನು. ಭಗ್ನಮನೋರಥಳಾದ ಕುಸುಮಕುಮಾರಿಯು ಏನಾದರೊಂದು ಕಾರಸ್ಥಾನ ಮಾಡಿ ರಾಜಧಾನಿಯಿಂದ ಹೊರಟು ಹೋಗಬಹುದೆಂದು ತಿಳಿದು, ತೈಲಪದೇವನು ಅವಳ ಮೇಲೆ ಗುಪ್ತರೀತಿಯಿಂದ ಕಾವಲಿರಿಸಬೇಕೆಂದು ಬಾರಪ್ಪನಿಗೆ ಆಜ್ಞಾಪಿಸಿದನು. ಬಾರಪ್ಪನು ಏಕನಿಷ್ಠ ಸೇವಕನೂ, ಕಾವಲುಗಾರರ ನಾಯಕನೂ ಆದ ಹಂಸನನ್ನು ಕುಸುಮಕುಮಾರಿಯ ಕಾವಲಿಗೆ ನಿಯಮಿಸಿದ್ದನು ಹಂಸನಾಯಕನು ಕರ್ತವ್ಯದಕ್ಷನೂ ಸ್ವಾಮಿನಿಷ್ಠನೂ ಆಗಿದ್ದನು. ಅವನು ತನ್ನ ಕೈಕೆಳಗಿನ ಸೇವಕರೊಂದಿಗೆ ಕಾವಲಿನ ಕೆಲಸವನ್ನು ಅತಿ ಗುಪ್ತವಾಗಿ ಮಾಡುತ್ತಿದ್ದನು.

ಕುಸುಮಕುಮಾರಿಯ ದಾಸಿಯಾದ ಪ್ರಭಾವತಿಯು ಹಂಸನಾಯಕನಲ್ಲಿ ಪ್ರಣಯವುಳ್ಳವಳಾಗಿದ್ದಳು. ಹಂಸನಾಯಕನಾದರೂ ಅವಳನ್ನು ಮನಸ್ಸಿನಿಂದ ಪ್ರೀತಿ

ಸುತ್ತಿದ್ದನು. ಪರಸ್ಪರರ ಪ್ರಣಯರಜ್ಜುವು ದಿನದಿನಕ್ಕೆ ಗಟ್ಟಿಮುಟ್ಟಾಗತೊಡಗಿತ್ತು. ಹೀಗಿದ್ದರೂ ಅವರು ತಮ್ಮ ಕರ್ತವ್ಯವನ್ನು ಮಾಡುತ್ತಿರುವಾಗ ಮಿಕ್ಕ ಸಂಗತಿಗಳನ್ನು ಪೂರಾ ದುರ್ಲಕ್ಷಿಸುತ್ತಿದ್ದರು. ತನ್ನ ಒಡತಿಯು ಕಾರಸ್ಥಾನವೇನಿರುವದೆಂಬದನ್ನು ಪ್ರಭಾವತಿಯು ತನ್ನ ಹೃದಯೇಶ್ವರನ ಮುಂದೆ ಹೇಳುತ್ತಿದ್ದಿಲ್ಲ, ಹಂಸನಾಯಕ ನಾದರೂ ತನ್ನ ಗುಪ್ತ ಕಾರ್ಯದ ಗಂಧವಾರ್ತೆಯು ತನ್ನ ಹೃದಯದೇವತೆಗೆ ತಿಳಿಯ ದಂತೆ ಜಾಗ್ರತೆಯಿಂದ ವರ್ತಿಸುತ್ತಿದ್ದನು. ಅವರಿಬ್ಬರಲ್ಲಿಯ ಈ ಅಪರೂಪವಾದ ಗುಣಗಳನ್ನು ನೋಡಿ ಜನರು ವಿಸ್ಮಿತರಾಗುತ್ತಿದ್ದರು. ತೈಲಪದೇವನಾದರೂ ಅವರ ವಿಷಯಕ್ಕೆ ಎಷ್ಟೋಸಾರೆ ಪ್ರಶಂಸೋದ್ಗಾರಗಳನ್ನು ತೆಗೆದಿದ್ದನು.

ಹಂಸನಾಯಕನು ಎಷ್ಟೋ ಗುಪ್ತವಾಗಿ ಕಾವಲಿರಿಸಿದ್ದರೂ ಕಾವಲಿನ ಗಂಧವಾರ್ತೆಯು ಕುಸುಮಕುಮಾರಿಗೆ ತಿಳಿಯದಿರಲಿಲ್ಲ. ಧೂರ್ತಳಾದ ಪ್ರಭಾವತಿಯು ಕಾವಲುಗಾರರ ಸುಳಿದಾಟದ ಮೇಲಿಂದ ನಿಜಸ್ಥಿತಿಯನ್ನು ಕಂಡುಹಿಡಿದು ತನ್ನ ಒಡತಿಗೆ ತಿಳಿಸಿದಳು ಈ ಸಂಗತಿಯನ್ನು ಕೇಳಿ ಕುಸುಮಕುಮಾರಿಗೆ ಬಹಳೇ ದುಃಖವಾಯಿತು. ರಾಜಭಗಿನಿಯಾದ ತಾನು ಒಬ್ಬ ಸೆರೆಯಾಳಿನ ಅವಸ್ಥೆಯನ್ನು ಹೊಂದಬೇಕಾಯಿತೆಂದು ಅವಳು ಕ್ಲೇಶಗೊಂಡಳು. ಆಗ ಅವಳು ನಿಜಸ್ಥಿತಿಯನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಪ್ರಭಾವತಿಯನ್ನು ಹಂಸನಾಯಕನ ಬಳಿಗ ಕಳುಹಿದಳು. ಏಕನಿಷ್ಠಸೇವಕನಾದ ತನ್ನ ಪ್ರಿಯಕರನು ರಹಸ್ಯದ ಸಂಗತಿಗಳನ್ನು ತಿಳಿಸಲಾರನೆಂಬ ನಂಬಿಗೆಯು ಪ್ರಭಾವತಿಗಿದ್ದರೂ, ಒಡತಿಯ ಆಜ್ಞೆಯನ್ನುಲ್ಲಂಘಿಸ ಲಾರದೆ ಹಂಸನಾಯಕನ ಬಳಿಗೆ ಬಂದಳು. ಆಗ ಅವಳು—"ನಾಯಕರ, ಇತ್ತೀಚಿಗೆ ಕುಸುಮಕುಮಾರಿ ದೇವಿಯವರ ಮಂದಿರದ ಸುತ್ತುಮುತ್ತು ಕಾವಲುಗಾರರ ಸುಳಿದಾಟವು ದೃಷ್ಟಿಗೋಚರವಾಗತೊಡಗಿದೆ. ಇದರ ಕಾರಣವೇನು?"

ಪ್ರಭಾವತಿಯ ಮಾತುಗಳನ್ನು ಕೇಳಿ ಹಂಸನಾಯಕನು ಬೆಚ್ಚಿಬಿದ್ದನು. ತಾನು ಒಳ್ಳೆಯ ಜಾಗ್ರತೆಯಿಂದ ಗುಪ್ತವಾಗಿರಿಸಿದ ಕಾವಲಿನ ಗಂಧವು ಚಾಣಾಕ್ಷರಾದ ರಾಜಕುಮಾರಿಗೂ ಪ್ರಭಾವತಿಗೂ ಗೊತ್ತಾಗಿರುವದನ್ನು ನೋಡಿ ಅವನು ಅಚ್ಚರಿಗೊಂಡನು. ಆದರೂ ಅವನು ಮನೋವಿಕಾರಗಳನ್ನು ಬಚ್ಚಿಟ್ಟು ಕೈಗಡದ ಅವಸಾನವನ್ನು ತೆಗೆದುಕೊಂಡು—"ಪ್ರಭೆ, ನೀನು ಇದನ್ನೇನುಕೇಳುವ? ಮಹಾರಾಜರು ದಂಡಯಾತ್ರೆಗೆ ತೆರಳಿರುವದರಿಂದ ರಾಜಧಾನಿಯ ರಕ್ಷಣೆಗಾಗಿ ಅಲ್ಲಲ್ಲಿ ಕಾವಲುಗಾರರು ನಿಯಮಿಸಲ್ಪಟ್ಟಿರುವರು. ಅರಮನೆಯ ಬಳಿಯಲ್ಲ ಉಳಿದ ಕಡೆಗಿಂತ ಬಿಗಿಯಾದ ಕಾವಲಿರಿಸುವದು ಯೋಗ್ಯವೆನಿಸಿದ್ದರಿಂದ ಇಲ್ಲಿ ಕಾವಲುಗಾರರ ಸಂಖ್ಯೆಯು ಉಳಿದ ಸ್ಥಳಗಳಿಗಿಂತ ಹೆಚ್ಚಾಗಿದೆ. ಇದರಲ್ಲಿ ಅಷ್ಟೊಂದು ವಿಸ್ಮಯವೇನು?"

"ವಿಸ್ಮಯಗೊಂಡು ಕೇಳಲಿಲ್ಲ. ಸ್ವಾಭಾವಿಕವಾಗಿ ಕಣ್ಣಿಗೆ ಬಿದ್ದ ಸಂಗತಿಯ ಬಗ್ಗೆ ಕೇಳಿದೆನು. ಬಾರಪ್ಪ ಸೇನಾಪತಿಗಳು ಕೋಟೆಕೊತ್ತಳಗಳನ್ನು ಒಳ್ಳೆಯ

ಎಚ್ಚರದಿಂದ ಕಾಯುತ್ತಿರುವಾಗ ಅರಮನೆ-ಅಂತಃಪುರಗಳ ಮೇಲೆ ಭದ್ರವಾಗಿ ಕಾವಲಿರಿಸಿದ್ದಲ್ಲದೆ, ಮನುಷ್ಯರ ಮೇಲೆಯೂ ಕಾವಲಿರಿಸಿದ ಲಕ್ಷಣವು ತೋರಿದ್ದರಿಂದ ವಿಚಾರಿಸಿದೆನು."

"ಮನುಷ್ಯರ ಮೇಲೆ ಕಾವಲಿರಿಸಲ್ಪಟ್ಟಿರುವದೆ? ಪ್ರಭೆ, ನೀನು ಚನ್ನಾಗಿ ಎಚ್ಚರಿರುವೆಯೊ? ಇಲ್ಲವೊ?"

"ಎಚ್ಚರಾಗಿಲ್ಲದಿದ್ದರೆ ಇಲ್ಲಿಯ ವರೆಗೆ ಹೇಗೆ ಬರುತ್ತಿದ್ದೆನು?"

"ಮನುಷ್ಯರ ಮೇಲೆ ಕಾವಲಿರಿಸಲ್ಪಟ್ಟಿದ್ದರೆ ನೀನು ಇಲ್ಲಿಗೆ ಹೇಗೆ ಬರುತ್ತಿದ್ದಿ?"

"ನನ್ನ ಮೇಲೆ ಕಾವಲಿಡಲಿಕ್ಕೆ ಕಾರಣವೇನು?"

"ಮತ್ತಾರ ಮೇಲೆ ಕಾವಲಿಡಲ್ಪಟ್ಟಿದೆ?"

"ಬೌದ್ಧವಿಹಾರದಲ್ಲಿ ಒಬ್ಬ ಸಂನ್ಯಾಸಿಗಳು ಆಗಮಿಸಿರುವರು. ಅವರು ಒಳ್ಳೆಯ ಯೋಗ್ಯತೆಯವರಿರುವರಂತೆ. ಅವರ ದರ್ಶನಕ್ಕೆ ಹೋಗಬೇಕೆಂದು ರಾಜಕುಮಾರಿಯವರು ಸಿದ್ಧರಾಗಿದ್ದರು. ಮಹಾರಾಜರ ಆಗಮನವಾಗುವ ವರೆಗೆ ರಾಜಮನೆತನದ ಯಾವ ಜನರೂ ರಾಜಧಾನಿಯ ಹೊರಗೆ ಹೋಗಕೂಡದೆಂಬ ರಾಜಾಜ್ಞೆಯಾಗಿರುವದೆಂದು ನೀವು ಅವರಿಗೆ ತಿಳಿಸಿದಿರಿ. ಇದರ ಅರ್ಥವೇನು?"

"ಸಾಧುಸಂತರ ಹಾಗು ಸಂನ್ಯಾಸಿಗಳ ದರ್ಶನದ ಅವಶ್ಯಕತೆಯು ಬೊಂಥಾದೇವಿಯವರಿಗುಂಟು. ಅವರು ಇಷ್ಟರಲ್ಲ ಎರಡು ಮೂರು ಸಾರೆ ಸಂತದರ್ಶನ ತೆಗೆದುಕೊಂಡಿರುವರು; ಇನ್ನು ಬೇಕಾದಷ್ಟು ಸಾರೆ ಹೋದರೂ ಅವರಿಗೆ ಪ್ರತಿಬಂಧ ವಿಲ್ಲ. ಹದಿಮೂರು ಹದಿನಾಲ್ಕು ವರ್ಷ ವಯಸ್ಸಿನ ರಾಜಕುಮಾರಿಯವರಿಗೆ ದರ್ಶನದ ಆವಶ್ಯಕತೆಯೇನು? ಆ ಸಂನ್ಯಾಸಿಯು ತರುಣನಿರುವನಂತೆ. ಅವನು ನಿಜವಾದ ಸಂನ್ಯಾಸಿಯಾಗಿರದೆ ಅರ್ಜುನ ಸಂನ್ಯಾಸಿಯಾಗಿದ್ದರೆ ಹೇಗೆ?"

"ನಿಮ್ಮ ಗ್ರಹಿಕೆಯು ತಪ್ಪಾದದ್ದಿರುವದು. ಚಿಕ್ಕ ವಯಸ್ಸಿನವರು ಸಾಧು-ಸಂತರ ದರ್ಶನವನ್ನು ತೆಗೆದುಕೊಂಡರ ಪಾತಕವು ತಟ್ಟುತ್ತಿರುವದಿಲ್ಲ. ಅವರ ಸದ್ಬೋಧಾಮೃತ ಪಾನದಿಂದ ಮನುಷ್ಯ ದೇಹವು ಪುನೀತವಾಗುವದು. ಬೌದ್ಧ ವಿಹಾರಕ್ಕೆ ಬಂದ ಯತಿಗಳು ತರುಣರಿದ್ದರೂ ತಪಸ್ಸಿದ್ಧಿಯನ್ನು ಪಡೆದವರಿರುವ ರೆಂದು ಸರ್ವಾರ್ಥಸಿದ್ಧಿಯವರು ಹೇಳಿರುವರು. ಎಲ್ಲರೂ ಅರ್ಜುನ ಸಂನ್ಯಾಸಿಗಳಿ ರುವದಿಲ್ಲ. ಯತಿಗಳು ಕಪಟಿಗಳಾಗಿದ್ದರೆ ಧರ್ಮಘೋಷ-ಸರ್ವಾರ್ಥಸಿದ್ಧಿಯವರು ಅವರಿಗೆ ಸ್ಥಳಕೊಡತ್ತಿರಲಿಲ್ಲ."

"ಶಾಟಿಯವರು ಶಾಟಿಯವರನ್ನು ಕಂಡರೆ ಸಾಕು. ಯಾವ ಬಗೆಯ ವಿಚಾರಮಾಡದೆ ಮಬ್ಬಿಗೆ ಬೀಳುತ್ತಾರೆ. ಆ ಸಂಗತಿಯು ಏನೇ ಇರಲಿ. ಸದ್ಯದ ಪರಿಸ್ಥಿತಿಯಲ್ಲಿ ರಾಜಕುಮಾರಿಯವರನ್ನು ರಾಜಧಾನಿಯ ಹೊರಗೆ ಕಳುಹಿಸುವದು ಅಪ್ರಶಸ್ತವೆಂದು ನನಗೆ ತೊರತ್ತದೆ. ಬಾರಪ್ಪ ಸೇನಾಪತಿಗಳ ಅಪ್ಪಣೆಯಾದರೆ ಅವರು ಬೇಕಾದಲ್ಲಿ ಹೋಗಿಬರಲಿಕ್ಕೆ ನನ್ನದೇನೂ ಅಡ್ಡಿಯಿಲ್ಲ. ಮತ್ತೇನು ಹೇಳಲಿ?"

"ನೀವಾಡುವ ಮಾತುಗಳು ರಾಜಕುಮಾರಿಯವರ ಗೌರವಕ್ಕೆ ಕುಂದು ತರುವಂತಹವುಗಳಾಗಿರುವವು. ಅವರು ತಮ್ಮ ಸೇವಕರ ಬಳಿಯಲ್ಲಿ ಯಾಚಿಸಬೇಕೆ?"

"ಯಾಚಿಸುವದು ಬೇಡ, ಆಜ್ಞೆಮಾಡಲಿ. ಹಂಸನಾಯಕರನ್ನು ಅರ ಮನೆಯ ಕಾವಲಿನ ಕೆಲಸದಿಂದ ತೆಗೆದುಹಾಕಬೇಕೆಂದು ಅವರು ಸೇನಾಪತಿಗಳಿಗೆ ಆಜ್ಞೆಮಾಡಿದರೆ ಸಾಕು."

"ಇಷ್ಟೆಲ್ಲ ದ್ರಾವಿಡೀಪ್ರಾಣಾಯಾಮವನ್ನು ಯಾರು ಮಾಡಬೇಕು? ರಾಜ ಕುಮಾರಿಯವರು ತಾನೆರಡುತಾಸು ಬೌದ್ಧವಿಹಾರಕ್ಕೆ ಹೋದರೆ ಕೆಡುವದಾವದೂ ಅಷ್ಟರಲ್ಲಿಯೇ ಇರುವದು."

"ಅಷ್ಟು ಸಹ ಕೆಡದಂತೆ ಜಾಗ್ರತೆಯಿಂದಿರುವದು ನಿಜವಾದ ಸೇವಕನ ಧರ್ಮ ವಾಗಿರುವದು"

"ಪ್ರಿಯರೆ, ನೀವು ಬಹಳೇ ಹಟವಾದಿಗಳಾಗಿರುವಿರಿ"

"ಸೇವಾಧರ್ಮವೇ ಹಟಮಾರಿತನಕ್ಕೆ ಹಚ್ಚುವದು"

"ನೀವು ನನ್ನ ಮುಖವನ್ನು ನೋಡಿಯಾದರೂ ರಾಜಕುಮಾರಿಯವರಿಗೆ ಬೌದ್ಧವಿಹಾರಕ್ಕೆ ಹೋಗಗೊಡಿರಿ."

"ಪ್ರಿಯೆ, ನಿನ್ನ ಮೋರೆಯನ್ನು ನೋಡಿ ನಿನ್ನ ಮೇಲೆ ಉಪಕಾರಮಾಡಲಿಕ್ಕೆ ಮಾತ್ರ ನನಗೆ ಬರುವಂತಿದೆ. ಆ ಉಪಕಾರವಾದರೂ ನಿರ್ದಿಷ್ಟವಾದದ್ದಿರುವದು. ನಾನು ಈಗ ನಿನ್ನಲ್ಲಿ ಅನುರಾಗವನ್ನು ತಳೆದಿರುವದು ನಿನ್ನ ಮುಖವನ್ನು ನೋಡಿಯೇ. ನೀನು ನಿನ್ನ ಸೌಂದರ್ಯಲಾಭವನ್ನು ಅನ್ಯ ಕೆಲಸಗಳಲ್ಲಿ ಉಪ ಯೋಗಿಸಿಕೊಳ್ಳಬೇಡ ಹಾಗೆ ಮಾಡುವದು ನಿಜವಾದ ಸಾಧ್ವಿಯರ ಹಾಗು ಏಕನಿಷ್ಠ ಸೇವಕರ ಧರ್ಮವಲ್ಲ"

"ಬೊಂಧಾದೇವಿಯವರೊಡನೆ ಹೋಗಿ ದರ್ಶನ ತೆಗೆದುಕೊಂಡು ಬರಲಿಕ್ಕೆ ಆತಂಕವೇನಿರುವದು?"

"ನಾನು ಈ ವಿಷಯದಲ್ಲಿ ಯಾವ ಬಗೆಯ ಸಂಧಿಯನ್ನೂ ಕೊಡಲಾರೆನು."

"ನೀವು ಈ ಬಗೆಯಿಂದ ಉನ್ಮತ್ತರಂತೆ ನಡೆಯುವಿರೆಂಬದು ರಾಜಕುಮಾರಿ ಯವರಿಗೆ ತಿಳಿದರೆ ನಿಮ್ಮ ಗತಿಯು ಏನಾಗುವದು?"

"ಬೇಕಾದದ್ದಾಗಲಿ. ನಾನು ರಾಜಕುಮಾರಿಯವರ ಸೇವಕನಲ್ಲ; ಮಹಾರಾ ಜರ ಸೇವಕನಿರುವೆನು. ನೀನು ಮಾತ್ರ ರಾಜಕುಮಾರಿಯವರ ದಾಸಿಯಾಗಿರು ವದರಿಂದ ಅವರು ಕುಣಿಸಿದಂತೆ ಕುಣಿ. ಕರ್ತವ್ಯರತನಾಗಿರುವಾಗ ಬೇಕಾದಂತಹ ಗಂಡಾಂತರವೊದಗಿದರೂ ಅದಕ್ಕೆ ಸಿದ್ಧನಾಗಲಿಕ್ಕೆ ಬೇಕು."

"ನಾಥರೆ,"

"ಮತ್ತೇನು? ಪ್ರಿಯೆ?"

ಪ್ರಭಾವತಿಯು ತನ್ನ ಪ್ರಿಯಕರನ ಹೆಗಲ ಮೇಲೆ ಕೈಹಾಕಿ—"ಹೃದಯೇ

ಶ್ವರಾ, ನೀವು ಇಷ್ಟು ನಿಷ್ಟುರರಾಗಬೇಡಿರಿ. ನಿಮ್ಮ ಈ ವರ್ತನದಿಂದ ರಾಜಕುಮಾರಿಯವರ ಕೋಮಲವಾದ ಹೃದಯಕ್ಕೆ ಬಲವಾದ ಪೆಟ್ಟು ತಗಲುವದೆಂದು ಇಷ್ಟು ಬೇಡಿಕೊಳ್ಳತೊಡಗಿರುವೆನು. ಒಡಹುಟ್ಟಿದವನು ತನ್ನನ್ನು ಇಷ್ಟು ಬಂಧನದಲ್ಲಿರಿಸಿರುವನೆಂಬ ಸಂಗತಿಯು ಅವರಿಗೆ ಗೊತ್ತಾದರೆ ಹೇಗೆ? ಅವರು ಸಂತದರ್ಶನಕ್ಕಾಗಿ ಬಹಳೇ ಆತುರಗೊಂಡಿರುವರು"

"ಪ್ರಭೆ, ನೀನು ಇಷ್ಟು ಒತ್ತಾಯಪಡಬೇಕಾದರೆ ಸಾಧುಸಂದರ್ಶನದಲ್ಲಿ ಏನೋ ಗೂಢವಿರಲಿಕ್ಕೆಬೇಕೆಂದು ನನಗೆ ತಿಳಿಯುತ್ತದೆ ಒಣ ಉಸಾಬರಿಯು ನನಗೇಕೆಬೇಕು? ಈ ವಿಷಯದಲ್ಲಿ ಸೇನಾಪತಿಗಳನ್ನು ವಿಚಾರಿಸುವೆನು. ಅವರ ಆಜ್ಞೆಯಾದಂತೆ ವ್ಯವಸ್ಥೆಯಿಡುವೆನು. ಪ್ರಿಯೆ, ಸಾಮ್ರಾಜ್ಯದಲ್ಲಿ ಶತ್ರುಗಳ ಹಾವಳಿಯು ಬಹಳವಾಗಿದೆ. ಅದ್ದರಿಂದ ರಾಜಮನೆತನದ ತರುಣಿಯರನ್ನು ಹೊರಗೆ ಕಳಿಸುವದು ಯೋಗ್ಯವಲ್ಲೆಂದು ತಿಳಿದು ಮಹಾರಾಜರು ಅರಮನೆಯ ಮೇಲೆ ಬಿಗಿಯಾದ ಕಾವಲಿರಿಸಿರುವರು. ಇದರಲ್ಲಿ ಅವರ ಅನ್ಯಾಯವಿಲ್ಲ ಒಂದು ಪ್ರಸಂಗದ ಮೂಲಕ ಅವರ ಕೃತಿಯು ಜನರಿಗೆ ವಿಚಿತ್ರವಾಗುವ ಸಂಭವವಿದೆ. ರಾಜಕುಮಾರಿಯವರು ರಾಜಧಾನಿಯನ್ನು ತ್ಯಜಿಸಿ ಹೋಗಿ ಶತ್ರುವನ್ನು ವರಿಸಬಹುದೆಂಬ ಸಂಶಯದಿಂದ ಅರಮನೆಯ ಸುತ್ತು-ಮುತ್ತು ಭದ್ರವಾದ ಕಾವಲಿರಿಸಲ್ಪಟ್ಟಿರುವದೆಂದು ಜನರ ತಿಳುವಳಿಕೆಯಿರುವದು"

"ಜನರು ಏನಾದರೂ ಆಡಿಕೊಳ್ಳಲಿ. ನಿಮ್ಮ ಉದ್ದೇಶವು ಹಾಗಿಲ್ಲವಷ್ಟೇ?"

"ಪ್ರಿಯೆ, ಇದರಲ್ಲಿ ನನ್ನದೇನು ಉದ್ದೇಶವಿರಬೇಕು? ಒಡೆಯನ ಹೇಳಿಕೆ; ಬಡಿಗೆಯ ಮಾಟ."

"ನೀವು ಸೇನಾಪತಿಗಳನ್ನು ಕೇಳಿಕೊಂಡು ಬೇಗನೆ ಬನ್ನಿರಿ. ನೀವು ಬರುವವರೆಗೆ ನಾನು ಇಲ್ಲಿಯೆ ಇರುವೆನು."

"ರಾಣೀ ಸರಕಾರದ ಆಜ್ಞೆಯಂತೆ ನಡೆಯದಿದ್ದರೆ ಗತ್ಯಂತರವಿಲ್ಲ." ಎಂದು ನಗುತ್ತ ನುಡಿದು ಹಂಸನಾಯಕನು ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ಪ್ರಭಾವತಿಯು ನಾಯಕವಾಡಿಯಲ್ಲಿ ನಿಲ್ಲದೆ ಅರಮನೆಗೆ ಬಂದು ಬೊಂಥಾದೇವಿಗೆ ಭೆಟ್ಟಿಯಾದಳು. ಬೌದ್ಧವಿಹಾರದಲ್ಲಿ ಆಗಮಿಸಿದ ಪರಮಹಂಸರ ದರ್ಶನ ತೆಗೆದುಕೊಳ್ಳುವದಕ್ಕಾಗಿ ಕುಸುಮಕುಮಾರಿದೇವಿಯವರ ಇಚ್ಛೆಯಿರುವದೆಂದು ಪ್ರಭಾವತಿಯು ಅವಳಿಗೆ ಹೇಳಿದಳು. ಬೊಂಥಾದೇವಿಯು ಪರಮಹಂಸಯತಿಗಳನ್ನು ಕಣ್ಣಾರೆ ಕಂಡಿದ್ದಳು. ಯತಿಗಳು ದೊಡ್ಡ ಯೋಗ್ಯತೆಯವರಿರುವರೆಂಬದನ್ನಾದರೂ ಅವಳು ಮನವರಿಕೆ ಮಾಡಿಕೊಂಡಿದ್ದಳು. ತಪಗಟ್ಲೆ ತಪಮಾಡಿ ಸಿದ್ಧಿಯನ್ನು ಪಡೆದ ತಪಸ್ವಿಗಳು ತಪಃಪ್ರಭಾವದಿಂದ ಮಗಳ ತಾಪ-ಪಾಪಗಳು ನಾಶವಾಗಲೆಂಬ ಉದ್ದೇಶದಿಂದ ಬೊಂಥಾದೇವಿಯು ಅವಳಿಗೆ ಯತಿದರ್ಶನಕ್ಕಾಗಿ ಒಪ್ಪಿಗೆಯಿತ್ತಳು. ಮಗಳು ಬುದ್ಧವಿಹಾರಕ್ಕೆ ಹೊರಡುವಾಗ ಸಾಕಷ್ಟು ಮೈಗಾವಲು ಕೊಡಬೇಕೆಂದು ಅವಳು

ಬಾರಪ್ಪ ಸೇನಾಪತಿಗೆ ಆಜ್ಞೆ ಕಳುಹಿಸಿದಳು. ಇಷ್ಟೆಲ್ಲ ಕಾರ್ಯಗಳಾದದ್ದರಿಂದ ಪ್ರಭಾವತಿಗೆ ಆನಂದವಾಯಿತು. ಕೂಡಲೆ ಅವಳು ಅರಮನೆಯಿಂದ ಹೊರಟು ನಾಯಕವಾಡಿಗೆ ಬಂದಳು. ಅವಳು ಬಂದ ತುಸುವೇಳೆಯಲ್ಲಿ ಹಂಸನಾಯಕನೂ ಅಲ್ಲಿಗೆ ಬಂದನು. ಆಗ ಪ್ರಭಾವತಿಯು ಅವನನ್ನು ಕುರಿತು—"ಹೋದ ಕಾರ್ಯಕ್ಕೆ ಯಶವು ಲಭಿಸಿತೆ?"

"ರಾಜಕುಮಾರಿಯವರನ್ನು ಬುದ್ಧವಿಹಾರಕ್ಕೆ ಕಳಿಸುವದಕ್ಕಾಗಿ ಸೇನಾಪತಿಗಳು ಹಿಂದೆಮುಂದೆ ನೋಡಲಾರಂಭಿಸಿದ್ದರು. ಅಷ್ಟರಲ್ಲಿ ರಾಣಿಯವರಿಂದ ನಿರೂಪವು ಬಂತು."

"ರಾಣಿಯವರು ಏನೆಂದು ನಿರೋಪ ಕಳುಹಿಸಿದರು?" ಎಂದು ಪ್ರಭಾವತಿಯು ಅರಿಯದವರಂತೆ ಕೇಳಿದಳು.

"ಪರಮಹಂಸ ಯತಿಗಳ ದರ್ಶನಕ್ಕಾಗಿ ಕುಸುಮಕುಮಾರಿಯು ಹೊರಡುವಳು; ಅವಳ ವೈಗಾವಲಿಗೆ ಕೆಲವು ಸಶಸ್ತ್ರ ಸೇವಕರನ್ನು ಕಳುಹಿಸಬೇಕು. ಹೀಗೆ ಆಜ್ಞೆಯಾದ ಮೇಲೆ ಸೇನಾಪತಿಗಳ ಯೋಚನೆಯೆ ನಿಂತು ಹೋಯಿತು. ರಾಜಕುಮಾರಿಯವರೊಡನೆ ರಾಣಿಯವರು ಯತಿಸಂದರ್ಶನಕ್ಕೆ ಹೊರಡುವರೇನು?"

"ಹೋಗಬೇಕೆಂದು ಅನ್ನುತ್ತಿದ್ದರು" ಎಂದು ಪ್ರಭಾವತಿಯು ನುಡಿದು ನಸುನಗುತ್ತ:—"ಅರ್ಕಸಾಲಿಗನಿಂದಲೇ ಮುರುವು ಚುಚ್ಚಿಸಬೇಕೆನ್ನುವದು ಸುಳ್ಳಲ್ಲ. ಅರಮನೆಯ ರಕ್ಷಕರ ಅಧಿಕಾರಿಗಳೆಂಬ ಉದ್ದೇಶದಿಂದ ನಿಮ್ಮಲ್ಲಿ ಬಂದರೆ, ನೀವು ರಾಜನಿಗಿಂತಲೂ ಹೆಚ್ಚಿನ ಇಂಬು ಇಟ್ಟಿರಿ."

"ಪ್ರಭೆ, ನಾವು ಪ್ರಭುವಿನ ಆಜ್ಞೆಯ ಸೇವಕರು. ಕಟ್ಟಳೆಯನ್ನು ಮೀರಿ ಒಂದು ಹೆಜ್ಜೆಯನ್ನಾದರೂ ಹಿಂದೆ ಮುಂದೆ ಇಡಲು ನಮಗೆ ಅಧಿಕಾರವಿಲ್ಲ." ಎಂದು ನುಡಿದು ಹಂಸನಾಯಕನು ನಸುನಗುತ್ತ:—"ನಿನ್ನ ಕೆಲಸವನ್ನು ಮಾಡಿಕೊಟ್ಟಿರುವೆನು. ಇದಕ್ಕೆ ನನಗೆ ಬಹುಮಾನವನ್ನೇನು ಕೊಡುವೆ?"

"ನೀವು ಕೆಲಸ ಮಾಡಿದ್ದರೆ ಬಹುಮಾನವು ದೊರೆಯುತ್ತಿತ್ತು."

"ಹೇಗಾದರೂ ನಿನ್ನ ಕೆಲಸವು ನೆರವೇರಿದ ಬಗ್ಗೆ ನಿನಗೆ ಆನಂದವಾಗಿರುವದಲ್ಲವೆ?"

"ನನಗೇತರ ಆನಂದವು?"

"ಒಡತಿಯ ಕೆಲಸವನ್ನು ಮಾಡಿಕೊಟ್ಟದ್ದಕ್ಕಾಗಿ ಅವಳು ನಿನ್ನನ್ನು ಗೌರವಿಸುವದಿಲ್ಲವೆ? ಅವಳ ಸಂಭಾವನೆಯಿಂದ ನಿನಗೆ ಆನಂದವಾಗುವದಿಲ್ಲವೆ?"

"ಆದರೆ?"

"ಅದಕ್ಕಾಗಿ ನಾನು ಬಹುಮಾನವನ್ನು ಕೇಳುವೆನು. ನೀನು ಒಳ್ಳೆಯ ಮಾತಿನಿಂದ ಕೊಡದಿದ್ದರೆ ಇಕೊ!" ಎಂದು ಹಂಸನಾಯಕನು ನುಡಿದು ತನ್ನ ಪ್ರಿಯಕರೆಯನ್ನು ಬಳಿಯಲ್ಲಿ ಎಳೆದುಕೊಂಡು ಬಲವಾಗಿ ಚುಂಬಿಸಿ—"ಹೀಗೆ

ನಾನೇ ಬಹುಮಾನ ತೆಗೆದುಕೊಳ್ಳುವೆನು."

"ಅಪ್ಪಯ್ಯಾ!" ಎಂದು ಪ್ರಭಾವತಿಯು ತನ್ನ ಹೃದಯನಾಥನಿಂದ ದೂರ ಸರಿದು—"ಇದೆಂತಹ ಬಲಾತ್ಕಾರವೆ?"

"ಬಲಾತ್ಕಾರವಲ್ಲ; ಸತ್ಕಾರವು" ಎಂದು ಹಂಸನಾಯಕನು ನುಡಿದು ಮೆಲ್ಲನೆ ನಕ್ಕನು. ಪ್ರಭಾವತಿಯು ಅಲ್ಲಿಂದ ಜಾರಿಕೊಂಡು ಕುಸುಮಕುಮಾರಿಯ ವಿಲಾಸ ಮಂದಿರಕ್ಕೆ ಬಂದಳು.

ಪ್ರಭಾವತಿಯು ಬಂದಾಗ ಕುಸುಮಕುಮಾರಿಯು ಬೌದ್ಧ ತಾಪಸಿಯಾದ ಸರ್ವಾರ್ಥ ಸಿದ್ಧಿಯೊಡನೆ ಮಾತನಾಡುತ್ತ ಕುಳಿತಿದ್ದಳು. ಪ್ರಭಾವತಿಯು ಬಂದ ಕೂಡಲೆ ಅವಳು ಆತುರತೆಯಿಂದ—"ಪ್ರಭೆ, ಹಂಸನಾಯಕನು ಏನು ಹೇಳಿದನು."

"ದೇವಿ, ನಾಯಕರು ಬಲು ಬಿಗುವಿನವರು. ಅವರಿಂದ ವರವನ್ನು ದೊರಕಿಸಬೇಕಾದರೆ ಸಾಕು ಸಾಕಾಗಿ ಹೋಯಿತು. ನಮ್ಮ ತರ್ಕದಂತೆ ವಸ್ತುಸ್ಥಿತಿಯಿರುವದು ನಿಜವು. ಮಹಾರಾಜರು ನಿಮ್ಮ ಮೇಲೆ ನಾಯಕರನ್ನು ಕಾವಲಾಗಿರಿಸಲಿಕ್ಕೆ ಬಾರಪ್ಪಸೇನಾಪತಿಗಳಿಗೆ ಆಜ್ಞಾಪಿಸಿರುವರಂತೆ!"

"ಪ್ರಭೆ, ನಾನು ಒಬ್ಬ ಸೆರೆಯಾಳಿನ ಅವಸ್ಥೆಯನ್ನು ಹೊಂದಿದ ಹಾಗಾಯಿತು!" ಕುಸುಮಕುಮಾರಿಯು ನಿಟ್ಟುಸಿರು ಬಿಟ್ಟು—"ತಾಪಸಿಗಳೇ, ಪರಮಹಂಸರ ಸಂದರ್ಶನಕ್ಕೆ ಹೋಗೋಣ ನಡೆಯಿರಿ."

"ದೇವಿಯವರೆ," ಪ್ರಭಾವತಿಯು ಕುಸುಮ ಕುಮಾರಿಯನ್ನು ಕುರಿತು—"ಸೇನಾಪತಿಗಳ ಕಡೆಯಿಂದ ಸಶಸ್ತ್ರ ದೂತರು ಬರುವ ವರೆಗೆ ವಿಹಾರಕ್ಕೆ ತೆರಳಬಾರದೆಂದು ನಾಯಕರು ಹೇಳಿರುವರು."

"ಆಗಲಿ" ಎಂದು ಕುಸುಮಕುಮಾರಿಯು ನುಡಿಯುವಷ್ಟರಲ್ಲಿ ಜಾಕಲದೇವಿಯ ದಾಸಿಯಾದ ಮಾಲತಿಯು ಅಲ್ಲಿಗೆ ಬಂದು—"ಮಹಾರಾಣಿಯವರು ಪರಮಹಂಸರ ದರ್ಶನಕ್ಕಾಗಿ ಬರುವವರಿರುತ್ತಾರೆ. ನೀವು ಯಾವಾಗ ಹೊರಡುವಿರೆಂಬದನ್ನು ತಿಳಿಸಿದರೆ ಆ ವೇಳೆಗೆ ಅವರೂ ಬರುತ್ತಾರೆ."

ಮಾಲತಿಯ ಮಾತುಗಳನ್ನು ಕೇಳಿ ಸರ್ವಾರ್ಥಸಿದ್ಧಿಯ ಮನಸ್ಸು ಒಂದು ತರಹವಾಯಿತು. ಆಗ ಅವಳು ಮಾಲತಿಯನ್ನು ಕುರಿತು:—ಇನ್ನು ಎರಡು ಗಳಿಗೆಗಳ ಮೇಲೆ ಹೊರಡುವರೆಂದು ಮಹಾರಾಣಿಯವರಿಗೆ ಹೇಳು. ನಾವೇ ಅವರ ಮಂದಿರಕ್ಕೆ ಬರುತ್ತೇವೆ. ಅಲ್ಲಿಂದ ಎಲ್ಲರೂ ಕೂಡಿ ವಿಹಾರಕ್ಕೆ ಹೋಗೋಣ"

ಮಾಲತಿಯು ಅಲ್ಲಿಂದ ಹೊರಟು ಹೋದ ಮೇಲೆ ಸರ್ವಾರ್ಥಸಿದ್ಧಿಯು ಕುಸುಮ ಕುಮಾರಿಯನ್ನು ಕುರಿತು?—"ದೇವಿ, ಮಹಾರಾಣಿಯವರು ನಮ್ಮೊಡನೆ ಬರದಿದ್ದರೆ ಒಳಿತಾಗುವದು."

"ಅದೇಕೆ!" ಉತ್ಕಂಠೆಯಿಂದ ಕುಸುಮಕುಮಾರಿಯು ಕೇಳಿದಳು.

"ಕೆಲವು ರಹಸ್ಯದ ಮಾತುಗಳಿರುವವು. ನಿಮ್ಮ ದಾಸಿಯನ್ನು...."

"ತಾಪಸಿಯವರೆ, ನಾನು ಬೇರೆ, ನನ್ನ ದಾಸಿಯು ಬೇರೆ; ಹೀಗೆನೂ ಇರುವದಿಲ್ಲ. ನನ್ನ ಮುಂದೆ ಹೇಳುವಂತಹ ಮಾತುಗಳನ್ನು ಅವಳು ಕೇಳಲಿಕ್ಕೆ ಏನೂ ಅಡ್ಡಿಯಿಲ್ಲ"

"ಹಾಗಿದ್ದರೆ ಒಳಿತಾಯಿತು" ಎಂದು ಸರ್ವಾರ್ಥಸಿದ್ಧಿಯು 'ದೇವಿ, ಈಗ ವಿಹಾರಕ್ಕೆ ಬಂದ ಸಂನ್ಯಾಸಿಯನ್ನು ಯಾರೆಂದು ತಿಳಿದಿರುವಿರಿ.'

"ಅದು ನನಗೆ ತಿಳಿಯತು. ಅವರೊಬ್ಬ ಪರಮಹಂಸ ಸಂನ್ಯಾಸಿಗಳೆಂದು ನಿಮ್ಮಿಂದಲೇ ಕೇಳಿತಿಳಿದಿರುವೆನು."

"ಅವರು ಪರಮಹಂಸರಲ್ಲ! ನಿಮ್ಮ ರಾಜಹಂಸರು!!"

"ಹೀಗೆಂದರೇನು ತಾಪಸಿಯವರೆ? ಅವರು ಪರಮಹಂಸ ಸಂನ್ಯಾಸಿಗಳಾಗದಿದ್ದರೆ ಯಾರಿರುವರು?" ಕುಮಾರಿಯು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡಳು

"ಪರಮಹಂಸ ಸಂನ್ಯಾಸಿಗಳಾಗಿರದೆ ಅರ್ಜುನಸಂನ್ಯಾಸಿಗಳಾಗಿರುವರು!"

"ನನಗೆ ನಿಮ್ಮ ಮಾತಿನ ಅರ್ಥವಾಗಲೊಲ್ಲದು." ತಿಳಿಯದವಳಂತೆ ನಟಿಸಿದಳು.

"ಕುಸುಮಕುಮಾರಿದೇವಿ, ಅವರು ನಿಮ್ಮ ಹೃದಯಚಕೋರರಾದ ಪರಮಾರವಾಕ್ಪತಿ ಮುಂಜರಾಜರು!"

"ಏನು? ಸರ್ವಾರ್ಥಸಿದ್ಧಿಯವರೆ, ಅವರು ಮುಂಜಮಹಾರಾಜರೆ!" ಕುಸುಮಕುಮಾರಿಯು ಸಂಭ್ರಮದಿಂದಲೂ ವಿಸ್ಮಯದಿಂದಲೂ ಕುಳಿತ ಸ್ಥಳದಿಂದೆದ್ದು ನಿಂತು- "ನಿಜವಾಗಿ ಅವರು ನನ್ನ ಹೃದಯದೇವತೆಗಳಾದ ಮುಂಜಮಹಾರಾಜರೆ? ನೀವು ಉಪಹಾಸಕ್ಕಾಗಿ ಹೀಗೆ ಹೇಳುತ್ತಿರಲಿಕ್ಕಿಲ್ಲವಷ್ಟೆ?"

"ರಾಜಕುಮಾರಿಯವರೆ, ನಾನು ಎಂದೂ ಸುಳ್ಳಾಡಲಾರೆನು. ಮುಂಜರಾಜರು ನಿಮ್ಮ ಭೆಟ್ಟಿಗಾಗಿ ಸಂನ್ಯಾಸಿ ವೇಷಧಾರಣ ಮಾಡಿಕೊಂಡು ಬಂದಿರುವರು."

"ತಾಪಸಿಯವರೆ, ಮಹಾರಾಜರ ಭೆಟ್ಟಿಯು ಏಕಾಂತದಲ್ಲಾಗುವ ಆವಶ್ಯಕತೆಯಿತ್ತು."

"ನಾನೂ ಧರ್ಮಘೋಷರೂ ಪರಕೀಯರೆಂದು ನೀವು ಭಾವಿಸಬೇಡಿರಿ. ಕೇವಲ ನಿಮ್ಮ ಮೇಲಿನ ಅನುರಾಗಕ್ಕಾಗಿಯೆ ನಾವು ಯತ್ನಿಸುತ್ತಲಿರುವೆವು. ಹಾಗಿಲ್ಲದಿದ್ದರೆ ಸಂನ್ಯಾಸಿಗಳಾದ ನಮಗೆ ಈ ಉಪವ್ಯಾಪವೇಕೆಬೇಕಾಗಿತ್ತು?"

"ನೀವು ಪರಕೀಯರೆಂದು ನಾನು ತಿಳಿದಿಲ್ಲ. ಮಹಾರಾಜರೊಡನೆ ಮಾತನಾಡುವಾಗ ಜಾಕಲದೇವಿಯವರು ಇರುವದು ಯೋಗ್ಯವಾಗಲಿಕ್ಕಿಲ್ಲ."

"ನಿಮ್ಮ ಮಾತು ನಿಜವು. ಅವರನ್ನು ಬಿಟ್ಟು ಹೋಗುವದಕ್ಕೆ ಹಂಚಿಕೆಯನ್ನು ತೆಗೆಯಿರಿ."

"ಈ ಮಾತು ಸಾಧ್ಯವಿಲ್ಲ." ಎಂದು ಕುಸುಮಕುಮಾರಿಯು—"ಬಂದರೆ ಬರ

ಲೊಲ್ಲರೇಕೆ, ಅವರಿಗೆ ಸಂಶಯು ಬಾರದಂತೆ ಮಾತು ಕಥೆಗಳನ್ನಾಡಿದರಾಯಿತು." ಎಂದು ಮತ್ತೆ ಉತ್ಕಂಠೆಯಿಂದ:-"ಮಹಾರಾಜರು ನಿಮ್ಮ ಮುಂದೆ ಯಾವ ಯಾವ ಸಂಗತಿಗಳನ್ನು ಹೇಳಿರುವರು?"

"ತೈಲಪದೇವ ಮಹಾರಾಜರು ದಂಡಯಾತ್ರೆಗೆ ಹೋದ ಸಂಗತಿಯನ್ನು ಕೇಳಿ ಅವರು ಆಗಮಿಸಿರುವರು. ಈ ಸಂಧಿಯಲ್ಲಿ ನಿಮ್ಮನ್ನು ಕರೆದೊಯ್ಯುವದಕ್ಕೆ ಅನುಕೂಲವಿರುವದೆಂದು ಅವರ ಅಭಿಪ್ರಾಯವಿರುವದು. ಅವರು ತಮ್ಮ ಸಂಗಡಿಗರನ್ನು ರಾಜಧಾನಿಯ ಬಳಿಯ ಅರಣ್ಯದಲ್ಲಿರಿಸಿರುವರು. ಅವರ ಬಳಿಯಲ್ಲಿ ಇಬ್ಬರು ಶಿಷ್ಯರ ವೇಷದಿಂದ ಇರುತ್ತಾರೆ. ಮುಂಜರಾಜನೊಡನೆ ಹೋಗಲಿಕ್ಕೆ ಸಮ್ಮತಿಸುವಿರೇನು? ನೀವು ಈ ಸಮಯವನ್ನು ಹೋಗಗೊಡಬಾರದು. ತೈಲಪ ದೇವ ಮಹಾರಾಜರು ಶತ್ರುಗಳಾದ ಮುಂಜರಾಜರಿಗೆ ನಿಮ್ಮನ್ನು ಧಾರೆಯೆರೆದು ಕೊಡಲಾರರೆಂದು ಸ್ಪಷ್ಟವಾಗಿ ತೋರಲಾರಂಭಿಸಿದೆ. ಸುಭದ್ರೆಯು ಅರ್ಜುನನ ಹಿಂದೆ ಹೋದಂತೆ, ನೀವು ಈ ಅರ್ಜುನ ಸಂನ್ಯಾಸಿಗಳ ಹಿಂದೆ ಹೋದರೆ ನಿಮ್ಮ ಮನೋರಥವು ಪೂರ್ಣವಾಗುವದು. ಮುಂದೆ ಈ ಸಂಧಿಯು ದೊರೆಯಲಾರದು."

"ತಾಪಸಿಯವರೆ, ಬಂಧು-ಬಾಂಧವರಿಗೆ ಹೊರತಾಗಿ ಹೋಗುವದಕ್ಕೆ ಮನಸ್ಸು ಮಾಡಿದರೂ ಸುರಕ್ಷಿತವಾಗಿ ದಾಟಿಹೋಗಲಿಕ್ಕೆ ಬರುವಂತಿಲ್ಲ. ಇದಕ್ಕೆ ಉಪಾಯವೇನು? ಅಣ್ಣನ ಆಜ್ಞೆಯ ಮೇರೆಗೆ ನನ್ನ ಸುತ್ತಲೂ ಬಿಗಿಯಾದ ಕಾವಲಿರುವದು. ನಾನು ಈ ವ್ಯೂಹವನ್ನು ಹೇಗೆ ಭೇದಿಸಲಿ? ಮಹಾರಾಜರು ದಂಡೆತ್ತಿ ಬಂದಿದ್ದರೆ ಅನಾಯಾಸವಾಗಿ ಕಾರ್ಯಸಿದ್ಧಿಯಾಗುತ್ತಿತ್ತು. ಪರಾಕ್ರಮಿಗಳೆಂದು ಲಬ್ಧಪ್ರತಿಷ್ಠರಾದವರು ಹೀಗೆ ಕಳ್ಳತನದ ವ್ಯವಸಾಯವನ್ನು ಕೈಕೊಳ್ಳಬಾರದಾಗಿತ್ತು. ಕಳ್ಳತನ ಮಾಡಿಯಾದರೂ ಪಾರಾಗಿ ಹೋಗುವ ಸಾಮರ್ಥ್ಯವು ಈಗ ಅವರಲ್ಲಿಲ್ಲ. ಬುದ್ಧವಿಹಾರದಿಂದ ಸುತ್ತಲಿನ ವ್ಯೂಹವನ್ನು ಭೇದಿಸಿ, ನನ್ನನ್ನು ಕರೆದೊಯ್ಯುವಷ್ಟು ಸೇನಾಬಲವಾದರೂ ಅವರಲ್ಲಿರಲಿಕ್ಕಿಲ್ಲ. ಕುಸುಮಕುಮಾರಿ ಹರಣವಾರ್ತೆಯು ರಾಜಧಾನಿಗೆ ತಿಳಿದ ಮೇಲೆ ಸೇನಾಪತಿಯು ಸುಮ್ಮನೆ ಕುಳಿತು ಕೊಳ್ಳುವನೆ? ಬೆನ್ನಟ್ಟಿದ ಸೈನ್ಯವಾದರೂ ಪರಾಭವಗೊಳಿಸುವಷ್ಟು ಸೈನ್ಯವನ್ನು ತಂದಿದ್ದರೆ ಒಳಿತಾಗುತ್ತಿತ್ತು. ಮಹಾರಾಜರು ಅದೂರದರ್ಶಿಗಳಿರುವರೆಂದು ಇಷ್ಟರ ಮೇಲಿಂದ ಹೇಳಬಹುದು."

"ಗುಪ್ತರೀತಿಯಿಂದ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಅವರು ಹೆಚ್ಚಿಗೆ ಸೈನ್ಯವನ್ನು ತಂದಿಲ್ಲ. ಇಲ್ಲಿಯ ಪರಿಸ್ಥಿತಿಯು ಅವರಿಗೆ ಹೇಗೆ ಗೊತ್ತಾಗಬೇಕು? ನಿಮ್ಮ ಸುತ್ತು-ಮುತ್ತು ಬಿಗಿಯಾದ ಕಾವಲಿರುವದೆಂಬ ಸಂಗತಿಯು ನನಗೆ ಸಹ ಗೊತ್ತಿರುವದಿಲ್ಲ. ನೀವು ಏಕಾಂಗಿಗಳಾಗಿ ಬುದ್ಧವಿಹಾರಕ್ಕೆ ಬಂದ ಮೇಲೆ ಗೌಪ್ಯವಾಗಿ ಹೊರಟುಹೋಗಬೇಕೆಂಬ ಉದ್ದೇಶದಿಂದ ಅವರು ಅರ್ಜುನ ಸಂನ್ಯಾಸಿಗಳಾಗಿ ಬಂದಿರುವರು."

"ವೇಳೆಯು ಒದಗಿ ಬಂದಿಲ್ಲವೆಂಬಂತೆ ತೋರುವದು" ಎಂದು ಕುಸುಮ ಕುಮಾರಿಯು ನುಡಿದು ದೀರ್ಘನಿಶ್ವಾಸ ಬಿಟ್ಟಳು. ಆಗ ಪ್ರಭಾವತಿಯು ತನ್ನ ಒಡತಿಯನ್ನು ಕುರಿತು—"ದೇವಿಯವರೇ, ಪ್ರಯತ್ನ ಮಾಡುವದು ನಮ್ಮ ಕೆಲಸವು; ಫಲಕೊಡುವವನು ಪರಮಾತ್ಮನು. ಇಂದು ಮಹಾರಾಣಿಯವರು ಬಳಿಯಲ್ಲಿ ಬರುವದರಿಂದ ಹೆಚ್ಚಿನ ಮಾತುಕತೆಗಳೂ ಕಾರಸ್ಥಾನಗಳೂ ನಡೆಯಲಾರವು. ನಾಳಿನ ಪ್ರಸಂಗವು ಹೇಗೆ ಒದಗುವದೋ ನೋಡೋಣ."

ಪ್ರಭಾವತಿಯು ಹೀಗೆ ನುಡಿಯುವಷ್ಟರಲ್ಲಿ ಬಾರಪ್ಪಸೇನಾಪತಿಯ ಕಡೆಯಿಂದ ಸಶಸ್ತ್ರದೂತರು ಬಂದ ವಾರ್ತೆಯನ್ನು ದ್ವಾರಪಾಲಕನು ರಾಜಕುಮಾರಿಗೆ ತಿಳಿಸಿದ ಕೂಡಲೆ ಎಲ್ಲ ಜನರು ಅರ್ಜುನ ಸಂನ್ಯಾಸಿಯ ದರ್ಶನಕ್ಕಾಗಿ ವಿಲಾಸ ಮಂದಿರದಿಂದ ಪ್ರಯಾಣಬೆಳೆಸಿದರು.

---

## ಸೂರ್ಯಾಸ್ತ.

ಚಾಲುಕ್ಯ ಸೇನಾಸಾಗರವು ಮಾನ್ಯಖೇಟದಿಂದ ಹೊರಟು, ಸವದತ್ತಿಯ ಮಾರ್ಗವಾಗಿ ಹಾನುಂಗಲ್ಲಿನ ಬಳಿಯಲ್ಲಿ ತಳವೂರಿತು. ಕುಂಡಿನಾಡಿನ ಕಾರ್ತವೀರ್ಯ, ಶಾಂತಿವರ್ಮ, ಕದಂಬಲಿಗೆಯ ಜಾತರಸ, ಕಿಸುಕಾಡು ಬೆಳ್ವೊಳಗಳ ಅರಿಕೇಸರಿ ಮೊದಲಾದವರು ತಮ್ಮ ಸೈನ್ಯ ಸಹಿತ ತೈಲಪದೇವನನ್ನು ಕೂಡಿದರು. ನಿಜವಾಗಿ ವಿಚಾರಿಸಿದರೆ ಮಾರಸಿಂಹನನ್ನು ಪರಾಭವಗೊಳಿಸಲಿಕ್ಕೆ ತೈಲಪದೇವನಿಗೆ ಇಷ್ಟು ಸೈನ್ಯದ ಆವಶ್ಯಕತೆಯೇ ಇದ್ದಿಲ್ಲ. ಮಾರಸಿಂಹನನ್ನು ಅವನ ಸೈನ್ಯಸಹಿತವಾಗಿ ನಾಮಶೇಷಗೊಳಿಸಿ ನಿಶ್ಚಿಂತನಾಗಬೇಕೆಂಬ ಉದ್ದೇಶದಿಂದ ತೈಲಪದೇವನು ಅಪೂರ್ವ ಸೇನಾಸಿದ್ಧತೆ ಮಾಡಿಕೊಂಡಿದ್ದನು. ಸೇವುಣದ ಭಿಲ್ಲಮನೂ, ಉತ್ತರ ಕೊಂಕಣದ ಶಿಲಾಹಾರ ಮನೆತನದ ಅಪರಾಜಿತನೂ ಅತ್ಯಂತ ಬಲಾಢ್ಯರಿದ್ದರು. ಅವರ ಸೈನ್ಯಗಳಿನ್ನೂ ಬನವಾಸಿಗೆ ಬಂದಿರಲಿಲ್ಲ. ಮಾರಸಿಂಹನಿಗೆ ನೆರವಾಗುವದಕ್ಕಾಗಿ ಅವರು ಸಸೈನ್ಯರಾಗಿ ತಮ್ಮ ತಮ್ಮ ರಾಜಧಾನಿಗಳಿಂದ ಹೊರಟಿರುವರೆಂಬ ವಾರ್ತೆಯು ತೈಲಪದೇವನ ಕಿವಿಗೆ ಬಿದ್ದಿತ್ತು. ಯುಕ್ತಿಪ್ರಯುಕ್ತಿಗಳಿಂದ ಅವರ ಸಹಾಯವು ಮಾರಸಿಂಹನಿಗೊದಗದಂತೆ ವ್ಯವಸ್ಥೆ ಮಾಡಬೇಕೆಂದು ಅವನು ನಿರ್ಧರಿಸಿಕೊಂಡಿದ್ದನು. ಎಲ್ಲ ಕಾರಸ್ಥಾನಗಳು ಸುಲಭವಾಗಿ ಸಾಧ್ಯವಾಗಬೇಕೆಂಬ ಉದ್ದೇಶದಿಂದ ಅವನು ತಂತ್ರವಿಶಾರದನಾದ ದುರ್ಗಾನಾಥನನ್ನು ಬಳಿಯಲ್ಲಿ ಕರೆತಂದಿದ್ದನು.

ತೈಲಪದೇವನು ತನ್ನ ರಾಹುಟಿಯಲ್ಲಿ ಕುಳಿತುಕೊಂಡಿದ್ದನು. ಸಿದ್ಧಸೇನ ಸೇನಾಪತಿ, ಅರಿಕೇಸರಿ, ದುರ್ಗಾನಾಥ ಮೊದಲಾದವರು ಅವನ ಬಳಿಯಲ್ಲಿಯೇ

ಕುಳಿತಿದ್ದರು. ಶತ್ರುಗಳನ್ನು ಯಾವ ಯಾವ ಉಪಾಯಗಳಿಂದ ಹಣ್ಣಿಗೆ ತರಬೇಕೆಂಬದರ ಬಗ್ಗೆ ಅವರಲ್ಲಿ ವಾದವಿವಾದವು ನಡೆದಿತ್ತು. ಅಷ್ಟರಲ್ಲಿ ಚಾಲುಕ್ಯ ಭೀಮರಸನು ಇಬ್ಬರು ಕುದುರೆಯ ಸ್ವಾರರನ್ನು ಅಲ್ಲಿಗೆ ತಂದನು. ಅವರನ್ನು ನೋಡಿ ತೈಲಪದೇವನು ಭೀಮರಸನನ್ನು ಕುರಿತು—"ಇವರು ಯಾರು?"

"ಮಹಾರಾಜರೆ, ಇವರು ಶತ್ರುಗಳ ಕಡೆಯ ಗುಪ್ತಚರರು. ಇಲ್ಲಿಂದ ಎರಡು ಕ್ರೋಶಗಳ ಮೇಲಿರುವ ಹಳ್ಳಿಯಲ್ಲಿ ಇವರು ನನ್ನ ಕೈಗೆ ಸಿಕ್ಕರು. ತಾವು ಎಲ್ಲ ಕಡೆಯಲ್ಲಿ ಗುಪ್ತಚಾರರ ಜಾಳಿಗೆಯನ್ನು ಪಸರಿಸಿದ್ದರ ಲಾಭವಿದು."

"ಇವರು ಶತ್ರುಗಳ ಗುಪ್ತಚರರೆಂಬದಕ್ಕೆ ಆಧಾರವೇನುಂಟು"

"ಇಗೊಳ್ಳಿರಿ. ಈ ಪತ್ರಗಳೇ ಆಧಾರಗಳಿರುವವು." ಎಂದು ಭೀಮರಸನು ತನ್ನ ಜೇಬಿನಲ್ಲಿರಿಸಿಕೊಂಡಿದ್ದ ಎರಡು ಪತ್ರಗಳನ್ನು ತೈಲಪದೇವನಿಗೆ ಕೊಟ್ಟನು. ತೈಲಪದೇವನು ಪತ್ರಗಳನ್ನು ಓದಿಕೊಂಡು:—"ಮಾರಸಿಂಹನಿಗೆ ವೇಧವು ಚೆನ್ನಾಗಿ ಹತ್ತಿರುವಂತೆ ತೋರುವದು ದಾರಿಯಲ್ಲಿ ದಿನಗಳೆಯದೆ ಶೀಘ್ರವಾಗಿ ಹೊರಟು ಬರಬೇಕೆಂದು ಅವನು ಅಪರಾಜಿತ-ಭಿಲ್ಲಮರಿಗೆ ವಿನಂತಿ ಪತ್ರಿಕೆಗಳನ್ನು ಬರೆದಿರುವನು. ನಮ್ಮ ಸೈನ್ಯವು ಹಾನುಂಗಲ್ಲಿನಲ್ಲಿ ಬೀಡುಬಿಟ್ಟಿರುವ ಸಂಗತಿಯನ್ನಾದರೂ ಅವನು ಪತ್ರದಲ್ಲಿ ಬರೆದಿರುವನು. ಏನೂ ಚಿಂತೆಯಿಲ್ಲ. ಯುದ್ಧವು ಮುಗಿಯುವ ವರೆಗೆ ಈ ಸ್ವಾರರನ್ನು ಬಿಗಿಯಾದ ಕಾವಲಲ್ಲಿರಿಸಿರಿ." ಎಂದು ತೈಲಪದೇವನು ನುಡಿದು ಅರಿಕೇಸರಿ ಮೊದಲಾದ ಮಂಡಲೇಶ್ವರರನ್ನು ಕುರಿತು—"ಭಿಲ್ಲಮ-ಅಪರಾಜಿತರ ಸೈನ್ಯಗಳು ಮಾರಸಿಂಹನಿಗೊದಗದಂತೆ ಹೇಗೆ ವ್ಯವಸ್ಥೆಯನ್ನು ಮಾಡಬೇಕು?"

ತೈಲಪದೇವನ ಪ್ರಶ್ನೆಗೆ ಏನು ಉತ್ತರವೀಯುಬೇಕೆಂಬದು ಮಂಡಲೇಶ್ವರರಿಗೆ ತೋಚದಾಯಿತು. ಆಗ ಅರಿಕೇಸರಿಯು—"ಮಹಾರಾಜರೆ, ನಾನು ನನ್ನ ಸೇನೆಯೊಡನೆ ಭಿಲ್ಲಮ-ಅಪರಾಜಿತರಿಗೆ ಮಾರ್ಗದಲ್ಲಿ ಅಡ್ಡಿ ಮಾಡುವೆನು. ನೀವು ಉಳಿದ ಮಂಡಲೇಶ್ವರರೊಡನೆ ಬನವಾಸಿಗೆ ಪ್ರಯಾಣ ಮಾಡಿರಿ."

"ಅರಿಕೇಸರಿಯವರೆ;" ತೈಲಪದೇವನು ನಸು ನಗುತ್ತ—"ನೀವು ಹೇಳಿದ ಉಪಾಯವು ರಾಜಕಾರಸ್ಥಾನವೆಂದೆನಿಸುವದಿಲ್ಲ. ನಮ್ಮ ಬಳಿಯಲ್ಲಿ ದುರ್ಗಾನಾಥರಂತಹ ತಂತ್ರಗಾರರಾದ ಜನರಿದ್ದು, ನಾವು ಅವರಿಂದ ಯೋಗ್ಯವಾದ ಲಾಭಮಾಡಿಕೊಳ್ಳದೆ ತೆಕ್ಕೆಯ ಕಾಯಕ ಮಾಡಿದರೆ ಹೇಗೆ?"

"ಮಹಾರಾಜರೆ," ದುರ್ಗಾನಾಥನು ತೈಲಪದೇವನ ಪ್ರಶಂಸೆಯಿಂದ ಹರ್ಷಪುಲಕಿತನಾಗಿ--"ತಾವು ಹೇಳಿದ ಹಾಗೆ ಕಾರಸ್ಥಾನ ರಚಿಸಿ ಶತ್ರುಗಳನ್ನು ಗಂಡಾಂತರದಲ್ಲಿ ಕೆಡಹಲಿಕ್ಕೆ ನನ್ನ ಸಿದ್ಧತೆಯಿರುವದು."

"ಭಿಲ್ಲಮ-ಅಪರಾಜಿತರನ್ನು ಮಾರಸಿಂಹನ ಬಳಿಗೆ ಹೋಗದಂತೆ ತಡೆಯುವ ಸುಲಭವಾದ ಉಪಾಯವೇನಿರುವದೆಂಬದನ್ನು ನೀವು ಹೇಳಿರಿ."

"ಮಹಾರಾಜರೆ, ರಾಜನೀತಿ ನಿಪುಣರಾದ ನೀವು ಹಂಚಿಕೆಗಳನ್ನು ಹೇಳಿದರೆ ಅದರಂತೆ ಕಾರ್ಯಭಾಗವನ್ನು ನೆರವೇರಿಸಲಿಕ್ಕೆ ನನಗೆ ಸಾಧ್ಯವಾಗಬಹುದು. ಗಹನವಾದ ರಾಜಕಾರಣದಲ್ಲಿ ನನಗೆ ತಮ್ಮಷ್ಟು ಹೇಗೆ ತಿಳಿಯಬೇಕು?"

"ದುರ್ಗಾನಾಥರೆ, ಈ ವಿಷಯದಲ್ಲಿ ನಿಮ್ಮ ವಿಚಾರವೇನಿರುವದೆಂಬದನ್ನು ತಿಳಿಸಿರಿ. ಗುಪ್ತಕಾರಸ್ಥಾನಗಳಲ್ಲಿ ನೀವು ಅತ್ಯಂತ ವಿಶಾರದರಿರುವಿರೆಂದು ನನ್ನ ಅನುಭವಕ್ಕೆ ಬಂದಿದೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವು ನನ್ನ ಅಭಿಪ್ರಾಯದಂತೆಯೇ ಇರಬಹುದಾಗಿ ತೋರುವದು."

"ಮಹಾರಾಜರ, ದೊಡ್ಡ ರಾಜಕಾರಸ್ಥಾನಗಳಲ್ಲಿ ನಾನು ಇನ್ನೂ ಅಷ್ಟೊಂದು ನುರಿತಿಲ್ಲ. ಭಿಲ್ಲಮ ಅಪರಾಜಿತರನ್ನು ತಡೆಯಲಿಕ್ಕೆ ನನಗೆ ಒಂದು ಉಪಾಯವು ತೋಚುತ್ತದೆ"　"ಅದೇನು?"

"ಭಿಲ್ಲಮನ ಸೈನ್ಯವು ಇಲ್ಲಿಂದ ಸಾಲ್ಕು ಕ್ರೋಶಗಳ ಮೇಲೆ ಬೀಡು ಬಿಟ್ಟಿರುವದು. ಅಪರಾಜಿತನ ಸೈನ್ಯವು ಭಿಲ್ಲಮನ ಸೈನ್ಯದಿಂದ ಎಂಟು ಕ್ರೋಶಗಳ ಅಂತರದಲ್ಲಿರುವದು. ಆವೆರಡೂ ಸೈನ್ಯಗಳ ನಡುವೆ ಯಾದವಿಯು ಹುಟ್ಟುವಂತೆ ಮಾಡಿ, ಅವರಿಂದ ಮಾರಸಿಂಹನಿಗೆ ನೆರವು ದೊರೆಯದಂತೆ ವ್ಯವಸ್ಥೆ ಮಾಡಬೇಕೆಂದು ನನ್ನ ಅಭಿಪ್ರಾಯವಿರುವದು."

ದುರ್ಗಾನಾಥನ ಅಭಿಪ್ರಾಯವನ್ನು ಕೇಳಿ ತೈಲಪದೇವನ ಹೊರತು ಮಿಕ್ಕ ಜನರೆಲ್ಲರೂ ನಗತೊಡಗಿದರು. ಅಪರಾಜಿತ ಭಿಲ್ಲಮರ ನಡುವೆ ಕದನವನ್ನು ಉಪಸ್ಥಿತಗೊಳಿಸುವದು ಅಸಂಭಾವ್ಯವೆಂದು ಎಲ್ಲರೂ ತಮ್ಮತಮ್ಮೊಳಗೆ ಮಾತನಾಡುವದಕ್ಕೆ ಪ್ರಾರಂಭಿಸಿದರು. ಆಗ ತೈಲಪದೇವನು ದುರ್ಗಾನಾಥನನ್ನು ಕುರಿತು: "ನಿಮ್ಮ ಅಭಿಪ್ರಾಯವು ಯೋಗ್ಯವಾದದ್ದಿರುವದು. ನೀವು ಕುಟಿಲ ರಾಜನೀತಿಯಲ್ಲಿ ಪ್ರವೀಣರಿರುವದರಿಂದಲೆ ನಿಮ್ಮನ್ನು ಗುಪ್ತ ಸಂಸ್ಥೆಯ ಮುಖ್ಯಾಧಿಕಾರಿಗಳನ್ನು ಮಾಡಿರುವೆನು. ನೀವು ನನ್ನ ನಿಶ್ಚಯದಂತೆಯೇ ಅಭಿಪ್ರಾಯವಿತ್ತಿರಿ."

ತೈಲಪದೇವನು ಹೀಗೆ ದುರ್ಗಾನಾಥನನ್ನು ಸಂಭಾವಿಸಿದ ಕೂಡಲೆ, ರಟ್ಟರಸನಾದ ಶಾಂತಿವರ್ಮನು ಅವನನ್ನು ಕುರಿತು:—"ಮಹಾರಾಜರೆ, ದುರ್ಗಾನಾಥರ ವಿಚಾರಗಳು ತೀರ ಅಸಂಭಾವ್ಯವಾದವುಗಳಾಗಿರುವವು. ನೀವು ಅವರ ಅಭಿಪ್ರಾಯಕ್ಕೆ ತಲೆದೂಗಿದ್ದನ್ನು ನೋಡಿದರೆ ವಿಸ್ಮಯವೆನಿಸಿದೆ."

"ಮಹಾರಾಜರೆ," ಕದಂಬಲಿಗೆಯ ಮಹಾಸಾಮಂತನಾದ ಚಾತರಸನು:—"ಭಿಲ್ಲಮ ಅಪರಾಜಿತರಲ್ಲಿ ಕದನವನ್ನು ಹುಟ್ಟಿಸುವದು ಹೇಗೆ ಸಾಧ್ಯವಾಗುವದು? ಅವರಿಬ್ಬರೂ ಮಾರಸಿಂಹನ ಪಕ್ಷಪಾತಿಗಳಿದ್ದು, ಅವನಿಗೆ ನೆರವಾಗುವದಕ್ಕಾಗಿಯೇ ಹೊರಟಿರುವರು. ಹೀಗಿದ್ದ ಮೇಲೆ ದುರ್ಗಾನಾಥರ ಹೇಳಿಕೆಯಂತೆ ಕಾರ್ಯವಾಗುವ ಬಗೆ ಹೇಗೆ?"

ಮಂಡಲೇಶ್ವರರೆ, ರಾಜಕಾರಣವೆಂದರೆ ಅದೇನು ಸಣ್ಣಪುಟ್ಟದಲ್ಲ. ಅಷ

ರಾಜಿತ-ಭಿಲ್ಲಮರಲ್ಲಿ ಯಾದವಿಯು ಪ್ರಾರಂಭವಾಗುವಂತೆ ಮಾಡುವದು ನಿಮ್ಮ ದೃಷ್ಟಿಗೆ ಅಸಾಧ್ಯವೆಂದು ತೋರುತ್ತಿರಬಹುದು. ಆದರೆ ಈ ಕಾರ್ಯವು ನಿಜವಾದ ಕುಟಿಲ ನೀತಿಗೆ ಅಸಾಧ್ಯವಿರುವದಿಲ್ಲ. ದುರ್ಗಾನಾಥರು ಯೋಗ್ಯವಾದ ಅಭಿಪ್ರಾಯವನ್ನಿತ್ತಿರುವರು. ಅದರಂತೆ ಕಾರ್ಯಮಾಡಿ ಯಶಸ್ವಿಯಾಗಬೇಕಾದರೆ ಅವನು ಒಳ್ಳೆಯ ತಂತ್ರಗಾರನಿರಬೇಕಾಗುವದು" ಎಂದು ತೈಲಪದೇವನು ಮಂಡಲೇಶ್ವರರಿಗೆ ಹೇಳಿ ದುರ್ಗಾನಾಥನನ್ನು ಕುರಿತು.—"ನೀವು ಈ ಕಾರ್ಯವನ್ನು ಹೇಗೆ ನೆರವೇರಿಸುವಿರೆಂಬದನ್ನು ಹೇಳಿರಿ."

"ಮಹಾರಾಜರೆ, ನಾವು ಉಪಯೋಗಿಸಬಹುದಾದ ತಂತ್ರವು ಒಳ್ಳೆಯ ಗುಪ್ತವಾಗಿ ಉಳಿದರೆ ಯಶಸ್ವಿಯಾಗುವದು ಮೂರು ಕಿವಿಗಳಿಗೆ ಕೇಳಿದ್ದು ಮೂರು ಲೋಕಕ್ಕೆ ಕೇಳುವ ಸಂಭವವಿರುವದು. ಅಂತೆಯೆ ನಾನು ನನ್ನ ಯೋಜನೆ ತಿಳಿಸಲಿಕ್ಕೆ ಅನುಮಾನಿಸುವೆನು."

"ದುರ್ಗಾನಾಥರೆ, ಇಲ್ಲಿ ನನ್ನ ಪಕ್ಷಪಾತಿಗಳಾದ ಮಂಡಲೇಶ್ವರರ ಹೊರತು ಯಾರೂ ಇಲ್ಲ. ನೀವು ನಿಶ್ಶಂಕೆಯಿಂದ ನಿಮ್ಮ ಮಾತನ್ನು ಪ್ರಕಟೀಕರಿಸಿರಿ.'

"ಮಹಾರಾಜರೆ, ಅಪರಾಜಿತ-ಭಿಲ್ಲಮರಲ್ಲಿ ಹೇಗೆ ಯಾದವಿಯನ್ನು ಪ್ರಾರಂಭಿಸಬೇಕೆಂಬದರ ಬಗ್ಗೆ ಮೊದಲೇ ಯೋಜನೆಗಳನ್ನು ಮಾಡಿಟ್ಟುಕೊಂಡಿರುವೆನು. ನನ್ನ ಯೋಜನೆಗಳು ನಿಮ್ಮ ಮನಸ್ಸಿಗೆ ಬರುತ್ತಿದ್ದರೆ ಅವುಗಳನ್ನು ಪ್ರಯೋಗಿಸುವೆನು." ಎಂದು ದುರ್ಗಾನಾಥನು ನುಡಿದು ತನ್ನ ಜೇಬಿನೊಳಗಿಂದ ಮೂರು ಪತ್ರಗಳನ್ನು ತೆಗೆದು ತೈಲಪದೇವನ ಕೈಯಲ್ಲಿ ಕೊಟ್ಟನು. ತೈಲಪದೇವನು ಆ ಮೂರು ಪತ್ರಗಳನ್ನು ಓದಿ ಬೆರಗಾದನು. ಆಗ ಅವನು:—ದುರ್ಗಾನಾಥರೆ, ನಿಮ್ಮ ಬುದ್ಧಿ ಕೌಶಲ್ಯಕ್ಕೆ ಎಣೆಯಿಲ್ಲ" ಎಂದು ಧನ್ಯೋದ್ಗಾರ ತೆಗೆದು ಆ ಪತ್ರಗಳನ್ನೋದುವದಕ್ಕಾಗಿ ಕರಣಿಕನಿಗೆ ಆಜ್ಞಾಪಿಸಿದನು. ಕರಣಿಕನು ಪತ್ರಗಳನ್ನೋದತೊಡಗಿದನು.

"ಶ್ರೀಮಾನ್ ಭಿಲ್ಲಮದೇವ ಯಾದವ ಇವರಿಗೆ--

ಮಾರಸಿಂಹನು ತಮಗೆ ವಿಜ್ಞಾಪಿಸಿಕೊಳ್ಳುವದೇನಂದರೆ, ಚಾಲುಕ್ಯ ತೈಲಪದೇವನಸೈನ್ಯವು ಹಾನುಂಗಲ್ಲಿನಲ್ಲಿ ತಳವೂರಿರುವದು. ಅವನ ಸೈನ್ಯವನ್ನು ಪಾರುಪತ್ಯಗೊಳಿಸುವ ಕೆಲಸವನ್ನು ನಾನು ಮಾಡುವೆನು. ಇಲ್ಲಿ ನಿಮ್ಮ ಸೈನ್ಯದ ಆವಶ್ಯಕತೆಯಿಲ್ಲ. ಮಾನ್ಯಖೇಟದಿಂದ ಬಾರಪ್ಪ ಸೇನಾಪತಿಯೂ ಸವದತ್ತಿಯಿಂದ ಶಾಂತಿವರ್ಮನೂ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೊರಟಿರುವರು. ನೀವು ಶತ್ರುಗಳ ಚಲನವಲನವನ್ನು ತಿಳಿದುಕೊಂಡು, ಮಾರ್ಗದಲ್ಲಿಯೇ ಅವರಿಗೆ ಅಡ್ಡಿಮಾಡಬೇಕು. ನೀವು ಇತ್ತಕಡೆಯ ಆಲೋಚನೆ ಮಾಡದೆ ಬಾರಪ್ಪ-ಶಾಂತಿವರ್ಮರ ಸೈನ್ಯವನ್ನು ನಿರ್ಮೂಲಗೊಳಿಸಬೇಕು. ತೈಲಪದೇವನನ್ನು ಪರಾಭವಗೊಳಿಸಲು ಇಲ್ಲಿಯ ಸೈನ್ಯವು ಸಿದ್ಧವಿರುವದು. ತಮ್ಮ ಸ್ನೇಹಾಭಿಲಾಷಿ

ಮಾರಸಿಂಹ-ಗಂಗವಾಡಿ ಬನವಾಸಿ"

"ಶ್ರೀಮಾನ್ ಅಪರಾಜಿತದೇವ ಶಿಲಾಹಾರ ಇವರಿಗೆ—

ಮಾರಸಿಂಹನ ವಿಜ್ಞಾಪನೆಯೇನೆಂದರೆ; ತೈಲಪದೇವನು ತನ್ನ ಪಡೆಯೊಳಗಿನ ಒಂದು ಭಾಗವನ್ನು ಬಂಕಾಪುರ ಬಳಿಯಲ್ಲಿ ಕಾದಿಟ್ಟಿರುವನು. ನೀವು ಆ ಸೈನ್ಯ ನಾಶಗೊಳಿಸುವ ಕೆಲಸಮಾಡಬೇಕು ಇತ್ತಕಡೆಯ ಆಲೋಚನೆ ಮಾಡಬೇಡಿರಿ. ಭಿಲ್ಲಮದೇವ ಯಾದವರು ಇಂದೇ ಇಲ್ಲಿಗೆ ಬಂದಿರುವರು.

ತಮ್ಮ ಕ್ಷೇಮಾಭಿಲಾಷಿ,

ಮಾರಸಿಂಹ-ಗಂಗವಾಡಿ ಬನವಾಸಿ"

ಶ್ರೀಮಾನ್ ಮಾರಸಿಂಹ ಗಂಗವಾಡಿ ಇವರಿಗೆ—

ಯಾದವ ಭಿಲ್ಲಮದೇವ, ಶಿಲಾಹಾರ ಅಪರಾಜಿತದೇವ ಇವರ ಬಿನ್ನಹಗಳೇನಂದರೆ, ತಾವು ಕಳುಹಿಸಿದ ಪತ್ರಗಳು ತಲುಪಿದವು. ತೈಲಪದೇವನು ತನ್ನ ಬಹು ದೊಡ್ಡ ಭಾಗವನ್ನು ಬಂಕಾಪುರದ ಸಮೀಪದಲ್ಲಿ ಕಾಯ್ದಿಟ್ಟಿರುವನು. ನಾವು ಅದನ್ನು ನಿರ್ಮೂಲಗೊಳಿಸಿ ಅಲ್ಲಿಗೆ ಬರುವೆವು. ನೀವು ಕಳುಹಿಸಿದ ಸ್ವಾರರು ಗುಪ್ತಸಂಸ್ಥೆಯವರಿದ್ದು ಕಾರಸ್ಥಾನ ನಿಪುಣರಿದ್ದುದರಿಂದ ಪೋಳಿಯಲ್ಲಿ ಉಪಯೋಗ ಬೀಳಬೇಕೆಂದು ನಮ್ಮಲ್ಲಿಟ್ಟುಕೊಂಡಿರುವೆವು.

ತಮ್ಮ ಪ್ರೇಮಾಭಿಲಾಷಿಗಳಾದ,

ಭಿಲ್ಲಮದೇವ ಯಾದವ, ಅಪರಾಜಿತ ಶಿಲಾಹಾರ"

ಕರಣಿಕನು ಪತ್ರಗಳನ್ನೋದಿದ ಕೂಡಲೆ, ದುರ್ಗಾನಾಥನ ಚಾತುರ್ಯದ ಬಗ್ಗೆ ಎಲ್ಲರಿಗೂ ವಿಸ್ಮಯವಾಯಿತು. ತಮ್ಮ ಮಹಾರಾಜರು ವರ್ಣಿಸಿದಂತೆ ದುರ್ಗಾನಾಥನು ನಿಸ್ಸೀಮನಾದ ತಂತ್ರಗಾರನಿರುವನೆಂದು ಎಲ್ಲರಿಗೂ ನಂಬಿಗೆಯಾಯಿತು. ಮಾರಸಿಂಹನ ಪತ್ರಗಳಿಗೆ ರಾಷ್ಟ್ರಕೂಟ ರಾಜಮುದ್ರೆಯೂ ಭಿಲಮ-ಅಪರಾಜಿತರ ಪತ್ರಕ್ಕೆ ಭಿಲ್ಲಮನ ರಾಜಮುದ್ರೆಯೂ ಹಾಕಲ್ಪಟ್ಟಿದ್ದವು, ಈ ಘಟನೆಯಿಂದಂತು ಎಲ್ಲ ಜನರು ಮತ್ತಿಷ್ಟು ಬೆರಗಾದರು. ದುರ್ಗಾನಾಥನು ರಾಜಮುದ್ರೆಗಳನ್ನು ಹೇಗೆ ದೊರಕಿಸಿದನೆಂಬವರ ಗೂಢವು ಅವರಿಗೆ ತಿಳಿಯದಾಯಿತು. ತೈಲಪದೇವನು ಮಂಡಲೇಶ್ವರರ ಮನಸ್ಸಿನಲ್ಲಿ ಹುಟ್ಟಿದ ಕುತೂಹಲವನ್ನು ಪೂರ್ಣ ಮಾಡಬೇಕೆಂದು ಯೋಚಿಸಿ, ದುರ್ಗಾನಾಥನನ್ನು ಕುರಿತು.—"ನೀವು ರಾಜಮುದ್ರೆಗಳನ್ನು ಹೇಗೆ ದೊರಕಿಸಿದಿರಿ!"

"ಮಹಾರಾಜರೆ, ಈ ರಾಜಮುದ್ರೆಗಳೆಲ್ಲ ಕೃತ್ರಿಮವಾದವುಗಳಿರುವವು. ರಾಜಕಾರಸ್ಥಾನಗಳಲ್ಲ ಉಪಯೋಗಬೀಳಬೇಕೆಂದು ನಾನು ಬುದ್ಧಿಪೂರ್ವಕವಾಗಿ ಒಳ್ಳೇ ಪ್ರಯಾಸಬಟ್ಟು ರಾಜಮುದ್ರೆಗಳನ್ನು ಕೃತ್ರಿಮರೀತಿಯಿಂದ ಮಾಡಿಸಿಕೊಂಡಿರುವೆನು. ನನ್ನ ಕಡೆಗೆ ಎಷ್ಟೋ ಅರಸರ ಹಾಗು ಮಂಡಲೇಶ್ವರರ ಕೃತ್ರಿಮ ಮುದ್ರೆಗಳುಂಟು. ಇಲ್ಲಿ ನೋಡಿರಿ ಇದು ಚಾಲುಕ್ಯ ಸಮ್ರಾಟ ತೈಲಪದೇವ ಮಹಾರಾಜರ ರಾಜಮುದ್ರೆಯು!" ಎಂದು ನುಡಿದು ದುರ್ಗಾನಾಥನು ತನ್ನ ಜೇಬಿನೊಳ

ಗಿಂದ ರಾಜಮುದ್ರಿಯನ್ನು ತೆಗೆದು ತೈಲಪದೇವನ ಕಡೆಗೆ ಕೊಟ್ಟನು. ಆ ರಾಜ ಮುದ್ರಿಯನ್ನು ನೋಡಿ ಎಲ್ಲ ಜನರೂ ನಿಸ್ಮಿತರಾದರು; ತೈಲಪದೇವನಿಗಾದರೂ ಬಹಳೇ ಸೋಜಿಗವಾಯಿತು. ಆಗ ದುರ್ಗಾನಾಥನು ವಿನಯದಿಂದ:—"ಮಹಾ ರಾಜರೆ, ಚಾಲುಕ್ಯಸಮ್ರಾಟರ ಅರ್ಥಾತ್ ಕರ್ನಾಟಕ ಸಾಮ್ರಾಜ್ಯದ ಹಿತಸಂಬಂಧ ವಿದ್ದಲ್ಲಿ ಮಾತ್ರ ಈ ರಾಜಮುದ್ರಿಗಳನ್ನು ಪ್ರಸಂಗಗಳನ್ನನುಲಕ್ಷಿಸಿ ಉಪಯೋಗಿಸು ತ್ತಿರುವೆನು"

"ದುರ್ಗಾನಾಥರೆ, ನೀವು ಜಗತ್ತನ್ನು ಹಬ್ಬುಹಾಕುವವರುಇರಿ!" ಎಂದು ತೈಲಪದೇವನು ನಗುತ್ತ ನುಡಿದನು:—"ನೀವು ಬರೆದ ಪತ್ರಗಳು ಬಹಳೇ ಯೋಗ್ಯ ವಾದವುಗಳಿರುವವು. ನೀವು ಯೋಜನೆ ಮಾಡಿದಂತೆಯೇ ನನ್ನ ಅಭಿಪ್ರಾಯ ವಿತ್ತು. ಈ ಪತ್ರಗಳು ಯೋಗ್ಯ ಕಾಲದಲ್ಲಿ ಅವರವರ ಕೈಗೆ ಬೀಳುವ ವ್ಯವಸ್ಥೆ ಮಾಡಿರಿ. ಅತ್ತ ಅಪರಾಜಿತ ಭಿಲ್ಲಮರು ಕರನ ಸಮೆಯಿಸಿದಾಗ ನಾನು ಮಾರ ಸಿಂಹನ ಪಾರುಪತ್ಯಗೊಳಿಸುವೆನು ಹಿಂದಿನಿಂದ ಅಪರಾಜಿತ-ಭಿಲ್ಲಮರನ್ನು ಗೊತ್ತಿಗೆ ಹಚ್ಚಲಿಕ್ಕೆ ಬಂದೀತು."

"ಮಹಾರಾಜರೆ, ನಾನು ನನ್ನ ಕಾರಸ್ಥಾನವನ್ನು ಉಡೋರಿಸುವದಕ್ಕಾಗಿ ಹೊರಡುವೆನು. ಮಾರಸಿಂಹನನ್ನು ಪರಾಭವಗೊಳಿಸಿದೊಡನೆಯೆ, ಅಪರಾಜಿತ ಭಿಲ್ಲಮರ ಕೊಬ್ಬನ್ನು ಅಡಗಿಸುವದಕ್ಕಾಗಿ ಹೊರಟುಬರಬೇಕು. ನಿಸಾವಧಿಯಾದರೆ ಅವರು ಸಾಮ್ರಾಜ್ಯದಲ್ಲಿ ಬಂಡಾಯವನ್ನೆಬ್ಬಿಸುವ ಸಂಭವವಿರುವದು."

"ದುರ್ಗಾನಾಥರೆ, ನಾವು ನಾಳೆ ಪ್ರಾತಃಕಾಲದಲ್ಲಿಯೇ ಬನವಾಸಿಗೆ ದಂಡೆತ್ತಿ ಹೋಗುವೆನು. ನೀವು ನಿಶ್ಚಿಂತರಾಗಿ ನಿಮ್ಮ ಕರ್ತವ್ಯದಲ್ಲಿ ತೊಡಗಿಕೊಳ್ಳಬೇಕು. ರಾಷ್ಟ್ರಕೂಟರ ಆಯುಷ್ಯಪ್ರಮಾಣವು ತೀರಿತೆಂದು ತಿಳಿಯಕೊಳ್ಳಲಿಕ್ಕೆ ಏನೂ ಪ್ರತ್ಯ ವಾಯವಿಲ್ಲ. ಭಾವೀ ಯುದ್ಧವು ಸಾಮಾನ್ಯವಾದದ್ದಾಗುವದಿಲ್ಲ. ಈ ಯುದ್ಧವು ಚಾಲುಕ್ಯ-ರಾಷ್ಟ್ರಕೂಟರ ದೈವನಿರ್ಣಯ ಮಾಡುವಂತಹದಿರುವದು. ಮಾರಸಿಂಹ ಇಂದ್ರರು ಜಯಶಾಲಿಗಳಾದರೆ ನಾನು ರಾಜ್ಯದಾಸೆಯನ್ನು ಬಿಡಬೇಕಾ ಗುವದು; ನಾನು ಜಯಸಾಲಿಯಾದರೆ ರಾಷ್ಟ್ರಕೂಟರು ನಿರ್ನಾಮರಾಗುವರೆಂದು ತಿಳಿಯತಕ್ಕದ್ದು" ಎಂದು ತೈಲಪದೇವನು ನುಡಿದು:—"ನೀವು ನಿಮ್ಮ ಕಾರ್ಯ ವನ್ನು ಪ್ರಸಂಗಾವಧಾನದಿಂದ ಸಾಧಿಸಿರಿ. ಸ್ವೀಕೃತ ಕಾರ್ಯದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಹಾನಿಯೊದಗುವ ಸಂಭವವುಂಟು."

"ತಮ್ಮ ಪ್ರಚಂಡ ಬಲಕ್ಕೆ ಮಾರಸಿಂಹನು ಈಡಾಗಲಾರನು. ಅಪರಾಜಿತ ಭಿಲ್ಲಮರು ಸಾಹಸಿಗರಿದ್ದುದರಿಂದ ಅವರ ಸಹಾಯವೊದಗಿದ್ದರೆ ಮಾತ್ರ ಮಾರ ಸಿಂಹನು ನಾಲ್ಕು ದಿನ ತಡೆದು ನಿಲ್ಲುತ್ತಿದ್ದನು; ಪರಾಭವಗೊಂಡ ಮೇಲಾದರೂ ತಿರುಗಿ ತಲೆಯೆತ್ತಿದವನ್ನು ನಿರ್ವೀರ್ಯನಾಗುತ್ತಿದ್ದಿಲ್ಲ. ತಾವು ಹೇಳಿದಂತೆ ಭಾವೀ ಯುದ್ಧವು ಮಾರಸಿಂಹ-ಇಂದ್ರರ ದೈವನಿರ್ಣಯ ಮಾಡುವಂತಹದಿರುವದೆಂದು ಹೇಳ

ಬಹುದು'' ಎಂದು ದುರ್ಗಾನಾಥನು ನುಡಿದು, ತೈಲಪದೇವನ ಆಜ್ಞೆಯ ಮೇರೆಗೆ ತನ್ನ ಕಾರ್ಯಕ್ಕಾಗಿ ಹೊರಟು ಹೋದನು. ಅನಂತರದಲ್ಲಿ ತೈಲಪದೇವನು ಪ್ರಯಾಣದ ಸಿದ್ಧತೆಯಲ್ಲಿ ತೊಡಗುವದಕ್ಕಾಗಿ ಸಾಮಂತ ಸೇನಾಪತಿಗೆ ತಿಳಿಸಿದನು.

ದುರ್ಗಾನಾಥನು ಹಾನುಂಗಲ್ಲಿನಿಂದ ಹೊರಟು ಬಂಕಾಪುರಕ್ಕೆ ಬಂದನು. ಅಲ್ಲಿ ಅವನು ತನ್ನ ಗುಪ್ತಚರರನ್ನು ಗುಪ್ತರೀತಿಯಿಂದಿರಿಸಿದ್ದನು. ಅವನು ಮಾರಸಿಂಹ, ಭಿಲ್ಲಮ, ಅಪರಾಜಿತ ಮೊದಲಾದವರ ಪತ್ರಗಳನ್ನು ಚತುರ ದೂತರ ಕಡೆಗೆ ಕೊಟ್ಟು ಅವರವರ ಬಳಿಗೆ ಕಳುಹಿಸಿದನು. ದುರ್ಗಾನಾಥನ ಈ ಯುಕ್ತಿಯು ಸಫಲವಾಯಿತು. ಪರಾಕ್ರಮದ ಹೆಮ್ಮೆಯ ಅಪರಾಜಿತನಿಗೆ ಸಾಯಂಕಾಲಕ್ಕೆ ಪತ್ರವು ತಲುಪಿತು. ರಾತ್ರಿಯ ವೇಳೆಯಲ್ಲಿ ಶತ್ರುಗಳನ್ನು ನಾಶಗೊಳಿಸುವ ಕಾರ್ಯವು ಚನ್ನಾಗಿ ಸಾಧಿಸುವದೆಂದು ತಿಳಿದು, ಅವನು ಹಿಂದೆಮುಂದಿನ ವಿಚಾರ ಮಾಡದೆ ತನ್ನ ಸೈನ್ಯವನ್ನು ಬಂಕಾಪುರದ ಮಾರ್ಗವಾಗಿ ಸಾಗಿಸಿದನು. ರಾತ್ರಿಯ ಕಡೆಯ ಪ್ರಹರಕ್ಕೆ ಅಪರಾಜಿತನ ಸೈನ್ಯವು ನಿದ್ರಾಧೀನನಾಗಿದ್ದ ಭಿಲ್ಲಮನ ಸೈನ್ಯದ ಮೇಲೆ ಬಿದ್ದಿತು. ಈ ಆಕಸ್ಮಿಕ ಘಟನೆಯಿಂದ ಭಿಲ್ಲಮನ ಸೈನ್ಯವು ಭಯಂಭೀತವಾಯಿತು. ಅದು ಸಂಗ್ರಾಮಕ್ಕೆ ಸಿದ್ಧವಾಗುವಷ್ಟರಲ್ಲಿ ಸಾವಿರಾರು ಸೈನಿಕರು ಗತಾಸುಗಳಾದರು. ಬಾರಪ್ಪ ರಾಂತಿವರ್ಮರ ಕಡೆಯು ಈ ಬಗೆಯಾಗಿ ಅನರ್ಥ ಮಾಡಲುದ್ಯುಕ್ತವಾಯಿತೆಂದು ಭಿಲ್ಲಮನು ತಿಳಿದು ಅತ್ಯಂತ ಸಂತಪ್ತನಾದನು. ಅವನು ಹ್ಯಾಗೂ ಹಿಂಗೂ ಮಾಡಿ ತನ್ನ ಸೈನಿಕರನ್ನು ಕಾಳಗಕ್ಕೆ ಅಣಿಮಾಡಿದನು.

ಎರಡೂ ಸೈನ್ಯಗಳ ನಡುವೆ ನಿಕರವಾದ ಕಾಳಗವು ಪ್ರಾರಂಭವಾಯಿತು. ನಿಬಿಡವಾದ ಅಂಧಕಾರದಲ್ಲಿ ಶತ್ರುಸೈನ್ಯವಾವದು, ಮಿತ್ರಸೈನ್ಯವಾವದು ಎಂಬುದು ತಿಳಿಯುವಂತಿರಲಿಲ್ಲ. ಬಾಪದಿಯಿಂದ ಎರಡೂ ಸೈನ್ಯಗಳು ನಾಶವಾಗತೊಡಗಿದವು. ಬೆಳಗಾಗುವ ವರೆಗೆ ಇದೇ ಪ್ರಕಾರವಾಗಿ ಕಾಳಗವು ನಡೆಯಿತು. ಎದುರಾಳಿಗಳನ್ನು ತೈಲಪದೇವನು ಕಳುಹಿಸಿದ ಸೈನ್ಯವೆಂದು ಅಪರಾಜಿತನು ಭಾವಿಸಿದನು, ಭಿಲ್ಲಮನು ತನ್ನ ಎದುರಾಳಿಗಳನ್ನು ಬಾರಪ್ಪ-ರಾಂತಿವರ್ಮರ ಸೈನ್ಯವೆಂದು ತಿಳಿದನು. ಬೆಳಗಾಗುವ ವರೆಗೆ ನಿಜಸ್ಥಿತಿಯು ಯಾರಿಗೂ ತಿಳಿಯುವಂತಿದ್ದಿಲ್ಲ.

ಉಷಃಕಾಲವಾಯಿತು, ಅರುಣೋದಯವಾಯಿತು. ಸೂರ್ಯನೂ ಉದಯಿಸಿದನು. ಆ ಮೇಲೆ ಪರಸ್ಪರರು ಪರಸ್ಪರರನ್ನು ಗುರುತಿಸಿದರು. ಎಲ್ಲ ಕೃಷ್ಣಕಾರಸ್ಥಾನವು ಶತ್ರುಗಳಿಂದ ರಚಿಸಲ್ಪಟ್ಟಿತೆಂದು ಇಬ್ಬರವರೂ ತಿಳಿದರು. ನಿಜಸ್ಥಿತಿಯು ಪ್ರಕಟವಾಗೊಡನೆಯೇ ಅಪರಾಜಿತ-ಭಿಲ್ಲಮರು ತೈಲಪದೇವನ ಮೇಲೆ ಬೆಂಕಿಯನ್ನು ಕಾರತೊಡಗಿದರು. ಅವರಿಬ್ಬರೂ ಮೈಮರೆದು ಕಾದತೊಡಗಿರುವ ತಮ್ಮ ತಮ್ಮ ಸೈನ್ಯಗಳನ್ನು ನಾಶವಾಗೊಳಿಸುವ ಯುದ್ಧವನ್ನು ನಿಲ್ಲಿಸಿದರು. ಸುಮ್ಮಸುಮ್ಮನೆ ಸಹಸ್ರಾವಧಿ ಜನರು ನಾಶವಾಗಿಹೋಯಿತೆಂದು ಅವರಿಬ್ಬರೂ ಕ್ಲೇಶಗೊಂಡರು. ತೈಲಪದೇವನ ಸೈನ್ಯವು ಬನವಾಸಿಗೆ ಹೋಗಿರುವದೆಂದೂ, ಅಲ್ಲಿ ಮಾರಸಿಂಹನು ಪರಾಭವ

ಗೊಳ್ಳುತ್ತ ನಡೆದಿರುವನೆಂಬದೂ ಅವರಿಗೆ ಗುಪ್ತಚರರ ಮುಖಾಂತರವಾಗಿ ತಿಳಿಯಿತು. ಕೂಡಲೆ ಅವರು ತಮ್ಮ ಸೈನ್ಯವನ್ನು ಬನವಾಸಿಗೆ ಹೊರಡಿಸುವ ಉದ್ಯೋಗದಲ್ಲಿ ತೊಡಗಿದರು.

ಹಾನುಂಗಲ್ಲಿನಿಂದ ಹೊರಟ ತೈಲಪದೇವನು ಅಂದೇ ಬನವಾಸಿಯನ್ನು ತಲುಪಿದನು. ಮಾರಸಿಂಹನಾದರೂ ಯುದ್ಧದ ಸಿದ್ಧತೆಯಿಂದಲೇ ಕುಳಿತಿದ್ದನು. ತೈಲಪದೇವನ ಸೈನ್ಯವು ಬಂದ ವಾರ್ತೆಯು ಅವನ ಕಿವಿಗೆ ಬಿದ್ದ ಕೂಡಲೆ ತನ್ನ ಸೈನ್ಯವನ್ನು ಶತ್ರುಸೈನ್ಯಕ್ಕೆ ಎದುರು ಮಾಡಿದನು. ಉಭಯ ಪಕ್ಷಗಳ ನಡುವೆ ನಿಕರವಾದ ಕಾಳಗವು ಪ್ರಾರಂಭವಾಯಿತು. ಎರಡೂ ದಂಡಿನವರು ಕಲಿತನದಿಂದ ಕಾದಿದರು ಎರಡು ಮೂರು ಸಣ್ಣ ಕಾಳಗಗಳಾಗಿ ಮಾರಸಿಂಹನ ಸೈನ್ಯವು ಹಿಂಜರಿಯ ತೊಡಗಿತು. ತೈಲಪನ ದೊಡ್ಡ ದಂಡನ್ನು ಜಯಿಸುವದು ಅಸಾಧ್ಯವೆಂದು ಮಾರಸಿಂಹನ ತಿಳುವಳಿಕೆಯಾಯಿತು. ಆದರೂ ಅವನು ಶತ್ರುವಿಗೆ ಶರಣು ಹೋಗುವಷ್ಟು ಹೇಡಿಯಾಗಿದ್ದಿಲ್ಲ. ಯುದ್ಧದಲ್ಲಿ ಮರಣಹೊಂದಿದವರೂ ಚಿಂತೆಯಿಲ್ಲ, ವೈರಿಯೆದುರಿಗೆ ತಲೆಬಾಗಲಿಕ್ಕಿಲ್ಲವೆಂದು ಅವನು ಸತ್ಯಸಂಕಲ್ಪ ಮಾಡಿಕೊಂಡು ಜೀವದ ಹಂಗುದೊರೆದು ಕಾದಲಾರಂಭಿಸಿದನು. ಅವನ ಸೇನಾಪತಿಯಾದ ಬಾಯುಗನು ತನ್ನ ಒಡೆಯನ ಮಕ್ಕಳನ್ನೂ ಅವನ ಮನೆತನದ ಜನರನ್ನೂ ಸುರಕ್ಷಿತವಾದ ಸ್ಥಳದಲ್ಲಿಟ್ಟು, ಏಕನಿಷ್ಠೆಯಿಂದ ಯುದ್ಧ ಮಾಡಲಾರಂಭಿಸಿದನು. ಮಾರಸಿಂಹನು ಅಪರಾಜಿತ ಭಿಲ್ಲಮರ ಸೈನ್ಯಗಳು ಈಗ ಬಂದಾವು, ಆಗ ಬಂದಾವು ಎಂದು ದಾರಿ ನೋಡಿ ಬೇಸತ್ತನು. ಬರಬರುತ್ತ ಅವನ ಸೈನ್ಯವು ಕರಗಲಾರಂಭಿಸಿತು ಸೇನಾಪತಿಯಾದ ಬಾಯುಗನು ರಣಕ್ಕೆ ಮೈಗೊಟ್ಟನು. ತನ್ನ ಪರಾಕ್ರಮಿಯಾದ ಸೇನಾಪತಿಯು ಮಡಿದದ್ದರಿಂದ ಮಾರಸಿಂಹನು ಮತ್ತಿಷ್ಟು ಧೈರ್ಯಗುಂದಿದನು ರಣಾಂಗಣದಲ್ಲಿ ಬಿಟ್ಟು ಓಡಿ ಹೋಗುವವಕ್ಕೆ ಅವನ ಮನಸ್ಸು ಹಿಂಜರಿಯುತೊಡಗಿತ್ತು. ಅವನ ಮನೆಯ ಜನರೂ ಪ್ರೀತಿಯ ಮಕ್ಕಳೂ ಬನವಾಸಿಯಲ್ಲಿದ್ದುದರಿಂದ ಅವರನ್ನು ಸುರಕ್ಷಿತವಾಗಿ ದಾಟಿಸುವದರ ಸಲುವಾಗಿ ರಣಾಂಗಣದಿಂದ ಪಲಾಯನ ಮಾಡುವ ಪ್ರಸಂಗವು ಅವನಿಗೆ ಬಂದಿತು.

ಮಾರಸಿಂಹನ ಸೈನ್ಯವು ಹಿಂಜರಿಯ ತೊಡಗಿದಂತೆ ತೈಲಪದೇವನ ಸೈನಿಕರು ಇಮ್ಮಡಿ ಉತ್ಸಾಹದಿಂದ ರಣಕೌಶಲ್ಯವನ್ನು ತೋರಲಾರಂಭಿಸಿದರು ಅವರು ಒಳ್ಳೆಯ ಆವೇಶದಿಂದ ಶತ್ರುಸೈನ್ಯವನ್ನು ನಾಶಗೊಳಿಸತೊಡಗಿದ್ದರು. ಅವರ ಹೊಡತದಿಂದ ಮಾರಸಿಂಹನ ಸೈನ್ಯವು ನುಗ್ಗುನುಗ್ಗಾಗ ತೊಡಗಿತ್ತು. ಇನ್ನು ಮೇಲೆ ತಡೆದು ನಿಂತುಕೊಂಡರೆ ವೈರಿಗಳಿಂದ ಪೂರಾ ನಾಶಹೊಂದುವೆವೆಂದು ಸೈನಿಕರು ತನ್ನ ಒಡೆಯನಿಗೆ ಹೇಳಿದರು. ಕೂಡಲೆ ಮಾರಸಿಂಹನು ಉಳಿದ ಸೈನ್ಯವನ್ನು ತೆಗೆದುಕೊಂಡು ಕಾಲಿಗೆ ಬುದ್ಧಿ ಹೇಳಿದನು.

ಈ ಗೆಲವಿನಿಂದ ಮುಖ್ಯ ಶತ್ರುವಾದ ಮಾರಸಿಂಹನ ಕಾಟವು ತಪ್ಪಿದರೂ,

ತೈಲಪನು ಉಬ್ಬಿ ಮೈಮರೆತು ಬನವಾಸಿಯಲ್ಲಿ ಕುಳಿತುಕೊಳ್ಳಲಿಲ್ಲ. ದಂಡಿನವರಿಗೆ ಸಾಕಷ್ಟು ವಿಶ್ರಾಂತಿಯು ದೊರೆತೊಡನೆಯೇ ಅವನು ಮಾರಸಿಂಹನ ಪಕ್ಷಗಟ್ಟಿದ ಅಪರಾಜಿತ-ಭಿಲ್ಲಮರ ಪಾರಿಪತ್ಯಗೊಳಿಸಬೇಕೆಂದು ನಿಶ್ಚಯಿಸಿಕೊಂಡು ಬನವಾಸಿಯಿಂದ ಹೊರಟನು. ಮಾರಸಿಂಹನು ಪಲಾಯನ ಮಾಡಿದ ವಾರ್ತೆಯು ವೀರಾವೇಶದಿಂದ ಅವನ ಸಹಾಯಕ್ಕೆ ಹೊರಟ ಅಪರಾಜಿತ-ಭಿಲ್ಲಮರಿಗೆ ತಿಳಿಯಿತು. ಕೂಡಲೆ ಭಿಲ್ಲಮನು ತನ್ನ ಸೈನ್ಯವನ್ನು ತ್ವರೆಯಿಂದ ಸ್ವದೇಶದ ಕಡೆಗೆ ಹೊರಳಿಸಿದನು. ಅಪರಾಜಿತನು ಆಲಸಿಗನಾದ್ದರಿಂದ ಅವನು ತೈಲಪನ ಕೈಯಲ್ಲಿ ಸಿಲುಕಿದನು. ಹನುಮಂತನ ಮುಂದೆ ಹಾರಗುಬ್ಬಿಯೇ ಎಂಬಗಾದೆಯಂತೆ ಮಾರಸಿಂಹನನ್ನು ಸೋಲಿಸಿದ ದಂಡಿನ ಮುಂದೆ ಕೊಂಕಣದ ದಂಡಿನ ಆಟವು ಸಾಗುವ ಸಂಭವವೆಲ್ಲಿ? ಒಂದೆರಡು ಸಣ್ಣ ಸಣ್ಣ ಕಾಳಗಗಳಲ್ಲಿ ಅಪಜಯ ಹೊಂದಿದ ಅಪರಾಜಿತನಿಗೆ ಪಶ್ಚಾತ್ತಾಪನಾಯಿತು. ಹಗೆತನವನ್ನು ಮುಂದುವರಿಸಿದರೆ ರಾಜ್ಯಭ್ರಷ್ಟನಾಗುವದು ನಿಶ್ಚಯವೆಂದು ಮನವರಿಕೆಯಾದದರಿಂದ ಅವನು ತೈಲಪದೇವನಿಗೆ ಶರಣು ಹೋಗಿ ಕಪ್ಪಕಾಣಿಕೆಗಳನ್ನರ್ಪಿಸಿ, ತನ್ನ ತಪ್ಪನ್ನು ಕ್ಷಮಿಸಬೇಕೆಂದು ಸೆರಗೊಡ್ಡಿ ಬೇಡಿಕೊಂಡನು. ತೈಲಪನು ಕಾರ್ಯಸಾಧಕನೂ ಧೂರ್ತನೂ ದೂರದೃಷ್ಟಿಯುವನೂ ಆದ್ದರಿಂದ ಅಪರಾಜಿತನನ್ನು ಕ್ಷಮಿಸಿ, ಅವನಿಗಿದ್ದ ಸಾಮಂತಪದದಲ್ಲಿಯೆ ಅವನ ಸ್ಥಿರಿಸಿದನು.

ಬನವಾಸಿಯಿಂದ ಓಡಿಹೋದ ಮಾರಸಿಂಹನು ಬಂಕಾಪುರಕ್ಕೆ ಓಡಿಹೋದನು. ಅವನು ಶೂರನೂ ಮಹತ್ತಾಕಾಂಕ್ಷಿಯೂ ಕೆಚ್ಚೆದೆಯುವನೂ ಆಗಿದ್ದರೂ, ಅವನಿಗೆ ದೈವಬಲವು ಚನ್ನಾಗಿದ್ದಿಲ್ಲ. ಸಹಾಯಮಾಡುವೆವೆಂದು ಹೇಳಿದ ಎಷ್ಟೋ ಜನರು ಆಯತ್ತನಾದ ಸಮಯದಲ್ಲಿ ಅವನ ಕೊರಳು ಕೊಯ್ದರು. ರಾಷ್ಟ್ರಕೂಟ ಸಿಂಹಾಸನದ ಪ್ರಾಣಪ್ರತಿಷ್ಠೆ ಮಾಡುವೆವೆಂಬ ಹೆಮ್ಮೆಯಿಂದ ಬಂದ ಅಪರಾಜಿತ-ಭಿಲ್ಲಮರು ಮಾರ್ಗಮಧ್ಯದಲ್ಲಿಯೇ ಎಡರು-ತೊಡರುಗಳಲ್ಲಿ ಸಿಲುಕಿಕೊಂಡು, ಅವನಿಗೆ ಸಹಾಯ ಮಾಡಲಸಮರ್ಥರಾದರು. ಹೀಗಾಗಿ ಮಾರಸಿಂಹನು ತೈಲಪದೇವನ ಮಹಾಬಲಕ್ಕೆ ಈಡಾಗದೆ, ಓಡಿ ಹೋಗಿ ಬಂಕಾಪುರವನ್ನು ಸೇರಿಕೊಂಡನು. ಅಲ್ಲಿಯೇ ಅವನು ಮೂರನೆಯ ವರ್ಷ ಅನಶನದಿಂದ ಸತ್ತನು.

ತ್ರಾಯಿಸತ್ತು ನೂಪರಮಾವನುಳಿಯಬೇಕೆಂಬ ಗಾದಿಯ ಮಾತನ್ನು ನಂಬಿ ನಾಲ್ಕನೆಯ ಇಂದ್ರನು ಮಾರಸಿಂಹನ ಬೆನ್ನು ಕಟ್ಟಿದನು. ಕಡೆಗೆ ಅವನು ನಿರಾಶ್ರಿತನಾಗಿ ದಿಕ್ಕೆಟ್ಟು ಅತ್ತಿತ್ತ ಅಂಡಲೆದು ಕಡೆಗೆ ಗತಿಗಾಣದೆ ಶ್ರವಣಬೆಳ್ಗೊಳಕ್ಕೆ ಹೋಗಿ ಅನಶನವ್ರತದಿಂದ ಮರಣಹೊಂದಿದನು. ಇಲ್ಲಿಗೆ ರಾಷ್ಟ್ರಕೂಟ ಸಾಮ್ರಾಜ್ಯದ ರವಿಯು ಪೂರಾ ಅಸ್ತಂಗತನಾದನು. ರಾಷ್ಟ್ರಕೂಟ ಸೂರ್ಯಾಸ್ತನಾದೊಡನೆಯೆ ಚಾಲುಕ್ಯರ ಭಾಗ್ಯರವಿಯು ಮತ್ತಷ್ಟು ಕಾಂತಿಮಾನನಾದನು. ನಾಡಗವುಡರ ಅಥವಾ ರಾಷ್ಟ್ರಕೂಟರ ಆಳಿಕೆಯ ಅವಶೇಷವು ಇಲ್ಲಿಗೆ ಮುಗಿದಂತಾಯಿತು.

## ಪರಮಹಂಸನಲ್ಲ; ನಿನ್ನ ರಾಜಹಂಸನು!

ಪರಮಾನಂದ ಪರಮಹಂಸರು ಬುದ್ಧವಿಹಾರಕ್ಕೆ ಬಂದು ಮೂರು ದಿನಗಳಾಗಿದ್ದವು. ಇಷ್ಟರಲ್ಲಿಯೇ ಅವರು ಮಾನ್ಯಖೇಟ ರಾಜಧಾನಿಯ ತುಂಬ ಪ್ರಖ್ಯಾತರಾಗಿ ಹೋಗಿದ್ದರು. ಯತೀಶ್ವರರು ಕಟ್ಟುನಿಟ್ಟಿನ ಸ್ವಭಾವದವರಿದ್ದು, ಅವರು ಶಾಪಾನುಗ್ರಹಶಕ್ತಿಯುಳ್ಳವರಿರುವರೆಂದು ಪುರವಾಸಿಗಳಿಗೆ ಗೊತ್ತಾಗಿತ್ತು. ಅವರು ಪರಮಹಂಸರ ದರ್ಶನಕ್ಕಾಗಿ ತಂಡತಂಡವಾಗಿ ಬುದ್ಧವಿಹಾರಕ್ಕೆ ಬರಲಾರಂಭಿಸಿದ್ದರು; ಆದರೆ ಯತೀಶ್ವರರು ಯಾವಾಗಲೂ ಪುರಶ್ಚರಣದಲ್ಲಿಯೇ ತಲ್ಲೀನರಾಗಿದ್ದುದರಿಂದ ಜನರು ಭಗ್ನಮನೋರಥರಾಗುತ್ತಿದ್ದರು. ಅವರು ದಿನಾಲು ಒಂದು ಪ್ರಹರ ಮಾತ್ರ ಜನರಿಗೆ ದರ್ಶನ ಕೊಡುವ ಪದ್ಧತಿಯಿಟ್ಟಿದ್ದರು. ಅವರು ರಾಜಧಾನಿಯಲ್ಲಿ ಸಹಸಾ ಪ್ರವೇಶಿಸುತ್ತಿರಲಿಲ್ಲ. ಊರೊಳಗಿನ ದೊಡ್ಡ ದೊಡ್ಡ ವ್ಯಾಪಾರಸ್ಥರೂ, ಸೆಟ್ಟಿಸಾವುಕಾರರೂ ಎಷ್ಟು ಬಗೆಯಾಗಿ ಬೇಡಿಕೊಂಡರೂ ಅವರು ರಾಜಧಾನಿಯಲ್ಲಿ ಹೋಗಿರಲಿಲ್ಲ. ಅವರ ಶಿಷ್ಯರು ದಿನಾಲು ಐದು ಮನೆಗಳಲ್ಲಿ ಭಿಕ್ಷೆ ಬೇಡಿ ತಂದ ಅನ್ನದಲ್ಲಿ ಅವರು ಊಟ ಮಾಡುತ್ತಿದ್ದರು. ಒಂದು ಸ್ಥಳದಲ್ಲಿ ಮೂರುರಾತ್ರಿಗಳಿಗಿಂತ ಹೆಚ್ಚು ಕಾಲ ವಾಸವಾಗಿರುವದಿಲ್ಲವೆಂದು ಅವರು ಹೇಳಿದ್ದರು. ಮಾರನೆಯ ದಿನವೆ ಪ್ರಯಾಣ ಮಾಡಬೇಕಾದ್ದರಿಂದ ಅವರು ಅಂದಿನ ಸಾಯಂಕಾಲದಲ್ಲಿ ರಾಜಮಜಮನೆತನದ ಜನರಿಗೆ ಮಾತ್ರ ದರ್ಶನ ಕೊಡುವೆನೆಂದು ಹೇಳಿ, ದರ್ಶನಾಕಾಂಕ್ಷಿಗಳಾದ ಉಳಿದ ಜನರನ್ನು ನಿರಾಶಗೊಳಿಸಿದ್ದರು.

ಮಹಾಶಯ, ಪರಮಾನಂದ ಪರಮಹಂಸರು ಯಾರಿರಬಹುದೆಂಬದರ ಕಲ್ಪನೆಯು ತಮಗಾಗಿರುವದು. ಪರಮಾರ ವಾಕ್ಪತಿ ಮುಂಜರಾಜನು ರಾಜಭಗಿನಿಯಾದ ಕುಸುಮಕುಮಾರಿಯನ್ನು ಕರೆದೊಯ್ಯಬೇಕೆಂಬ ಉದ್ದೇಶದಿಂದ ಸಂನ್ಯಾಸಿವೇಷ ಧಾರಣ ಮಾಡಿ ಬುದ್ಧವಿಹಾರಕ್ಕೆ ಬಂದಿದ್ದನು. ಅವನು ಅನೇಕ ಬಗೆಯ ಕಾರಸ್ಥಾನಗಳನ್ನು ರಚಿಸಿ, ಬುದ್ಧ ತಾಪಸ-ತಾಪಸಿಯರಾದ ಧರ್ಮಘೋಷ-ಸರ್ವಾರ್ಥ ಸಿದ್ಧಿಯವರ ಮನಸ್ಸನ್ನು ಒಲಿಸಿಕೊಂಡಿದ್ದನು. ಈ ಬುದ್ಧಗಳು ಅತ್ಯಂತ ಸ್ವಧರ್ಮಾಭಿಮಾನಿಗಳಾಗಿದ್ದರು. ಶ್ರೀಮಜ್ಜಗದ್ಗುರು ಆದ್ಯ ಶಂಕರಾಚಾರ್ಯರಿಂದ ಭರತವರ್ಷದಲ್ಲಿ ಬೌದ್ಧಧರ್ಮವು ನಾಮಶೇಷವಾದ್ದರಿಂದ ಹಲಕೆಲವು ಬೌದ್ಧಯತಿಗಳು ಸ್ವಧರ್ಮದ ಏಳ್ಗೆಗಾಗಿ ಶಕ್ತಿ ಮೀರಿ ಯತ್ನಿಸತೊಡಗಿದ್ದರು. ಧರ್ಮಘೋಷ ಸರ್ವಾರ್ಥಸಿದ್ಧಿಯವರಾದರೂ ಅದೇ ಪ್ರಯತ್ನದಲ್ಲಿ ತೊಡಗಿದ್ದರು. ಧರ್ಮಾಭ್ಯುದಯವಾಗಬೇಕಾದರೆ ರಾಜಾಶ್ರಯವು ಅವಶ್ಯವಾಗಿ ಬೇಕೆಂಬದು ಅವರಿಗೆ ತಿಳಿದಿತ್ತು. ರಾಷ್ಟ್ರಕೂಟ ಸಾರ್ವಭೌಮರೂ, ಚಾಲುಕ್ಯ ಸಾರ್ವಭೌಮನಾದ ತೈಲಪದೇವನೂ ಸನಾತನ ಧರ್ಮಾನುಯಾಯಿಗಳಾದ್ದರಿಂದ ಅವರ ಪ್ರಯತ್ನಕ್ಕೆ ಯಶಸ್ಸು ದೊರೆ

ತಿದ್ದಿಲ್ಲ. ಮುಂಜರಾಜನು ಬೌದ್ಧಧರ್ಮವನ್ನು ಸ್ವೀಕರಿಸಲೊಪ್ಪಿ, ಆ ಧರ್ಮದ ಏಳ್ಗೆಗಾಗಿ ಯತ್ನಿಸುವೆನೆಂದು ಹೇಳಿದ್ದರಿಂದ ಬುದ್ಧಭಿಕ್ಷುಗಳಾದ ಧರ್ಮಘೋಷ ಸರ್ವಾರ್ಥಸಿದ್ಧಿಯರು ಕೃತಕೃತ್ಯರಾಗಿದ್ದರು. ಅವರು ಮುಂಜರಾಜನ ಅಭಿಲಾಷೆಯನ್ನು ಪೂರ್ತಿಗೊಳಿಸಲಿಕ್ಕೆ ತಮ್ಮ ಶಕ್ತಿಯಿಂ ಯತ್ನಿಸುವದಕ್ಕೆ ಟೊಂಕಕಟ್ಟಿದರು.

ಬುದ್ಧ ವಿಹಾರದಲ್ಲಿ ಪರಮಾನಂದ ಪರಮಹಂಸರು ಧರ್ಮಘೋಷ ಯತಿಯೊಡನೆ ಮಾತನಾಡುತ್ತ ಕುಳಿತಿದ್ದರು. ಯಜ್ಞಯಾಗಾದಿ ಹಿಂಸಾಯುಕ್ತವಾದ ವೈದಿಕ ಧರ್ಮಕ್ಕಿಂತ ಅಹಿಂಸಾಪರವಾದ ಬೌದ್ಧಧರ್ಮವು ಶ್ರೇಷ್ಠವೆಂಬದನ್ನು ಧರ್ಮಘೋಷನು ಪರಮಾನಂದರಿಗೆ ಪ್ರತಿಪಾದಿಸುತ್ತಿದ್ದನು. ಪರಮಾನಂದರಾದರೂ ಬೌದ್ಧಯತಿಯ ಮಾತುಗಳಿಗೆ ಅನುಮೋದನವೀಯತೊಡಗಿದ್ದನು. ಅಷ್ಟರಲ್ಲಿ ಧರ್ಮಘೋಷನ ಶಿಷ್ಯನೊಬ್ಬನು ಅಲ್ಲಿಗೆ ಬಂದು:—"ಪರಮಹಂಸರೆ, ರಾಜಭಗಿನಿಯವರಾದ ಕುಸುಮಕುಮಾರಿ ದೇವಿಯವರೂ ರಾಜಪತ್ನಿ ಜಾಕಲದೇವಿಯವರೂ ಸರ್ವಾರ್ಥಸಿದ್ಧಿಯವರೊಡನೆ ಇಲ್ಲಿಗೆ ಬರುವದಕ್ಕಾಗಿ ರಾಜಧಾನಿಯಿಂದ ಹೊರಟಿರುವರು" ಎಂದು ಹೇಳಿದನು. ಕೂಡಲೆ ಪರಮಹಂಸರು ವಿಸ್ಮಯದಿಂದ:—"ಏನು; ರಾಜಪತ್ನಿಯವರೂ ಇಲ್ಲಿಗೆ ಬರುವರೆ?"

"ಹೌದು, ಸ್ವಾಮಿ!"

ಶಿಷ್ಯನ ಮಾತುಗಳಿಂದ ಪರಮಹಂಸರು ವಿಚಾರಗೊಂಡರು. ಈಗ ಅವರು ಶಿಷ್ಯನನ್ನು ಕುರಿತು "ಹೀಗೆ ಮಾಡು. ನಾವು ಇಂದು ಒಂದೇ ದಿನ ಇಲ್ಲಿ ಇರುವೆವು. ಬರೇ ನಾಸ್ತಿಕತ್ವವನ್ನು ಬೋಧಿಸುವವರಿಂದ ನಮಗೆ ಜೀವದ ಮುಕ್ತಿ ಬಂದಂತಾಗುವದು? ಈಗ ನೀನು ಹೋಗು" ಎಂದು ನುಡಿಯಲು, ಶಿಷ್ಯನು ಅಲ್ಲಿಂದ ಹೊರಟುಹೋದನು. ಅನಂತರದಲ್ಲಿ ಅವರು ಧರ್ಮಘೋಷನನ್ನು ಕುರಿತು:—"ಜಾಕಲದೇವಿಯು ಕುಸುಮಕುಮಾರಿಯೊಡನೆ ಬರತೊಡಗಿರುವಳಂತೆ; ಈ ಕೆಲಸವು ನೆಟ್ಟಗಾಗಲಿಲ್ಲ. ಕುಸುಮಕುಮಾರಿಯೊಬ್ಬಳೇ ಬಂದಿದ್ದರೆ ಒಳಿತಾಗುತ್ತಿತ್ತು. ಏಕಾಂತದಲ್ಲಿ ಮಾತನಾಡತಕ್ಕ ಕೆಲವು ವಿಷಯಗಳಿರುವವು. ಜಾಕಲದೇವಿಯು ಕುಸುಮಕುಮಾರಿಯ ಜೊತೆಯಲ್ಲಿದ್ದರೆ ಮಾತುಕತೆಗಳು ಜರುಗುವದಕ್ಕೆ ದೊಡ್ಡ ಆತಂಕವಾದಂತಾಯಿತು."

"ಪರಮಹಂಸರೇ, ಅವರು ಇಲ್ಲಿಗೆ ಬಂದ ಮೇಲೆ ಏನಾದರೂ ಹಂಚಿಕೆ ಮಾಡೋಣವಂತೆ"

ಧರ್ಮಘೋಷನು ಹೀಗೆ ನುಡಿಯುತ್ತಿರಲು ಕುಸುಮಕುಮಾರಿ, ಜಾಕಲದೇವಿ, ಸರ್ವಾರ್ಥಸಿದ್ಧಿ ಇವರೆಲ್ಲರು ವಿಹಾರಕ್ಕೆ ಬಂದಿರುವರೆಂಬ ವಾರ್ತೆಯನ್ನು ಸೇವಕರು ಹೇಳಿದರು. ಕೂಡಲೆ ಪರಮಹಂಸರ ಮುಖವು ವಿಲಕ್ಷಣವಾಗಿ ಕಳೆಗೊಂಡಿತು. ಅವರ ಹೃದಯದಲ್ಲಿ ಆನಂದೋರ್ಮಿಗಳು ಹೊರಸೂಸತೊಡಗಿದವು. ಪರಮಹಂಸರು ತಲ್ಲೀನತೆಯನ್ನು ತಾಳಿ ತಾವಾಗಿ ಕುಳಿತಿರಲು ಅಲ್ಲಿಗೆ

ಸರ್ವಾರ್ಥಸಿದ್ಧಿಯು ಬಂದಳು. ಅವಳನ್ನು ನೋಡಿದ ಕೂಡಲೆ ಪರಮಹಂಸರು ಆತುರತೆಯಿಂದ:—"ತಾಪಸಿಯವರೆ, ರಾಜಕುಮಾರಿಯೆಲ್ಲಿ?"

"ಪರಮಹಂಸರೇ, ಅವರು ಹೊರಗೆ ಇರುವರು. ಈ ಸಮಯದಲ್ಲಿ ಯತೀಶ್ವರರು ಪುರಶ್ಚರಣಕ್ಕೆ ಕುಳಿತಿರಬಹುದೆಂದು ಅವರಿಗೆ ಹೇಳಿ ಇಲ್ಲಿಗೆ ಬಂದೆನು. ಕುಸುಮಕುಮಾರಿದೇವಿಯವರೊಡನೆ ಜಾಕಲದೇವಿಯವರೂ ಆಗಮಿಸಿರುವರು. ಏಕಾಂತಕ್ಕಂತು ಅವಕಾಶವಿಲ್ಲ. ರಾಜಕುಮಾರಿಯವರನ್ನು ಇಲ್ಲಿಂದ ತೆಗೆದು ಕೊಂಡುಹೋಗಲಿಕ್ಕಾದರೂ ಮಾರ್ಗವಿಲ್ಲ"

ತಾಪಸಿಯವರೇ, ಹೀಗೇನು ಹೇಳುವಿರಿ? ಇಲ್ಲಿಂದ ಧಾರಾನಗರಿಯವರೆಗೆ ಸರಳವಾದ ಮಾರ್ಗವಿರುವದು!"

"ಆ ಮಾರ್ಗವು ನಿಮ್ಮೊಬ್ಬರಿಗೆ ಮಾತ್ರ ಸರಳವಿರಬಹುದು."

"ಕುಸುಮಕುಮಾರಿಯು ನನ್ನೊಡನೆ ಬರಲಿಕ್ಕೆ ಸಿದ್ಧಳಿಲ್ಲನೇನು?"

"ಕಳ್ಳತನದಿಂದ ಜಾರಿ ಹೋಗಲಿಕ್ಕೆ ರಾಜಕುಮಾರಿಯವರು ಹಿಂಜರಿಯುತ್ತಾರೆ. ಒಂದು ವೇಳೆ ಉಪಾಯಾಂತರದಿಂದ ಅವರು ನಿಮ್ಮೊಡನೆ ಬರಲೊಪ್ಪಿದರೂ, ಅವರಿಗೆ ಇಲ್ಲಿಂದ ಜಾರಿಹೋಗಲಿಕ್ಕೆ ಬರುವಂತಿಲ್ಲ"

"ಅದೇಕೆ?" ಪರಮಹಂಸರು ಉತ್ಕಂಠಯಿಂದ ಕೇಳಿದರು.

"ಬಾರಪ್ಪ ಸೇನಾಪತಿಗಳು ಅವರ ಕಾವಲಿಗಾಗಿ ಸಶಸ್ತ್ರ ಸೈನಿಕರನ್ನು ಕಳುಹಿಸಿರುವರು."

ಸರ್ವಾರ್ಥಸಿದ್ಧಿಯ ಮಾತುಗಳನ್ನು ಕೇಳಿದ ಕೂಡಲೆ ಪರಮಹಂಸರು ನಿಟ್ಟುಸಿರು ಬಿಟ್ಟರು. ಕೈಗೆ ಬಂದ ತುತ್ತು ಬಾಯಿಗೆ ಬರದಂತಾಯಿತೆಂದು ಅವರು ವ್ಯಸನ ಬಡತೊಡಗಿದರು. ಅನಂತರದಲ್ಲಿ ಅವರು—"ಸರ್ವಾರ್ಥಸಿದ್ಧಿಯವರೆ, ಬಹಳೇ ಪ್ರರಿಶ್ರಮಬಟ್ಟು ಇಲ್ಲಿಯ ವರೆಗೆ ಬಂದದ್ದು ವ್ಯರ್ಥವಾಯಿತು. ತೈಲಪದೇವನು ಬನವಾಸಿಗೆ ದಂಡೆತ್ತಿ ಹೋಗಿರುವದರಿಂದ ಈ ಸಮಯದಲ್ಲಿ ಸುಲಭವಾಗಿ ಕಾರ್ಯವಾಗುವದೆಂದು ನಾನು ಉತ್ಸಾಹಗೊಂಡಿದ್ದೆನು. ಸಾಕಷ್ಟು ಸೈನ್ಯವನ್ನು ತೆಗೆದುಕೊಳ್ಳದೆ ಇಲ್ಲಿಗೆ ಬಂದದ್ದು ಹೆಡ್ಡತನವಾಯಿತು. ಕುಸುಮಕುಮಾರಿಯು ಏಕಾಂಗಿಯಾಗಿ ಇಲ್ಲಿಗೆ ಬಂದಿದ್ದರೆ ಒಳಿತಾಗುತ್ತಿತ್ತು. ಯಾವದಾದರೊಂದು ಹಂಚಿಕೆ ಮಾಡಿ ನಾಳೆಗಾದರೂ ಕಾರ್ಯವನ್ನು ಸಾಧಿಸಲಿಕ್ಕೆ ಬೇಕು. ಕುಸಮಕುಮಾರಿಯು ಹೊರಡಲು ಸಿದ್ಧಳಾದರೆ ಮಾತ್ರ ಒಳಿತಾಗುವದು."

"ಪರಮಹಂಸರೆ, ನೀವು ಏನು ಹಂಚಿಕೆ ಮಾಡಿದರೂ ಈಗ ಯಶವು ಲಭಿಸಲಾರದು. ರಾಜಕುಮಾರಿಯವರು ಇಲ್ಲಿಂದ ಹೊರಡಲು ಸಿದ್ಧರಿಲ್ಲ; ಸಿದ್ಧರಾದರೂ ಸುರಕ್ಷಿತ ರೀತಿಯಿಂದ ಪಾರಾಗಿ ಹೋಗಲಿಕ್ಕೆ ಮಾರ್ಗವಿಲ್ಲ ಪರಮಹಂಸರಾದ ನಿಮಗೆ ಇಂದು ಒಂದು ರಾತ್ರಿ ಮಾತ್ರ ಇರಲಿಕ್ಕೆ ಬರುನಂತಿದೆ. ತೈಲಪದೇವಮಹಾರಾಜರು ಬನವಾಸಿಯ ಕಾಳಗದಲ್ಲಿ ವಿಜಯಿಗಳಾಗಿ ಹೊರಟಿರುವರಂತೆ. ನಾಳೆಗೆ

ಅವರು ಇಲ್ಲಿಗೆ ಬರುವರು. ಒಟ್ಟಿನ ಮೇಲೆ ನಿಮಗೆ ಸದ್ಯದ ಕಾಲವು ಪ್ರತಿಕೂಲ ವಿರುವದು ಕೇವಲ ದರ್ಶನದಿಂದ ಸಂತುಷ್ಟರಾಗಿ ಹೋಗುವ ಪ್ರಸಂಗವಿರುವದು."

"ಪರಮಹಂಸರೆ," ಧರ್ಮಘೋಷನು ಯತಿಗಳನ್ನು ಸಮಾಧಾನ ಬಡಿಸುವದಕ್ಕಾಗಿ—"ನೀವು ಮಹಾಬಲದೊಂದಿಗೆ ಹೊರಟು ಬಂದು ಕುಸುಮಕುಮಾರೀ ದೇವಿಯವರನ್ನು ಗೆದ್ದುಕೊಂಡು ಹೋದರೆ ನಿಮಗೆ ಗೌರವವು ಬರುವದು. ಕ್ಷಾತ್ರ ವೀರರು ಚೌರ್ಯ ಕರ್ಮ ಮಾಡಲಾಗದು."

"ದರ್ಶನಾಕಾಂಕ್ಷಿಗಳಾದ ರಾಜಮಂಡಲವನ್ನು ಕರತರಲಾ?" ಎಂದು ಸರ್ವಾರ್ಥಸಿದ್ಧಿಯು ಪರಮಹಂಸರನ್ನು ಕೇಳಿದಳು.

"ಏನೂ ಅಡ್ಡಿಯಿಲ್ಲ. ಕರೆತನ್ನಿರಿ."

ಸರ್ವಾರ್ಥಸಿದ್ಧಿಯು ಅಲ್ಲಿಂದ ಹೊರಗೆ ಬಂದು ಯತೀಶ್ವರರ ಪುರಶ್ಚರಣವು ಮುಗಿದಿರುವದೆಂದು ಜಾಕಲದೇವಿ ಕುಸುಮಕುಮಾರಿಯವರಿಗೆ ಹೇಳಿ, ಅವರನ್ನು ಒಳಗೆ ಕರೆತಂದಳು. ಪರಸ್ಥಾನುಪ ಪರಮಹಂಸರನ್ನು ಕಂಡ ಕೂಡಲೆ ಜಾಕಲ ದೇವಿಯ ಹೃದಯವು ಭಕ್ತಿರಸದಿಂದ ತುಂಬಿತು. ಯತಿಗಳು ತಮ್ಮ ಉಜ್ವಲ ವಾದ ತಪೋಬಲದಿಂದ ಮಹಾಪಾತಕಗಳನ್ನು ನಾಶಮಾಡುವಂತಹ ಸತ್ವಶಾಲಿ ಗಳಾಗಿ ಅವಳಿಗೆ ಕಂಡರು. ಅವರ ತೇಜಸ್ವಿಯಾದ ಮುಖಚರ್ಯೆಯನ್ನು ನೋಡಿ ಮಹಾರಾಣಿಯು ಅಚ್ಚರಿಗೊಂಡಳು. ದೇವರ್ಷಿಗಳಂತೆ ಪ್ರತಿಭಾಸಂಪನ್ನರಾದ ಪರಮಹಂಸರ ದರ್ಶನದಿಂದ ಕೃತಾರ್ಥಳಾವೆನೆಂದು ಅವಳು ತಲೆಬಾಗಿ ಅವರಿಗೆ ವಂದನೆಗಳನ್ನರ್ಪಿಸಿದಳು. ಜಾಕಲದೇವಿಯು ಅವರಿಗೆ ನಮಸ್ಕಾರ ಮಾಡಿದ ಕೂಡಲೆ ಕುಸುಮಕುಮಾರಿಯಾದರೂ ಅಭಿವಂದಿಸಿದಳು. ಕುಸುಮಕುಮಾರಿಯ ಹೃದಯವು ಮಾತ್ರ ವಿಲಕ್ಷಣವಾಗಿ ಹೊಯ್ದಾಡತೊಡಗಿತ್ತು. ಮನ್ಮಥಸದೃಶ ರೂಪ ಸಂಪನ್ನರಾದ ತನ್ನ ಮಾನಸ ಪತಿಗಳು ಭಗವೀ ಲಾಂಛನದಿಂದ ತಮ್ಮ ಕಾಂತಿಗೆ ಕುಂದು ತಂದುಕೊಂಡಿರುವರೆಂದು ಅವಳು ಭಾವಿಸಿದಳು. ಅವಳು ತನ್ನ ಹೃದಯೇಶ್ವರನ ಮುಖಮುದ್ರೆ [illegible] ಪರಿವೆಯಿಲ್ಲದೆ ದಿಟ್ಟಿಸಿ ನೋಡುತ್ತ ನಿಂತು ಬಿಟ್ಟಿದ್ದಳು. ಪರ[illegible] ತಮ್ಮ ಹೃದಯ ಸಮ್ರಾಟಳನ್ನು ಕದ್ದು ಕದ್ದು ನೋಡಲಾರಂಭಿಸಿ[illegible] ಸ್ಥಿತಿಯು ಬಹಳ ವೇಳೆಯ ವರೆಗೆ ನಡೆದರೆ ಜನರ ಸಂಶಯಕ್ಕೆ ಕಾರಣವಾದೀ[illegible] ತಿಳಿದು ಸರ್ವಾರ್ಥಸಿದ್ಧಿಯು ಪರಮಹಂಸನನ್ನು ಜಾಗ್ರತೆಗೊಳಿಸುವದಕ್ಕಾಗಿ—'ಯತಿವರ್ಯರೆ, ಇವರು ತೈಲಪದೇವ ಮಹಾರಾಜರ ಪಟ್ಟಮಹಿಷಿಯುವರಾದ ಜಾಕಲದೇವಿಯವರು. ಇವರು ರಾಜ ಭಗಿನಿಯವರಾದ ಕುಸುಮದೇವಿಯವರು. ಇಂದು ಪ್ರಾತಃಕಾಲದಲ್ಲಿ ತಮ್ಮ ದರ್ಶನಕ್ಕೆ ಬಂದ ರಾಜಮಾತಾ ಬೊಂಥಾದೇವಿಯವರೇ ಕುಸುಮಕುಮಾರಿದೇವಿಯವರ ತಾಯಿಯವರು. ನೀವು ಇವರಿಗೆ ಅನುಗ್ರಹ ಮಾಡಬೇಕು."

"ತಾಪಸಿಯವರೆ, ನಿಗ್ರಹಾನುಗ್ರಹ ಶಕ್ತಿಯುಳ್ಳವನು ಪರಮಾತ್ಮನು;

ಮನುಷ್ಯರಾದ ನಮ್ಮಂತಹರ ಕೈಯಲ್ಲಿ ಏನೂ ಇರುವದಿಲ್ಲ. ಜಾಕಲದೇವಿಯವರು ಭಗವದನುಗ್ರಹದಿಂದ ಕರ್ನಾಟಕದ ಸಾಮ್ರಾಜ್ಞಿಯವರಾಗಿರುವರು. ಕುಸುಮ ಕುಮಾರಿಯವರಗಂತೂ ಒಬ್ಬ ನಾಮಾಂಕಿತ ಸತ್ತ್ವಶಾಲಿಯಾದ ನರೇಂದ್ರರನ್ನು ವರಿಸುವ ಸಂಕಲ್ಪ ಮಾಡಿಕೊಂಡಿರುವರು. ಇವರ ಇಚ್ಛೆಯು ಈಡೇರಲಿಕ್ಕೆ ಇನ್ನೂ ಅವಕಾಶವಿರುವದು. ಇವರಿಬ್ಬರೂ ಸೌಭಾಗ್ಯಶಾಲಿನಿಯರಿರುತ್ತಾರೆ."

ಕುಸುಮಕುಮಾರಿಯು ಒಬ್ಬ ನರೇಂದ್ರನನ್ನು ವರಿಸುವದಕ್ಕಾಗಿ ಸಂಕಲ್ಪ ಮಾಡಿಕೊಂಡ ಭವಿಷ್ಯವನ್ನು ಪರಮಹಂಸರು ಹೇಳಿದ್ದನ್ನು ಕೇಳಿ ಜಾಕಲದೇವಿಯು ವಿಸ್ಮಿತಳಾದಳು. ಯತಿಗಳು ತ್ರಿಕಾಲಜ್ಞಾನಿಗಳೂ ಸರ್ವಜ್ಞರೂ ಇರುವರೆಂದು ಅವಳು ತಿಳಿದುಕೊಂಡಳು. ಆಗ ಅವಳು ಯತಿಗಳನ್ನು ಕುರಿತು:—"ಮಹಾರಾಜರೇ, ಕುಸುಮಕುಮಾರಿದೇವಿಯವರು ಯಾರನ್ನು ವಿವಾಹವಾಗಬೇಕೆಂದು ಸಂಕಲ್ಪ ಮಾಡಿಕೊಂಡಿರುವರೋ, ಅವರನ್ನೇ ವರಿಸಬೇಕೆಂಬ ಯೋಗಫಟಿಸಿರುವದೇನು?"

"ಮಹಾರಾಜ್ಞಿಯವರೆ, ಪರಮಾರ ವಂಶದ ಮುಂಜಮಹಾರಾಜರನ್ನೇ ಇವರು ವರಿಸುವರು. ದುಷ್ಟಗ್ರಹಗಳ ಬಾಧೆಯು ಮೂಲಕ ವಿವಾಹಕ್ಕೆ ಅಲ್ಪಸ್ವಲ್ಪ ಎಡರುಗಳುಂಟಾಗುವವು. ಸ್ವತಃ ರಾಜರು ರಾಜಕುಮಾರಿಯವರ ಇಚ್ಛೆಯನ್ನು ಈಡೇರಿಸಲಿಕ್ಕೆ ಬೇಗನೆ ಸಮ್ಮತಿಸಲಾರರು."

"ಗುರುಮಹಾರಾಜರೆ, ನಾವು ಕಾಶೀವಾಸದಲ್ಲಿ ಆಗಲೊಲ್ಲದೇಕೆ, ಈ ತಮ್ಮ ಚರಣದಾಸಿಯ ಇಚ್ಛೆಯಂತೆ ಕಾರ್ಯ ನಾಗುವುದರೂ ನಿಜವಷ್ಟೆ?"

"ರಾಜಕುಮಾರಿಯವರೆ," ಕುಸುಮಕುಮಾರಿಯ ಮಾತಿಗೆ ಪರಮಹಂಸರು ಅತ್ಯಾನಂದದಿಂದ ಉತ್ತರವೀಯತೊಡಗಿದರು. "ಈಶ ಸಂಕೇತವು ಎಂದೂ ಸುಳ್ಳಾಗುವದಿಲ್ಲ. ತೈಲಪದೇವ ಮಹಾರಾಜರು ನಿರರ್ಥಕವಾಗಿ ಈ ಕೆಲಸವನ್ನು ವಿಘ್ನಮಾಡತೊಡಗಿರುವರು. ಕೊನೆಗೆ ನಿಮ್ಮ ಇಚ್ಛೆಯು ಸಫಲವಾಗುವದೆಂದು ನಾನು ನಿಮಗೆ ಆಶ್ವಾಸನೆ ಕೊಡುವೆನು."

"ಯತಿಗಳ ಭವಿಷ್ಯವು ವಿಶ್ವಾಸಾರ್ಹವಿರುವದು." ಎಂದು ಸರ್ವಾರ್ಥಸಿದ್ಧಿಯು ನುಡಿದಳು.

"ಮೊದಲು ಜೊಂಘಾದೇವಿಯವರು ರಾಜಕುಮಾರಿಯವರಿಗೆ ಪ್ರತಿಕೂಲರಾಗಿದ್ದರು. ತೈಲಪದೇವಮಹಾರಾಜರು ಇನ್ನೂ ಕೆಲವು ದಿನಗಳ ವರೆಗೆ ಇವರ ಇಚ್ಛೆಯನ್ನು ಈಡೇರಿಸಲಿಕ್ಕೆ ಸಿದ್ಧರಾಗಲಿಕ್ಕಿಲ್ಲ" ಎಂದು ಪರಮಹಂಸರು ನುಡಿದು, ಜಾಕಲದೇವಿ ಕುಸುಮಕುಮಾರಿಯವರನ್ನು ಕುರಿತು—"ನೀವು ಯತಿ-ಸಾಧು-ಸಂತರು ಮೊದಲಾದವರಲ್ಲಿ ಭಕ್ತಿಯುಳ್ಳವರಿದ್ದುದನ್ನು ನೋಡಿ ಆನಂದವಾಗಿದೆ."

"ಯತಿಮಹಾರಾಜರೆ, ಕುಸುಮಕುಮಾರಿದೇವಿಯವರು ಮೊದಲಿಂದ ಮೇಲೆ ಇಲ್ಲಿಗೆ ಬರುವರು. ನಾವು ಬೌದ್ಧಭಿಕ್ಷುಗಳಾದರೂ ನಮ್ಮ ವಿಷಯಕ್ಕೆ ಇವರು ಬಹಳೇ

ಭಕ್ತಿಯುಳ್ಳವರಿರುವರು. ಮಹಾರಾಣಿಯವರು ಇಲ್ಲಿಗೆ ಎಂದೂ ಬಂದಿರದಿದ್ದರೂ ಅವರು ನಮ್ಮಲ್ಲಿ ನಿಷ್ಠೆಯುಳ್ಳವರಾಗಿರುವರು. ನಾವು ಬೌದ್ಧರೆಂದು ಅವರು ನಮ್ಮನ್ನು ಎಂದೂ ಉಪೇಕ್ಷಿಸುತ್ತಿರುವದಿಲ್ಲ" ಧರ್ಮಘೋಷನು ನುಡಿದನು.

"ಧರ್ಮಘೋಷರೆ," ಪರಮಹಂಸರು ಸಮತ್ವ ಭಾವನೆಯನ್ನು ತೋರಿಸುವದಕ್ಕಾಗಿ—"ಜಾತಿಗೆ ಭೇದವಾದರೂ ನೀತಿಗೆ ಭೇದವಿಲ್ಲ ಸಮಂಜಸ ಬುದ್ಧಿಯವರು ಸಾಧು-ಸತ್ಪುರುಷರಿಗೆ ಮಾನ-ಮರ್ಯಾದೆಗಳನ್ನು ಕೊಟ್ಟೇಕೊಡುತ್ತಾರೆ. ಸಾಧು-ಸಂತರು ಪ್ರತಿಯೊಂದು ಜನಾಂಗದಲ್ಲಿರುವರು. ಯಾವ ಜನಾಂಗದವರಾಗಿದ್ದರೂ ಅವರು ವಂದನೀಯರೇ ಇರುವರು."

"ಪರಮಹಂಸರ ಅಭಿಪ್ರಾಯವು ಯಥಾಯೋಗ್ಯವಿರುವದು"

ಸರ್ವಾರ್ಥಸಿದ್ಧಿಯು ಹೀಗೆ ನುಡಿದ ಮೇಲೆ ಪರಮಹಂಸರು ಧರ್ಮೋಪದೇಶವನ್ನು ಪ್ರಾರಂಭಿಸಿದರು. "ಮನುಷ್ಯರು ಎಂತಹ ಸ್ಥಿತಿಯಲ್ಲಿಯೂ ಸದಸದ್ವಿವೇಕ ಬುದ್ಧಿಯನ್ನು ಕಳೆದುಕೊಳ್ಳಬಾರದು. ಅವರು ತಮ್ಮ ಅಂತಿಮಧ್ಯೇಯವನ್ನು ಈಡೇರಿಸಿಕೊಳ್ಳುವಾಗ ಇಲ್ಲದ ಮಾಯಾ ಮೋಹಗಳಿಗೆ ವಶರಾಗಬಾರದು. ಅಂತಿಮ ಧ್ಯೇಯವನ್ನು ಈಡೇರಿಸಿಕೊಳ್ಳುವಾಗ ಕೆಲವು ಕೃತಿಗಳು ಧರ್ಮವಿರುದ್ಧವಾಗಿ ಕಾಣಬಹುದು; ಜನತೆಗೂ ವಿಪರೀತವೆನಿಸಬಹುದು; ಆದರೆ ಒಮ್ಮೊಮ್ಮೆ ಎಲ್ಲ ಬಗೆಯ ಉಪಾಧಿಗಳನ್ನು ಬದಿಗಿರಿಸಿ ತಮ್ಮ ಮನಸ್ಸಿನ ಸದುದ್ದೇಶವನ್ನು ಈಡೇರಿಸಿಕೊಳ್ಳುವದಕ್ಕಾಗಿ ಯತ್ನಿಸುವದರಲ್ಲಿಯೇ ನಿಜವಾದ ಪುರುಷಾರ್ಥವಿರುವದು. ನನ್ನ ಹೆಂಡಿರು, ನನ್ನ ಬಂಧುಗಳು, ನನ್ನ ತಾಯಿ-ತಂದೆಗಳು ನನ್ನ ಮಕ್ಕಳು ಎಂಬ ವ್ಯಾಮೋಹವನ್ನು ಎಂದೂ ಹಚ್ಚಿಕೊಳ್ಳಬಾರದು ಈ ಜಗತ್ತೇ ಮಿಥ್ಯಾರೂಪವಾಗಿರುವಾಗ ಸ್ವಕೀಯರು, ಬಾಂಧವರು, ಇಷ್ಟಮಿತ್ರರು ಎಂದು ಭ್ರಾಂತಿಪರರಾಗುವದರಲ್ಲಿ ತಥ್ಯವೇನಿರುವದು? ನಿಷ್ಕಾಮಮನೋವೃತ್ತಿಯವರಾಗಿ ಸತ್ಕಾಮರತರಾಗುವದರಲ್ಲಿಯೆ ನಿಜವಾದ ಮನುಷ್ಯತ್ವವಿರುವದು. ಅಸದ್ಧರ್ಮವೆಂದು ಒಮ್ಮೊಮ್ಮೆ ಅನ್ಯಾಯವೆಂದು ತೋರುವ ಮಾರ್ಗಗಳಿಂದ ಹೋಗಬೇಕಾಗುವದು. ಅಂತಹ ಪ್ರಸಂಗಗಳಲ್ಲಿ ಮನುಷ್ಯನ ಭಾವನೆಯು ನಿರ್ಮಲವಾದದ್ದಿದ್ದರೆ ಅವನಿಗೆ ಯಾವ ದೋಷವೂ ಗುನದಿಲ್ಲ. ಕೊನೆಗೆ ಯಾರಿಗೆ ಯಾರೂ ಇಲ್ಲವೆಂದು ಎಲ್ಲ ಉಪಾಧಿಗಳನ್ನು ಕಡಿದೊಗೆದು ಅಂತಿಮಧ್ಯೇಯವನ್ನು ಸಾಧಿಸಬೇಕು. ಎಳೆಯ ತಾರುಣ್ಯದಲ್ಲಿ ಎಲ್ಲ ಬಗೆಯ ಐಶ್ವರ್ಯಗಳನ್ನು ತುಚ್ಛೀಕರಿಸಿ ಸಂನ್ಯಾಸವನ್ನು ತೆಗೆದುಕೊಂಡು, ತಪಾನುತಪಗಳ ವರೆಗೆ ತಪಾಚರಣೆ ಮಾಡಿ ಶಮದಮೆಗಳನ್ನು ಮಾಡಿದ ನನ್ನನ್ನು ಅಲ್ಪಮೇಧಾವಿಗಳು ನೋಡಿದರೆ ಹುಚ್ಚನೆಂದು ಹೆಸರಿಡಬಹುದು. ಆದರೆ ನಾನು ಯಾರ ಮಾತುಗಳನ್ನೂ ಲಕ್ಷಿಸುವದಿಲ್ಲ ಅಂತಿಮ ಧ್ಯೇಯವನ್ನು ಈಡೇರಿಸುವಾಗ ಅನೇಕ ಬಗೆಯ ಸಂಕಟಗಳನ್ನನುಭವಿಸಬೇಕಾಗುವದು. ಮನುಷ್ಯನು ಸತ್ಯನಿಷ್ಠನಾಗಿ ನಡೆದು ಆತ್ಮೋನ್ನತಿಯನ್ನು ಹೊಂದ

ಲಿಕ್ಕೆ ಬೇಕು. ಇಲ್ಲದಿದ್ದರೆ ಅವನ ಜೀವನವು ವ್ಯರ್ಥವಾಗುವದು.''

"ಯತಿಮಹಾರಾಜರೆ," ಕುಸುಮಕುಮಾರಿಯು ಹರ್ಷನಿರ್ಭರಳಾಗಿ:— ಸಾಮಾನ್ಯ ಜನತೆಯು ಅಜ್ಞಾನತಮದಿಂದ ಅಂಧವಾಗಿರುವದು. ಆ ಅಂಧತೆಯು ತಮ್ಮಂತಹ ಸಾಧುಸಂತರ ಹಾಗು ಯತೀಶ್ವರರ ಅನುಗ್ರಹದಿಂದಲೇ ನಿವಾರಿಸಲ್ಪಡ ತಕ್ಕದಾಗಿದೆ. ಏಕನಿಷ್ಠೆಯಿಂದ ನಡೆಯುವ ಮನುಷ್ಯರನ್ನು ಅಜ್ಞಾನಪಾಶದಿಂದ ಬಿಡುಗಡೆಮಾಡದಿದ್ದರೆ ನಿಮ್ಮಂತಹರಲ್ಲಿ ನಿಷ್ಠೆಯನ್ನಿಟ್ಟದ್ದಕ್ಕೆ ಫಲವೇನು? ಯಾರು ಸನ್ನಿಷ್ಠೆಯವರಿರುವರೋ ಅವರನ್ನು ತಮ್ಮಂತಹರು ಉದ್ಧಾರ ಮಾಡಲಿಕ್ಕೆ ಬೇಕು. ಹಾಗಿಲ್ಲದಿದ್ದರೆ ಕಾವಿಯ ಲಾಂಛನವನ್ನು ಧರಿಸಿ ದಿಗಂತವಾಗಿ ಪ್ರವಾಸಮಾಡುತ್ತಿದ್ದ ದರ ಫಲವೇನು? ನಿಮ್ಮಲ್ಲಿ ಅಂತಹ ಶಕ್ತಿಯಿದ್ದರೆ ಉಪದೇಶ ಮಾಡಬೇಕು. ಸಾಮಾನ್ಯ ಜನತೆಯು ಅನೇಕ ವಿಧಗಳಾದ ಉಪಾಧಿಯಿಂದ ಕೂಡಿಕೊಂಡಿರು ವದು. ನೀವು ನಿಮ್ಮ ತಪಃಪ್ರಭಾವದಿಂದ ಅವರ ಉಪಾಧಿಯನ್ನು ನಿವಾರಿಸಲಿಕ್ಕೆ ಬೇಕು. ಹಾಗಿಲ್ಲದಿದ್ದರೆ ಕೇವಲ ದರ್ಶನವೀಯುವದಕ್ಕಾಗಿ ನೀವು ದೇಶದೇಶಗಳ ನ್ನೆಲ್ಲ ಅಂಡಲೆಯುವ ಕಾರಣವೇನು? ಆಪದ್ಧರ್ಮವೆಂದು ತೀರ ಅಪದ್ಧತನ ಮಾಡ ಲಾಗದು. ಮನುಷ್ಯನು ಎಂದೂ ಶೀಲಚ್ಯುತನಾಗಬಾರದು. ಗೌರವವನ್ನು ಕಳೆದುಕೊಳ್ಳಬಾರದು. ಖ್ಯಾತಿಯಂತೆ ರೀತಿಯಿರಬೇಕು. ಯತೀಶ್ವರರೇ, ಅಜ್ಞಾನಾಂಧ ಕಾಲದಲ್ಲಿ ಬಿದ್ದು ಕೊಳೆಯುವವರಾದ ನಮ್ಮಂತಹರಲ್ಲಿ ನಿಮ್ಮ ಉಪದೇಶ ಪ್ರಭಾವದಿಂದ ಜ್ಞಾನಜ್ಯೋತಿಯು ಬೆಳಗುವಂತೆ ಮಾಡಿದರೆ ನಾವೇ ಸನ್ಮಾರ್ಗಕ್ಕೆ ಹತ್ತುವೆವು. ನಾವು ಏಕನಿಷ್ಠೆಯಿಂದ ನಡೆಯುವದಕ್ಕೆ ಹತ್ತು ವೆವು. ನಾವು ಏಕನಿಷ್ಠೆಯಿಂದ ನಡೆಯುವದಕ್ಕೆ ಮಾತ್ರ ಬಲ್ಲೆವು; ಆದರೆ ಅದಕ್ಕೆ ಫಲವೀಯಲು ಪರಮಾತ್ಮನು ಸಮರ್ಥನೂ ಜಾಗ್ರತನೂ ಇದ್ದರೆ ನಿಷ್ಠೆಯಿಂದ ನಡೆದವರು ಕೃತಾರ್ಥರಾಗುವರು. ಹಾಗಿಲ್ಲದಿದ್ದರೆ ಬೊರ್ಕಲ್ಲ ಮೇಲೆ ಮಳೆಗರೆ ದಂತಾಗಿ ಕುದಿಯುತ್ತ ಕುಳಿತುಕೊಳ್ಳಬೇಕಾಗುವದು. ತೊಳಲುತರಸುವ ಬಳ್ಳಿಯು ಕಾಲ್ತೊಡಕಿದಂತಾಯಿತೆಂದು ತಮ್ಮ ದರ್ಶನದಿಂದ ನನಗೆ ಹೇಳಕೂಡ ದಷ್ಟು ಆನಂದವಾಗಿದೆ. ಈ ಭವಸಾಗರವನ್ನು ದಾಟಿಸಲಿಕ್ಕೆ ಪ್ರತ್ಯಕ್ಷ ಪರಮಾತ್ಮ ರಾದ ನೀವು ಸಮರ್ಥರಾಗಲಿಕ್ಕೆ ಬೇಕು."

ಕುಸುಮಕುಮಾರಿಯು ಅಸ್ಖಲಿತ ವಾಣಿಯಿಂದ ಹೀಗೆ ನುಡಿದದ್ದು ಕೇಳಿ ಜಾಕಲದೇವಿಗೆ ಪರಮಾಶ್ಚರ್ಯವಾಯಿತು. ಪ್ರಭಾವಶಾಲಿಗಳಾದ ಯತಿಗಳೆದು ರಿಗೆ ಬಡಬಡ ಮಾತನಾಡುವದು ಯೋಗ್ಯವಲ್ಲವೆಂದು ಅವಳು ಮನಸ್ಸಿನಲ್ಲಿ ಅಂದು ಕೊಂಡಳು. ಕುಸುಮ ಕುಮಾರಿಯ ಭಾಷಣದೊಳಗಿನ ಮರ್ಮವು ಅವಳಿಗೇನೂ ತಿಳಿಯಲಿಲ್ಲ. ಬೌದ್ಧತಾಪಸಿಗಳ ಸಹವಾಸದಿಂದ ಅವಳು ಅಲ್ಪ ಸ್ವಲ್ಪ ವೇದಾಂತ ಜ್ಞಾನಸಂಪಾದನೆ ಮಾಡಿಕೊಂಡಿರುವಳೆಂದು ಜಾಕಲದೇವಿಯು ತಿಳಿದಳು. ಅವಳು ಯಾವ ಮಾತುಗಳನ್ನಾಡದೆ ಸ್ವಸ್ಥವಾಗಿ ಕುಳಿತಳು. ಆಗ ಸರ್ವಾರ್ಥ

ಸಿದ್ಧಿಯು ಕುಸುಮಕುಮಾರಿಯ ತಲ್ಲಣಿಸುವ ಆತ್ಮವನ್ನು ಶಾಂತಗೊಳಿಸುವ ದಕ್ಕಾಗಿ:—"ದೇವಿ, ಮನುಷ್ಯರಿಗೆ ಭಾಗ್ಯೋದಯವಾಗಬೇಕಾದರೆ ಕಾಲದ ಅನು ಕೂಲತೆಯು ಬೇಕಾಗುವದು. ಎಂತಹ ಮಹಾತ್ಮರು ಕೂಡಿದರೂ ಸಂಚಿತಕರ್ಮ ವಿಶೇಷದಿಂದ ಅವರು ತಮ್ಮಲ್ಲಿ ಅನನ್ಯ ಭಾವನೆಯುಳ್ಳವರನ್ನು ಉದ್ಧರಿಸಲು ಒಮ್ಮೊಮ್ಮೆ ಸಮರ್ಥರಾಗುವದಿಲ್ಲ. ಹೀಗಿದ್ದರೂ ಒಮ್ಮೊಮ್ಮೆ ನಿಷ್ಠಾವಂತರಾದ ಮನುಷ್ಯರು ಆತ್ಮೋನ್ನತಿ ಹೊಂದುವರು."

"ಸರ್ವಾರ್ಥಸಿದ್ಧಿಯವರ ಮಾತುಗಳು ಅಕ್ಷರಶಃ ನಿಜವಾದವುಗಳಿರುವವು." ಎಂದು ಧರ್ಮಘೋಷನು ವ್ಯಕ್ತಪಡಿಸಿದನು. ಅನಂತರದಲ್ಲಿ ಸರ್ವಾರ್ಥ ಸಿದ್ಧಿಯು ಜಾಕಲದೇವಿಯನ್ನು ಬೇರೆ ಕಡೆಗೊಯ್ದು, ಕುಸುಮಕುಮಾರಿ-ಪರಮಾ ನಂದ ಪರಮಹಂಸರಿಗೆ ಏಕಾಂತಭಾಷಣಗಳನ್ನಾಡಲಿಕ್ಕೆ ಅನುಕೂಲ ಮಾಡಿ ಕೊಡ ಬೇಕೆಂದು ವಿಚಾರಮಾಡಿ:—"ಮಹಾರಾಣಿಯವರೆ, ಕುಸುಮಕುಮಾರಿ ದೇವಿ ಯವರು ಎಷ್ಟೋಸಾರೆ ಈ ವಿಹಾರಕ್ಕೆ ಬಂದಿದುವರು. ನೀವು ಮಾತ್ರ ಇದಕ್ಕಿಂತ ಮುಂಚೆ ಎಂದೂ ಬಂದಿಲ್ಲ. ಈ ಬೌದ್ಧವಿಹಾರವು ಅಶೋಕ ಮಹಾರಾಜರ ಆಳಿಕೆ ಯಲ್ಲಿ ಕಟ್ಟಿಸಲ್ಪಟ್ಟಿರುವದು. ಇದು ಒಳ್ಳೆಯ ಪ್ರೇಕ್ಷಣೀಯವಿರುವದು. ನಡೆಯಿರಿ; ನಿಮಗೆ ಈ ವಿಹಾರದ ಎಲ್ಲ ಭಾಗಗಳನ್ನು ತೋರಿಸುವೆನು. ಪರಮಹಂಸರ ಪುಣ್ಯ ದಿಂದ ನಿಮ್ಮ ಆಗಮನವಾಯಿತು. ಇಲ್ಲದಿದ್ದರೆ ನೀವು ಇಲ್ಲಿಯವರೆಗೆ ಏಕೆ ಬಂದೀರಿ." ಎಂದು ನುಡಿದು ಜಾಕಲದೇವಿಯನ್ನು ಬೇರೆ ಕಡೆಗೆ ಕರೆದೊಯ್ದಳು. ಅನಂತರ ದಲ್ಲಿ ಕುಸುಮಕುಮಾರಿಯು ಪರಮಾನಂದ ಪರಮಹಂಸರನ್ನು ಕುರಿತು:—

"ಪರಮಹಂಸರೆ............" "ಪರಮಹಂಸನಲ್ಲ; ನಿನ್ನ ರಾಜಹಂಸನು!"

ಪರಮಹಂಸರು ಹೀಗೆ ನುಡಿದ ಕೂಡಲೆ ಕುಸುಮಕುಮಾರಿಯು ಪರಮ ಹಂಸರ ಮುಖವನ್ನೊಮ್ಮೆ, ಧರ್ಮಘೋಷನ ಮುಖವನ್ನೊಮ್ಮೆ ಕಕ್ಕಾವಿಕ್ಕಿಯಾಗಿ ನೋಡತೊಡಗಿದಳು ಅವಳ ಮನೋದಯವು ಪರಮಹಂಸ ಧರ್ಮಘೋಷರಿಗೆ ತಿಳಿಯದಿರಲಿಲ್ಲ. ಆಗ ಪರಮಹಂಸರು—"ದೇವಿ, ನೀನು ಧರ್ಮಘೋಷರ ವಿಷ ಯದಲ್ಲಿ ಶಂಕೆಗೊಳ್ಳಬೇಡ. ಸರ್ವಾರ್ಥಸಿದ್ಧಿ ಧರ್ಮಘೋಷರ ಕರ್ತವ್ಯಪ್ರಭಾವ ದಿಂದ ನಿನ್ನ ಭೆಟ್ಟಿಯು ಸುಯೋಗವು ಒದಗಿತು. ಅವರು ನಿನ್ನಲ್ಲಿ ಅತ್ಯಂತ ಅನು ರಾಗವುಳ್ಳವರಿರುವರು."

"ನಾಥರೆ, ನಿಮ್ಮ ದರ್ಶನದಿಂದ ನಾನು ಧನ್ಯಳಾದೆನು."

"ಪ್ರಿಯೆ, ನೀನು ಇಲ್ಲಿಂದ ನನ್ನೊಡನೆ ಹೊರಡಲಾರೆಯೆಂದು ತೋರುವದು."

"ಹಾಗೆ ಹೊರಡಲಿಕ್ಕೆ ಸಾಧ್ಯವಿಲ್ಲ. ಬಂಧನೆಗೊಳಗಾಗಿರುವೆನು. ನೀವು ಸಾಕಷ್ಟು ಸೈನ್ಯವನ್ನು ತಂದಿದ್ದರೆ ಒಳಿತಾಗುತ್ತಿತ್ತು. ಯೋಗಾಯೋಗವಿಲ್ಲ. ಯೋಗ್ಯ ಕಾಲವು ಯಾವಾಗ ಒದಗುವದೋ ನೋಡೋಣ. ಪ್ರಿಯಕರಾ, ಕ್ಷಾತ್ರಧರ್ಮ ವನ್ನು ಬಿಟ್ಟು ಚೌರ್ಯಕರ್ಮ ಮಾಡುವದು ನಿಮ್ಮ ಗೌರವಕ್ಕೆ ಕುಂದು ತರು

ವಂತಹದಾಗಿದೆ. ನಿಮ್ಮಲ್ಲಿ ಶಕ್ತಿಯಿದ್ದರೆ ದಂಡೆತ್ತಿ ಬಂದು ನನ್ನನ್ನು ವಶಪಡಿಸಿ ಕೊಳ್ಳಿರಿ. ಗೆದೆಯುವದು ವಿಹಿತವಲ್ಲದೆ, ಕದಿಯುವದು ಎಂದೂ ಯೋಗ್ಯ ವೆನಿಸದು."

"ಪ್ರಿಯೆ, ನೀನು ಈ ಬಗೆಯ ಭಾವನಾ ಪ್ರಧಾನಳಿರುವೆಯೆಂಬದು ನನಗೆ ಗೊತ್ತಾಗಲಿಲ್ಲ."

"ನೀವು ಅಷ್ಟೊಂದು ಅವಸರ ಪಡಬೇಡಿರಿ. ನಾನು ನಿಮ್ಮವಳೇ ಇರುವೆನು. ವರಿಸಿದರೆ ನಿಮ್ಮನ್ನೇ ವರಿಸುವೆನು; ಇಲ್ಲವಿದ್ದರೆ ಆಮರಣವಾಗಿ ನಿಮ್ಮ ಚಿಂತನೆ ಯಲ್ಲಿ ಆಯುಷ್ಯವನ್ನು ಕಳೆಯುವೆನು. ನೀವು ಚನ್ನಾಗಿ ಸೇನಾಸನ್ನಾಹ ಮಾಡಿ ಕೊಂಡು ಬನ್ನಿರಿ. ಕರ್ನಾಟಕ ಸಮ್ರಾಟನಾದ ತೈಲಪದೇವನೊಡನೆ ಪ್ರಸಂಗ ವಿರುವದೆಂಬದನ್ನು ಮರೆಯಬೇಡಿರಿ."

"ನೀನು ಯಾವ ವಿಚಾರವನ್ನೂ ಮಾಡಬೇಡ. ನಾನು ಬೇಗನೆ ಇಲ್ಲಿಗೆ ದಂಡೆತ್ತಿ ಬರುವೆನು."

"ಬೇಗನೆ ಬರಬೇಕೆಂಬ ನನ್ನ ಇಚ್ಛೆಯಿಲ್ಲ ಯಾಕೆಂದರೆ ನೀವು ವರ್ಷಾನು ವರ್ಷವೂ ಯುದ್ಧದ ಸಿದ್ಧತೆ ಮಾಡಿಕೊಂಡರೆ ನನ್ನ ಅಣ್ಣನೊಡನೆ ಕಾಳಗ ಮಾಡ ಲಿಕ್ಕೆ ಸಮರ್ಥರಾಗುವಿರೋ ಇಲ್ಲವೋ ಎಂಬ ಸಂಶಯವಿದೆ."

"ನನಗೆ ಎಲ್ಲವೂ ತಿಳಿದಿರುವದು. ಹಂಸ —" "ಮತ್ತೇನು ನನ್ನ ರಾಜಹಂಸಾ,"

"ನಿನ್ನ ವಿಯೋಗವು ಪ್ರಾಣಾಂತಿಕ ವೇದನೆಯಂತೆ ಪರಿಣಮಿಸತೊಡಗಿದೆ."

"ಅದಕ್ಕೆ ಉಪಾಯವಿಲ್ಲ. ನಾವು ಇನ್ನೂ ಕೆಲವು ದಿನ ಆತ್ಮಸಂಯಮನ ಮಾಡಲೇಬೇಕು. ಆತ್ಮಸಮರ್ಪಣ ಮಾಡಿದ ಈ ದೀನಳನ್ನು ಮರೆಯಬೇಡಿ ರೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ."

"ನಿನ್ನನ್ನು ಹೇಗೆ ಮರೆಯಲಿ? ದೇವಿ, ನನ್ನ ಹೃದಯೇಶ್ವರಿ!---"ಎಂದು ನುಡಿದು ಪರಮಹಂಸರು ಮುಂದೆ ಬಂದು ಕುಸುಮಕುಮಾರಿಯ ಕೈಹಿಡಿಯ ಹೋದರು. ಆಗ ಕುಸುಮಕುಮಾರಿಯು ಬಳಿಯಲ್ಲಿ ಧರ್ಮಘೋಷನಿದ್ದುದರಿಂದ ಲೂ, ಭಾವೀ ಪತಿಯು ಕಾಷಾಯವಸ್ತ್ರ ಪರಿಧಾನ ಮಾಡಿದ್ದರಿಂದಲೂ ಹಿಂಜರಿದು— "ನಾಥರೆ, ಭಗವೀಲಾಂಛನವನ್ನು ದೂಷಿತಗೊಳಿಸಬೇಡಿರಿ."

"ಪರಮಹಂಸರೆ, ಕುಸುಮಕುಮಾರಿದೇವಿಯವರೆ, ನೀವು ಪರಸ್ಪರರು ಆತ್ಮ ಸಮರ್ಪಣ ಮಾಡಿರುವಿರಿ. ಭಗವನ್ ಶಾಕ್ಯಮುನಿಯು ನಿಮಗೆ ಕಲ್ಯಾಣ ಮಾಡು ವನು" ಎಂದು ಧರ್ಮಘೋಷನು ನುಡಿಯುವಷ್ಟರಲ್ಲಿ ಜಾಕಲದೇವಿಯೂ ಸರ್ವಾ ರ್ಥಸಿದ್ಧಿಯೂ ಅಲ್ಲಿಗೆ ಬಂದರು ಅನಂತರದಲ್ಲ ಸ್ವಲ್ಪ ವೇಳೆ ಮಾತುಕತೆಗಳಾದ ಬಳಿಕ, ಜಾಕಲದೇವಿ ಕುಸುಮಕುಮಾರಿಯರು ಪರಮಾನಂದ ಪರಮಹಂಸರ ಆಶೀರ್ವಾದವನ್ನೂ ಅಪ್ಪಣೆಯನ್ನೂ ಪಡೆದು ಬುದ್ಧವಿಹಾರದಿಂದ ತೆರಳಿದರು.

## ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ.

ನೊಳಂಬ ಕುಲಾಂತಕನಾದ ಮಾರಸಿಂಹನನ್ನು ಬನವಾಸಿಯ ಆಹವದಲ್ಲಿ ಸದೆಬಡೆದ ಮೇಲೆ, ಕರ್ನಾಟಕ ಸಾಮ್ರಾಜ್ಯದ ಸಮ್ರಾಟನಾದ ಪ್ರತಾಪನಿಧಿ ತೈಲಪದೇವನು ತನ್ನ ವಿಜಯೀ ಸೇನೆಯೊಡನೆ ಒಳ್ಳೆಯ ಸಡಗರದಿಂದ ಮಾನ್ಯಖೇಟದ ದಾರೀ ಹಿಡಿದನು ಮಾರಸಿಂಹನಂತಹ ಪಟುಭಟನನ್ನು ಅನಾಯಾಸವಾಗಿ ಪರಾಭವಗೊಳಿಸಿದ ಗಂಡುಗಲಿಗೆ ತಾನು ಈಡಾಗುವದಿಲ್ಲವೆಂಬದನ್ನು ಸೇವುಣದ ಭಿಲ್ಲಮನು ಕಂಡುಹಿಡಿದು, ಸದ್ದಿಲ್ಲದೆ ತನ್ನ ರಾಜಧಾನಿಯನ್ನರಸುತ್ತ ಹೊರಟನು. ಶಿಲಾಹಾರ ಮನೆತನದ ಅಪರಾಜಿತನು ಮಾತ್ರ ಎದೆಗಾರಿಕೆಯಿಂದ ತೈಲಪದೇವನಿಗೆ ಎದುರಾದನು. ಹನುಮಂತನ ಮುಂದೆ ಹಾರುವ ಗುಬ್ಬಿಯೆ, ಎಂಬಂತೆ ಮಾರಸಿಂಹನಂತಹ ಗಂಡುಗಲಿಯನ್ನು ನುಗ್ಗು ನುಗ್ಗು ಮಾಡಿದ ತೈಲಪದೇವನಿಗೆ ಅಪರಾಜಿತನು ಹೇಗೆ ಈಡಾಗಬೇಕು? ಅವನು ಹೇವಕ್ಕೆ ಬಿದ್ದು ಕಾಳಗ ಹೂಡಿದ್ದನು. ಕಡೆಗೆ ಅವನು ಪರಾಜಿತನಾಗಿ ತೈಲಪದೇವನಿಗೆ ಶರಣುಹೋದನು. ಮೊರೆಬಿದ್ದವರನ್ನು ಕಾಯುವದರಲ್ಲಿ ತೈಲಪದೇವನು ಹೆಸರುವಾಸಿಯಾಗಿದ್ದನು. ವೈರ ಬಳೆಯಿಸುವವರೊಡನೆ ಅವನು ಅತ್ಯಂತ ಕಠೋರನಾಗಿ ವರ್ತಿಸುತ್ತಿದ್ದನು; ಸ್ನೇಹಾಂಕಿತರ ವಿಷಯವಾಗಿ ಅವನ ಮನಸ್ಸು ಕುಸುಮದಂತೆ ಮೃದುವಾಗುತ್ತಿತ್ತು. ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಅಪರಾಜಿತನು ತೈಲಪದೇವನಿಗೆ ನೆರಗೊಡ್ಡಿ ಬೇಡಿಕೊಂಡನು. ತೈಲಪದೇವನು ಅವನಿಂದ ಕಪ್ಪುಕಾಣಿಕೆಗಳನ್ನು ತೆಗೆದುಕೊಂಡು ಅವನನ್ನು ಸಾಮಂತಪದದಲ್ಲಿರಿಸಿದನು.

ತೈಲಪದೇವನು ಸಾಮ್ರಾಜ್ಯದೊಳಗಿನ ಮಂಡಲೇಶ್ವರ-ಮಹಾ ಮಂಡಲೇಶ್ವರರಿಂದಕಪ್ಪುಕಾಣಿಕೆಗಳನ್ನು ತೆಗೆದುಕೊಳ್ಳುತ್ತ ಮಾನ್ಯಖೇಟಕ್ಕೆ ಬಂದನು. ಸೇನಾಪತಿಯಾದ ಬಾರಪ್ಪನೂ, ಮೂರನೆಯ ಸೇನಾಪತಿಯಾದ ಚಾವುಂಡರಾಯನೂ ತೈಲಪದೇವನನ್ನೂ, ಮೊದಲನೆಯ ಸೇನಾನಾಯಕನಾದ ಸಿದ್ಧಸೇನನನ್ನೂ, ವಿಜಯೀ ಸೈನ್ಯವನ್ನೂ ಎದುರ್ಗೊಂಡು, ಒಳ್ಳೆಯ ಸಮಾರಂಭದಿಂದ ರಾಜಧಾನಿಯಲ್ಲಿ ಕರೆದೊಯ್ದರು. ತಮ್ಮ ಮಹಾರಾಜನು ಅಪೂರ್ವವಾದ ವಿಜಯವನ್ನು ಸಂಪಾದಿಸಿದನೆಂದು ಪುರವಾಸಿಗಳೆಲ್ಲರೂ ಹರುಷಾಬ್ಧಿಯಲ್ಲಿ ಮುಳುಗಿದ್ದರು.

ತೈಲಪದೇವನು ವಿಜಯವನ್ನು ಸಂಪಾದಿಸಿಕೊಂಡು ಮಾನ್ಯಖೇಟಕ್ಕೆ ಬಂದ ಮೇಲೆ ದೊಡ್ಡ ಸಭೆಯನ್ನು ನೆರೆಯಿಸಿದನು. ಕಾಳಗದಲ್ಲ ಪರಾಕ್ರಮವನ್ನು ತೋರಿಸಿದ ಸೇನಾನಾಯಕರಿಗೂ ಸೈನಿಕರಿಗೂ ಪಾರಿತೋಷಕ ಕೊಟ್ಟು, ಅವರನ್ನು ಸಂತುಷ್ಟ ಪಡಿಸಬೇಕೆಂಬ ಉದ್ದೇಶದಿಂದ ಅವನು ಓಲಗವನ್ನು ಕೂಡಿಸಿದನು.

ತನ್ನ ಸೇನಾನಾಯಕರೂ ಸೈನಿಕರೂ ಜೀವದ ಹಂಗುದೊರೆದು ಹೇಗೆ ಹೇಗೆ ಪರಾಕ್ರಮವನ್ನು ತೋರಿಸಿದರೆಂಬದನ್ನು ಅವನು ಸ್ವಲ್ಪದರಲ್ಲಿ ಹೇಳಿ, ಅವರವರ ಯೋಗ್ಯತಾನುಸಾರವಾಗಿ ಬಹುಮಾನ ಕೊಟ್ಟನು. ಗುಪ್ತಚರರ ಅಧಿಕಾರಿಯಾದ ದುರ್ಗಾನಾಥನು ರಚಿಸಿದ ತಂತ್ರಗಳನ್ನು ವರ್ಣಿಸಿ, ತೈಲಪದೇವನು ಅವನಿಗೆ ಪಾರಿತೋಷಕವಿತ್ತನು. ಅವನ ಕೈಕೆಳಗಿನ ಗುಪ್ತಚರರಿಗಾದರೂ ಬಹುಮಾನವು ಕೊಡಲ್ಪಟ್ಟಿತು.

ಕಿರೀಟಧಾರಿಯ ತಲೆಯು ತಡೆಯಿಲ್ಲದೆ ತಲ್ಲಣಿಸುತ್ತಿರುತ್ತದೆಂಬ ಪಾಶ್ಚಿಮಾತ್ಯರ ಗಾದೆಯು ಅನುಭವಸಿದ್ಧವಾದದ್ದೇ ಸರಿ. ತೈಲಪದೇವನು ತನ್ನ ಬಾಹುಬಲದಿಂದ ಎಲ್ಲ ಮಂಡಲೇಶ್ವರರನ್ನು ಹಣ್ಣುಮಾಡಿ, ಪುಂಡಗಾರರ ಪುಂಡಾಟಿಕೆಯನ್ನು ಅಡಗಿಸಿ, ಎಲ್ಲಿ ಡೆಯಲ್ಲಿ ಸುಖಶಾಂತಿಯನ್ನು ನೆಲೆಗೊಳಿಸಿದ್ದನು; ಆದರೆ ಗುಜರಾಥದ ಅರಸನಾದ ಮೂಲರಾಜನು ಕರ್ನಾಟಕ ಸಾಮ್ರಾಜ್ಯದಲ್ಲಿ ಪುಂಡಾಟಿಕೆಯನ್ನು ನಡೆಯಿಸಿದನು. ಅವನು ಕರ್ನಾಟಕಸಾಮ್ರಾಜ್ಯದಲ್ಲಿದ್ದ ಲಾಟ ಪ್ರಾಂತವು ತನ್ನದೆಂದು ಸಾಧಿಸತೊಡಗಿದ್ದನು. ಈ ಸಂಗತಿಯು ತೈಲಪದೇವನಿಗೆ ತಿಳಿದ ಕೂಡಲೆ ಅವನು ತನ್ನ ಎರಡನೆಯ ಸೇನಾಪತಿಯಾದ ಬಾರಪ್ಪನನ್ನು ಮೂಲರಾಜನ ಮೇಲೆ ಕಳುಹಿಸಿದನು. ಬಾರಪ್ಪನು ನಾಮಾಂಕಿತ ಕಲಿಯು. ಅವನು ಕಾಳಗದಲ್ಲಿ ಮೂಲರಾಜನನ್ನು ಸೋಲಿಸಿ ಲಾಟ ಪ್ರಾಂತದ ಮೇಲೆ ತನ್ನ ವರ್ಚಸ್ಸನ್ನು ನೆಲೆಗೊಳಿಸಿದನು. ಮಹತ್ವಾಕಾಂಕ್ಷಿಯಾದ ಮೂಲರಾಜನು ಮೇಲಿಂದ ಮೇಲೆ ಲಾಟ ಪ್ರಾಂತದಲ್ಲಿ ಕೊಲೆಸುಲಿಗೆ ನಡೆಯಿಸಿದ್ದನ್ನು ನೋಡಿ, ತೈಲಪದೇವನು ಆ ಪ್ರಾಂತದ ಮೇಲೆ ಬಾರಪ್ಪನನ್ನೇ ಮಂಡಲೇಶ್ವರನನ್ನಾಗಿ ನಿಯಮಿಸಿದನು. ಬಾರಪ್ಪನು ಮೂಲರಾಜನನ್ನು ಅನೇಕ ಕಾಳಗಗಳಲ್ಲಿ ಸೋಲಿಸಿ, ಅವನಿಂದ ಕಪ್ಪುಕಾಣಿಕೆಗಳನ್ನು ತೆಗೆದುಕೊಂಡನು. ಕೊನೆಗೆ ಒಂದು ಕದನದಲ್ಲಿ ಈ ಬಾರಪ್ಪನು ರಣಕ್ಕೆ ಮೈಗೊಟ್ಟನು. ಹೆಸರುವಾಸಿಯಾದ ದಳವಾಯಿಯ ಮರಣದಿಂದ ತೈಲಪದೇವನು ಬಹಳೇ ಕ್ಲೇಶಗೊಂಡನು.

ಗುಜರಾಥದ ಚಾಲುಕ್ಯರಾಜನಾದ ಮೂಲರಾಜನು ತನಗೆ ದೊರೆತ ವಿಜಯದಿಂದ ಪ್ರಮತ್ತನಾದನು. ಅವನು ಕರ್ನಾಟಕ ಸಾಮ್ರಾಜ್ಯಕ್ಕೊಳಪಟ್ಟ ಲಾಟದೇಶದ ಮೇಲೆ ತನ್ನ ಒಡೆತನವನ್ನು ನೆಲೆಗೊಳಿಸಿ ಸಾಮ್ರಾಜ್ಯದಲ್ಲಿ ಪುಂಡುಗಾರಿಕೆ ಮಾಡಲುಪಕ್ರಮಿಸಿದನು. ಅವನು ಕರ್ನಾಟಕ ಸಾಮ್ರಾಜ್ಯದೊಳಗಿನ ಮಂಡಲೇಶ್ವರನಾಗಿದ್ದರೂ ಕಪ್ಪು-ಕಾಣಿಕೆಗಳನ್ನು ಕೊಡದೆ, ಸ್ವತಂತ್ರತೆಯಿಂದ ರಾಜ್ಯವಾಳತೊಡಗಿದನು. ಈ ವಾರ್ತೆಯು ತೈಲಪದೇವನ ಕಿವಿಗೆ ಬಿದ್ದ ಕೂಡಲೆ, ಅವನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಚಾವುಂಡರಾಯ ದಳವಾಯಿಯೊಡನೆ ಗುಜರಾಥದ ಮೇಲೆ ದಂಡೆತ್ತಿ ಹೋದನು. ಕದನದಲ್ಲಿ ಮೂಲರಾಜನು ಸೋತು ಶರಣು ಬಂದನು. ತೈಲಪದೇವನು ಅವನಿಂದ ಹೇರಳವಾಗಿ ಕಪ್ಪು-ಕಾಣಿಕೆ ತೆಗೆದು

ಕೊಂಡು, ಅವನನ್ನು ತನ್ನ ಸಾಮಂತನನ್ನಾಗಿ ಮಾಡಿ, ಲಾಟದೇಶವನ್ನು ಸಾಮ್ರಾಜ್ಯಕ್ಕೊಳಪಡಿಸಿ ಮರಳಿ ರಾಜಧಾನಿಗೆ ಬಂದನು.

ಗಂಗವಾಡಿಯ ಮಾರಸಿಂಹನ ಪಕ್ಷಪಾತಿಯಾಗಿದ್ದ ಸೇವುಣದ ಭಿಲ್ಲಮನು ಸಾಮ್ರಾಜ್ಯದೊಳಗಿನ ಮಾಂಡಲಿಕನಾಗಿದ್ದರೂ, ತೈಲಪದೇವನಿಗೆ ಕಪ್ಪ-ಕಾಣಿಕೆಗಳನ್ನು ಕೊಡುವದನ್ನು ನಿಲ್ಲಿಸಿದ್ದನು. ಮಾಳವೆಯರರಸನಾದ ಮುಂಜರಾಜನ ಪಕ್ಷವನ್ನು ವಹಿಸಿ ಅವನನ್ನು ಮುಂದೆ ಮಾಡಿ ತೈಲಪದೇವನನ್ನು ಹಣ್ಣುಮಾಡಬೇಕೆಂದು ಭಿಲ್ಲಮನ ಮಾನಸವಿತ್ತು. ಅವನು ತೈಲಪದೇವನೊಡನೆ ಕಾದುವ ಸಿದ್ಧತೆ ಮಾಡಬೇಕೆಂದು ಮುಂಜರಾಜನಿಗೆ ತಿಳಿಸಿದ್ದನು. ಈ ಸಂಗತಿಯು ತಿಳಿದೊಡನೆಯೆ ತೈಲಪದೇವನು ಭಿಲ್ಲಮನ ಮೇಲೆ ಸಂತಪ್ತನಾದನು. ಪರಕೀಯರ ಸಹಾಯದಿಂದ ಸಾಮ್ರಾಜ್ಯದ ಸಾಮರ್ಥ್ಯವನ್ನು ಕುಗ್ಗಿಸಲೆತ್ನಿಸುವ ಸಾಮ್ರಾಜ್ಯದ್ರೋಹಿ ಭಿಲ್ಲಮನನ್ನು ಉಪೇಕ್ಷಿಸಿದರೆ ಒಳಿತಾಗಲಿಕ್ಕಿಲ್ಲವೆಂದು ತಿಳಿದು, ತೈಲಪದೇವನು ಅವನಮೇಲೆ ದಂಡೆತ್ತಿಹೋಗಬೇಕೆಂಬ ಪ್ರಯತ್ನದಲ್ಲಿದ್ದನು. ಅಷ್ಟರಲ್ಲಿ ಮತ್ತೊಂದು ಭಯಂಕರವಾದ ವಾರ್ತೆಯು ತೈಲಪದೇವನ ಕಿವಿಗೆ ಬಿದ್ದದರಿಂದ ಅವನು ಸೇವುಣದ | ಮೇಲೆ ದಂಡೆತ್ತಿ ಹೋಗುವದನ್ನು ನಿಲ್ಲಿಸಬೇಕಾಯಿತು.

ಚೆಬ್ಬಿಯ ಮಂಡಲೇಶ್ವರನಾದ ಪಾಂಚಾಲದೇವನು ಮಾರಸಿಂಹನ ಕೈಕೆಳಗಿನ ಪಾಳೇಗಾರನಾಗಿದ್ದನು. ಅವನು ಮಾರಸಿಂಹನ ಪಕ್ಷಪಾತಿಯು. ರಾಷ್ಟ್ರಕೂಟರಲ್ಲಿ ನಿಷ್ಠೆಯುಳ್ಳವನು. ರಾಷ್ಟ್ರಕೂಟ ಸಾಮ್ರಾಜ್ಯವನ್ನು ತೈಲಪದೇವನು ಅನ್ಯಾಯದಿಂದ ನುಂಗಿ ನೀರು ಕುಡಿದನೆಂದು ತಿಳಿದು ಪಾಂಚಾಲದೇವನು ಅವನ ಮೇಲೆ ಸಿಟ್ಟಾದನು. ಮಾರಸಿಂಹನು ಯುದ್ಧಭೂಮಿಯಿಂದ ಬಂಕಾಪುರಕ್ಕೆ ಓಡಿಹೋಗಿ ತನ್ನ ಗುರುಗಳಾದ ಅಜಿತಸೇನಾಚಾರ್ಯರ ಸೇವೆಯಲ್ಲಿರತೊಡಗಿದ ಕೂಡಲೆ ಪಾಂಚಾಲದೇವನು ಗಂಗರಾಜ್ಯವನ್ನಾಕ್ರಮಿಸಲಾರಂಭಿಸಿದನು. ಮಾರಸಿಂಹನು ಬಂಕಾಪುರದಲ್ಲಿ ಗುರುಸೇವೆ ಮಾಡುತ್ತ ಅನಶನ ವ್ರತದಿಂದ ಮರಣ ಹೊಂದಿದನೆಂಬ ಸಂಗತಿಯು ಈ ಪಾಂಚಾಲದೇವನಿಗೆ ತಿಳಿದ ಕೂಡಲೆ, ಇಡಿಯ ಗಂಗರಾಜ್ಯವನ್ನು ತನ್ನ ಚೆಬ್ಬಿಯ ರಾಜ್ಯಕ್ಕೆ † ಕೂಡಿಸಿಕೊಂಡನು. ಇಷ್ಟರಿಂದಲೆ ಅವನು ತೃಪ್ತನಾಗಲಿಲ್ಲ. ಬೃಹತ್ಕರ್ನಾಟಕದ ಸಾರ್ವಭೌಮನಾದ ತೈಲಪದೇವನನ್ನು ಲೆಕ್ಕಿಸಡೆ, ಅವನು ಒಳ್ಳೆಯ ಎದೆಗಾರಿಕೆಯಿಂದ ಎದುರಾಳಿ

| ಔರಂಗಾಬಾದ ನಾಸಿಕ ಖಾನದೇಶಗಳನ್ನು ಒಳಗೊಂಡ ಪ್ರಾಂತಕ್ಕೆ ಸೇವುಣದೇಶವೆಂಬ ಹೆಸರಿತ್ತು.

† ಚೆಬ್ಬಿಯು ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲೂಕಿನಲ್ಲಿರುವದು. ಪಾಂಚಾಲದೇವನು ಈ ಚೆಬ್ಬಿಯ ಸುತ್ತುಮುತ್ತಲಿರುವ ಮೂವತ್ತು ಹಳ್ಳಿಗಳಿಗೆ ಮಾತ್ರ ಒಡೆಯನಾಗಿದ್ದನು ಇವನು ಮೊದಲು ಮಾರಸಿಂಹನಿಗೆ ಕಪ್ಪಕೊಡುತ್ತ, ಅವನ ಮಂಡಲೇಶ್ವರನೆಂದು ಹೇಳಿಸಿಕೊಳ್ಳುತ್ತಿದ್ದನು.

ಯಾಗಿ ನಿಂತನು. ಈ ಸಂಗತಿಯನ್ನು ಕೇಳಿದೊಡನೆಯೆ ತೈಲಪದೇವನು ಭಿಲ್ಲಮನ ಮೇಲೆ ದಂಡೆತ್ತಿ ಹೋಗುವದನ್ನು ನಿಲ್ಲಿಸಿ, ಪುಂಡ ಬಂಡುಗಾರನಾದ ಪಾಂಚಾಲ ದೇವನ ಕೊಬ್ಬನ್ನಡಗಿಸಬೇಕೆಂದು ನಿರ್ಧರಿಸಿದನು. ಪಾಂಚಾಲದೇವನು ತೈಲಪ ದೇವನಿಗೆ ಕಪ್ಪ-ಕಾಣಿಕೆಗಳನ್ನರ್ಪಿಸದೆ ಸ್ವತಂತ್ರನಾಗಿ ರಾಜ್ಯವಾಳುತ್ತಿದ್ದನು. ಆದರೂ ಅವನನ್ನು ತೈಲಪದೇವನು ದೊಡ್ಡ ಮನಸ್ಸಿನಿಂದ ಉಪೇಕ್ಷಿಸಿದ್ದನು. ಅವನು ಮಾರಸಿಂಹನ ಗಂಗವಾಡಿಯ ರಾಜ್ಯವನ್ನು ತನ್ನ ಸ್ವಾಧೀನದಲ್ಲಿ ತೆಗೆದು ಕೊಂಡು, ಉನ್ಮತ್ತನಾಗಿ ಸಾಮ್ರಾಜ್ಯದಲ್ಲಿ ವರ್ತಿಸತೊಡಗಿದೊಡನೆಯೆ ತೈಲಪ ದೇವನ ಹೃದಯವು ಪರಮಾವಧಿಯಾಗಿ ಸಂತಪ್ತವಾಯಿತು. ಅವನು ಚಾವುಂಡ ರಾಯ ಸೇನಾಪತಿಯೊಡನೆ ಚೆಬ್ಬಿಯ ಮೇಲೆ ದಂಡೆತ್ತಿ ಬಂದನು.

ಪಾಂಚಾಲದೇವನು ಪ್ರಮತ್ತನಿದ್ದನು. ಅವನು ಎಂತಹ ಹೆಬ್ಬಯಕೆ ಯವನೂ ಎದೆಗಾರನೂ ಆಗಿದ್ದರೂ, ತೈಲಪದೇವನಂತಹ ಬಲಾಢ್ಯನೊಡನೆ ವೈರ ಬಳೆಯಿಸಿ ಬಾಳುವ ಸಾಮರ್ಥ್ಯವು ಅವನಲ್ಲಿದ್ದಿಲ್ಲ. ಗಂಗವಾಡಿಯ ರಾಜ್ಯವು ಕೈವಶ ವಾದ ಬಳಿಕ ಅವನು ತನ್ನ ಸೈನ್ಯವನ್ನು ಬೆಳೆಯಿಸಿದ್ದನು. ತೈಲಪದೇವನಂತೆ ತಾನೂ ಒಂದು ದೊಡ್ಡ ರಾಷ್ಟ್ರದ ಒಡೆಯನಿದ್ದುದರಿಂದ ಅವನಿಗೆ ಕಪ್ಪ-ಕಾಣಿಕೆ ಕೊಡುವ ಕಾರಣವಿಲ್ಲವೆಂದು ಅವನು ತಿಳಿದುಕೊಂಡನು ಸಣ್ಣನಾಡಿನ ಒಡೆಯ ನಾಗಿದ್ದವನು ದೊಡ್ಡ ರಾಜ್ಯಕ್ಕೆ ಒಡೆಯನಾದ್ದರಿಂದ ಅವನು ತನ್ನಷ್ಟಕ್ಕೆ ತಾನೇ ಬಲಾಢ್ಯನಾದೆನೆಂದು ತಿಳಿದುಕೊಂಡಿದ್ದನು. ಸಮಯ ಸಾಧಿಸಿದರೆ, ತನ್ನ ಒಡೆಯ ನಾದ ಮಾರಸಿಂಹನಿಗೆ ಮಾಡಿದ ಅನರ್ಥದ ಸೇಡು ತೀರಿಸಿಕೊಳ್ಳುವೆನೆಂದು ಅವನು ಬಹಿರಂಗವಾಗಿ ಸಾರಲಾರಂಭಿಸಿದ್ದನು.

ಮಾರ್ಮಲೆತು ನಿಂತ ಪಾಂಚಾಲದೇವನನ್ನು ದಂಡಿಸುವದಕ್ಕಾಗಿ ಮಾನ್ಯ ಖೇಟದಿಂದ ಹೊರಟ ತೈಲಪದೇವನು ಚೆಬ್ಬಿಯ ನಾಡನ್ನು ಸಮೀಪಿಸಿದನು. ಚಾಲುಕ್ಯ ಸೇನಾಸಾಗರವು ಭೂಮಿಯನ್ನದರಿಸುತ್ತ ಬರುತ್ತಿರುವದೆಂದೂ ಆ ಸೈನ್ಯಕ್ಕೆ ಎದುರಾದರೆ ಸರ್ವನಾಶವಾಗುವದೆಂದೂ ದೂತರು ಪಾಂಚಾಲದೇವ ನಿಗೆ ತಿಳಿಸಿದರು. ಈ ವಾರ್ತೆಯನ್ನು ಕೇಳಿ ಪಾಂಚಾಲದೇವನು ನಿಜಸ್ಥಿತಿಯನ್ನ ರಿತುಕೊಳ್ಳುವದಕ್ಕಾಗಿ ತನ್ನ ನಂಬಿಗೆಯ ಸರದಾರನೊಬ್ಬನನ್ನು ಗುಪ್ತರೀತಿಯಿಂದ ತೈಲಪದೇವನ ಶಿಬಿರಕ್ಕೆ ಕಳುಹಿಸಿದನು. ಅಂತವೂ ಪಾರವೂ ಇಲ್ಲದ ಚಾಲುಕ್ಯ ಸೇನಾಸಾಗರವನ್ನು ನೋಡಿ ಪಾಂಚಾಲದೇವನ ಸರದಾರನು ಭೀತಿ-ವಿಸ್ಮಯಗಳು ಳ್ಳವನಾಗಿ ಚೆಬ್ಬಿಗೆ ಬಂದನು. ಆಗ ಅವನು ವಸ್ತುಸ್ಥಿತಿಯನ್ನು ತನ್ನ ಒಡೆಯನಿಗೆ ತಿಳಿಸಿ, ಯುದ್ಧಕ್ಕೆ ಅಣಿಯಾಗುವದು ಕ್ಷೇಮಕರವಲ್ಲವೆಂದು ತಿಳಿಸಿದನು. ತೈಲಪ ದೇವನ ವಶದಲ್ಲಿ ಇಷ್ಟು ಪ್ರಚಂಡನಾದ ಸೈನ್ಯವಿರುವದೆಂಬದರ ಕಲ್ಪನೆಯು ಮದಾಂಧನಾದ ಪಾಂಚಾಲದೇವನಿಗಿದ್ದಿಲ್ಲ. ನಿಜಸ್ಥಿತಿಯು ತಿಳಿದೊಡನೆಯೆ ಅವನ ಎದೆಯು 'ಧಡ-ಧಡ' ಹಾರತೊಡಗಿತು. ತನ್ನಿಂದ ದೊಡ್ಡ ಪ್ರಮಾದವು ಘಟಿಸಿ

ತೆಂದು ಅವನು ಪಶ್ಚಾತ್ತಾಪಬಡತೊಡಗಿದನು. ಮಲಗಿದ ಸಿಂಹನನ್ನು ಕೆಣಕಿ ರೊಚ್ಚಿಗೆಬ್ಬಿಸಿದಂತೆ ತನ್ನ ಕೃತಿಯಾಯಿತೆಂದು ಅವನು ವಿಷಾದಗೊಂಡನು. ಆಗ ಅವನು ಜೀವದಿಂದುಳಿದುಕೊಳ್ಳಲಿಕ್ಕೆ ಅನೇಕ ಬಗೆಯ ಹಂಚಿಕೆ ಹುಡುಕತೊಡಗಿದನು. ಅವಸರದ ಪ್ರಸಂಗದಲ್ಲಿ ಪಲಾಯನದ ಹೊರತು ಬೇರೆ ಉಪಾಯವೇನೂ ತೋಚುವಂತಿದ್ದಿಲ್ಲ. ಅವನು ತನ್ನ ವಶದಲ್ಲಿಯ ಸೈನ್ಯವನ್ನೂ ದಳವಾಯಿಗಳನ್ನೂ ಸಂಗಡ ಕರೆದುಕೊಂಡು ನಿಬಿಡವಾದ ಗುಡ್ಡಗಾಡು ಪ್ರದೇಶವನ್ನು ಸೇರಿದನು.

ತೈಲಪದೇವನು ಚೆಬ್ಬಿಗೆ ಬಂದು ನೋಡುತ್ತಾನೆ; ಅಲ್ಲಿ ಶತ್ರುಗಳ ಕಡೆಯ ಒಂದು ಪಿಳ್ಳೆಯಾದರೂ ಇದ್ದಿಲ್ಲ. ಪಾಂಚಾಲದೇವನು ಹುಲಿಯಂತೆ ಗದ್ದರಿಸಿ ನರಿಯಂತೆ ಕಿರುಚುತ್ತ ಹೊರಟುಹೋಗಿರುವನೆಂದು ಅವನು ತಿಳಿದನು. ಎದುರಾಳಿಗಳಾರೂ ಇಲ್ಲದ್ದರಿಂದ ಅವನು ಚೆಬ್ಬಿಯಲ್ಲಿ ನಿಂತುಕೊಂಡು ಗಂಗವಾಡಿಯ ಪ್ರಾಂತದ ಮೇಲೆ ತನ್ನ ವರ್ಚಸ್ವವನ್ನು ನೆಲೆಗೊಳಿಸಲಾರಂಭಿಸಿದನು. ಪಾಂಚಾಲದೇವನು ಶರಣು ಬಂದರೆ, ಅವನ ನಾಡನ್ನು ಅವನಿಗೆ ಕೊಟ್ಟು ತನ್ನ ಮಾಂಡಲಿಕನನ್ನಾಗಿ ಮಾಡಿಕೊಳ್ಳಬೇಕೆಂದು ತೈಲಪದೇವನ ಅಭಿಲಾಷೆಯಿತ್ತು. ಎಷ್ಟೋ ದಿನಗಳು ಕಳೆದು ಹೊದರೂ ಪಾಂಚಾಲದೇವನಾಗಲಿ, ಅವನ ಪ್ರತಿನಿಧಿಯಾಗಲಿ ತೈಲಪದೇವನ ಬಳಿಗೆ ಬರಲಿಲ್ಲ. ಆಗ ಅವನು ಚೆಬ್ಬಿಯ ನಾಡಿನಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಿ ಅದನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು.

ತನ್ನ ಪಲಾಯನದ ವಾರ್ತೆಯನ್ನು ಕೇಳಿ, ಬಂದ ಹಾದಿಗೆ ಸುಂಕವಿಲ್ಲವೆಂಬಂತೆ ತೈಲಪದೇವನು ತಿರುಗಿ ಹೋಗುವನೆಂದು ಪಾಂಚಾಲದೇವನು ತಿಳಿದಿದ್ದನು; ಆದರೆ ತೈಲಪದೇವನು ಗಂಗವಾಡಿಯನ್ನೂ ಚೆಬ್ಬಿಯ ರಾಜ್ಯವನ್ನೂ ಸ್ವಾಧೀನದಲ್ಲಿ ತೆಗೆದುಕೊಂಡಿರುವನೆಂಬ ವಾರ್ತೆಯು ಕಿವಿಗೆ ಬಿದ್ದ ಕೂಡಲೆ ಅವನು ಬಹಳೇ ಸಂತಪ್ತನಾದನು. ಯುಕ್ತಿ ಪ್ರಯುಕ್ತಿಗಳಿಂದ ತೈಲಪದೇವನನ್ನು ತಳಬಿಡುವಂತೆ ಮಾಡದಿದ್ದರೆ ಪರಿಣಾಮವು ಒಳಿತಾಗಲಾರದೆಂದು ಅವನು ತಿಳಿದನು. ಕೂಡಲೆ ತೈಲಪದೇವನ ಸೈನ್ಯಕ್ಕೆ ಅವನು ಪರಿ ಪರಿಯಾಗಿ ತೊಂದರೆಕೊಡತೊಡಗಿದನು. ಪಾಂಚಾಲದೇವನು ಅಡವಿಯಲ್ಲಿ ಅಡಗಿಕೊಂಡು, ಅಕಸ್ಮಾತ್ತಾಗಿ ವೇಳೆ ಸಾಧಿಸಿ ಚಾಲುಕ್ಯರ ಸೈನ್ಯದ ಮೇಲೆ ಬಿದ್ದು ಅದನ್ನು ನಾಶಗೊಳಿಸುವದಕ್ಕಾಗಿ ಸೈನ್ಯವನ್ನು ಕಳುಹಿಸುತ್ತಿದ್ದನು. ಈ ಮೇರೆಗೆ ಕಿರುಕಳ ತೊಂದರೆ ಕೊಡುತ್ತ ಕಾಲಹರಣ ಮಾಡತೊಡಗಿದ ಪಾಂಚಾಲದೇವನನ್ನು ಶೋಧಿಸದಿದ್ದರೆ, ನಿರರ್ಥಕವಾಗಿ ಪ್ರಾಣಹಾನಿಯಾಗುವದೆಂದು ತೈಲಪದೇವನು ತಿಳಿದುಕೊಂಡನು. ಅವನು ಎಲ್ಲೆಡೆಗೆ ಗುಪ್ತಚರರನ್ನು ಕಳುಹಿಸಿ ಪಾಂಚಾಲದೇವನ ಶೋಧನೆಯ ಪ್ರಯತ್ನ ನಡೆಯಿಸಿದನು. ಗುಪ್ತಚರರ ಅಧಿಪತಿಯಾದ ದುರ್ಗನಾಥನ ಚಾತುರ್ಯವು ಅಪರಿಮಿತವಾಗಿತ್ತು. ಅವನು ತನ್ನ ಬುದ್ಧಿಬಲದಿಂದ ಎಂತಹ ಬಿಕ್ಕಟ್ಟಿನ ಕೆಲಸವನ್ನಾದರೂ ಕೈಗೂಡಿಸಿಕೊಳ್ಳುತ್ತಿದ್ದನು. ಇವನು ಶೋಧನೆಯ ಕಾರ್ಯದಲ್ಲಿ

ತೊಡಗಿದನೆಂದರೆ, ಸಂದಿಗೊಂದಿಗಳಲ್ಲಿಯೂ ಗಿರಿಗಂಹರಗಳಲ್ಲಿಯೂ ಅಡಗಿದ ಮನುಷ್ಯರು ಸಹ ಇವನ ಕಣ್ಣಿಗೆ ಬೀಳುತ್ತಿದ್ದರು. ಗುಪ್ತಚಾತುರ್ಯದವನಾದ ದುರ್ಗನಾಥನನ್ನು ತೈಲಪದೇವನು ಪಾಂಚಾಲದೇವನನ್ನು ಹಿಡಿದುಕೊಂಡು ಬರುವದಕ್ಕಾಗಿ ಸಾಕಷ್ಟು ಸೈನ್ಯದೊಡನೆ ಕಳುಹಿಸಿದನು.

ಸೇನಾಪತಿಯಾದ ಚಾವುಂಡರಾಯನೂ ದುರ್ಗನಾಥನೂ ಕೆಲವು ಸೈನ್ಯದೊಡನೆ ಪಾಂಚಾಲದೇವನಿದ್ದ ಅರಣ್ಯಕ್ಕೆ ಹೋದರು. ದುರ್ಗನಾಥನು ಗುಪ್ತಚರರನ್ನಷ್ಟೇ ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗಿ, ಅಡವಿಯಲ್ಲಡಗಿದ್ದ ಪಾಂಚಾಲದೇವನನ್ನು ಶೋಧಿಸಿದನು. ಈ ವಾರ್ತೆಯು ಚಾವುಂಡರಾಯನ ಕಿವಿಗೆ ಬಿದ್ದ ಕೂಡಲೆ ಅವನು ತನ್ನ ಸಂಗಡ ಕರೆದೊಯ್ದ ಸೈನ್ಯವನ್ನು ಪಾಂಚಾಲದೇವನ ಮೇಲೆ ಸಾಗಿಸಿದನು. ಮಧ್ಯರಾತ್ರಿಯಲ್ಲಿ ಅವನು ಪಾಂಚಾಲದೇವನ ಸೈನ್ಯದ ಮೇಲೆ ಬಿದ್ದು ಅದನ್ನು ಸೋಲಿಸಿದನು. ಪಾಂಚಾಲದೇವನು ಚಾವುಂಡರಾಯನ ಸೆರೆಸಿಕ್ಕನು. ಚಾವುಂಡರಾಯನು ಅವನನ್ನು ತೈಲಪದೇವನ ಮುಂದೆ ತಂದುನಿಲ್ಲಿಸಿದನು. ಆಗ ತೈಲಪದೇವನು ಪುಂಡುಗಾರನಾದ ಪಾಂಚಾಲದೇವನನ್ನು ಕುರಿತು: “ಪಾಂಚಾಲದೇವ, ನೀವು ಮೊದಲಿನಿಂದ ಮಾರಸಿಂಹನ ಮಾಂಡಲಿಕರಾಗಿದ್ದಿರಿ. ಈಗ ಮಾರಸಿಂಹನ ನಾಡು ಸಾಮ್ರಾಜ್ಯಛತ್ರದಲ್ಲಿ ಬಂದಿರುವದು. ನೀವು ಅಭಿಮಾನಕ್ಕೆ ಬಿದ್ದು ಸ್ವತಂತ್ರರಾಗಿ ರಾಜ್ಯಕಾರ್ಯವನ್ನು ಸಾಗಿಸತೊಡಗಿದಿರಿ. ನಿಮ್ಮ ಈ ಅಪರಾಧವನ್ನು ನಾನು ಬುದ್ಧಿಪೂರ್ವಕವಾಗಿ ಉಪೇಕ್ಷಿಸಿದ್ದೆನು; ಆದರೆ ನಿಮ್ಮ ಪುಂಡಾಟಿಕೆಯು ದಿನದಿನಕ್ಕೆ ಬೆಳೆಯತೊಡಗಿತು. ನೀವು ಮಾರಸಿಂಹನ ಗಂಗವಾಡಿಯ ರಾಜ್ಯದಲ್ಲಿಯ ಬಹು ದೊಡ್ಡ ಭಾಗವನ್ನು ಕೈವಶ ಮಾಡಿಕೊಂಡಿರಿ. ಇಷ್ಟಕ್ಕೆ ನಿಮ್ಮ ಪುಂಡುಗಾರಿಕೆಯು ಮುಗಿಯಲಿಲ್ಲ. ಸಾಮ್ರಾಜ್ಯದಲ್ಲಿ ಕೊಲೆಸುಲಿಗೆಗಳನ್ನು ಪ್ರಾರಂಭಿಸಲಿಕ್ಕೆ ನೀವು ಹಿಂದೆ ಮುಂದೆ ನೋಡಲಿಲ್ಲ. ನಿಮ್ಮ ಅಪರಾಧವು ಅಕ್ಷಮ್ಯವಿದ್ದರೂ ನಿಮ್ಮನ್ನು ಕ್ಷಮಿಸಬೇಕೆಂದು ನಿರ್ಧರಿಸುವೆನು. ನೀವು ಸಾಮ್ರಾಜ್ಯದ ಕಟ್ಟಳೆಯ ಮೇರೆಗೆ ನಡೆಯಲೊಪ್ಪುತ್ತಿದ್ದರೆ ಮಾತ್ರ ಕ್ಷಮಾದಾನ ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ಹುಟ್ಟಿದೆ. ನೀವು ಕಪ್ಪ-ಕಾಣಿಕೆಗಳನ್ನರ್ಪಿಸಿ, ಚಾಲುಕ್ಯ ಸಾಮ್ರಾಜ್ಯದ ಮಾಂಡಲಿಕರಾಗಿರಲಿಕ್ಕೆ ಒಪ್ಪಿಕೊಂಡರೆ ನಿಮ್ಮ ಅಪರಾಧವನ್ನು ಕ್ಷಮಿಸುವೆನು.”

ಪಾಂಚಾಲದೇವನು ಅತ್ಯಂತ ದುರಭಿಮಾನಿಯಾಗಿದ್ದನು ತಾನು ತೈಲಪದೇವನ ಮಾಂಡಲಿಕನಾಗುವದು ಮಾನಹಾನಿಕಾರಕವೆಂದು ಅವನ ಭಾವನೆಯಿತ್ತು. ತೈಲಪದೇವನು ಅಧಿಕಾರಯುಕ್ತವಾಣಿಯಿಂದ ಆಡಿದ ಮಾತುಗಳು ಅವನಿಗೆ ಅಸಹ್ಯವಾದವು. ಆಗ ಅವನು ಸಂತಪ್ತವಾಣಿಯಿಂದ:—“ತೈಲಪದೇವ, ರಾಷ್ಟ್ರಕೂಟ ರಾಜ್ಯವನ್ನು ಅನ್ಯಾಯದಿಂದ ಹರಣಮಾಡಿದ ನೀವು ನಿಮ್ಮಷ್ಟಕ್ಕೆ ಸಾರ್ವಭೌಮರಾಗಿರಬಹುದು; ಆದರೆ ನಿಜವಾದ ಪೌರುಷವುಳ್ಳವನು ನಿಮ್ಮ ಸಾರ್ವ

ಭೌಮತ್ವವನ್ನೆಂದಿಗೂ ಒಪ್ಪಲಾರನು. ಮೊದಲು ನೀವು ಮಾಂಡಲಿಕರಾಗಿಯೆ ಇದ್ದಿರಿ. ಈಗೆರಡು ದಿನ ಸಾರ್ವಭೌಮರೆಂದು ಸೋಗು ಮಾಡತೊಡಗಿದರೆ ನಿಮ್ಮ ಸಾರ್ವಭೌಮತ್ವವನ್ನು ನಾನು ಎಂದಿಗೂ ಒಪ್ಪಲಾರೆನು. ನೀವು ನನಗೆ ಕ್ಷಮಾದಾನ ಮಾಡಲಿಕ್ಕೆ ಎಷ್ಟರವರು?"

"ಪಾಂಚಾಲದೇವಾ!" ತೈಲಪದೇವನು ಸಂತಪ್ತವಾಣಿಯಿಂದ:—"ನೀನು ಬಹಳೇ ಪ್ರಮತ್ತನಾಗಿ ತೋರುವೆ. ನಿನ್ನ ಈ ಆಚರಣೆಯಿಂದ ಎಂದೂ ಕ್ಷೇಮವಾಗಲಿಕ್ಕಿಲ್ಲವೆಂಬದನ್ನು ಚೆನ್ನಾಗಿ ಮನಸ್ಸಿನಲ್ಲಿ ತಂದು, ವಿವೇಕತನದಿಂದ ಉತ್ತರ ಕೊಡು. ನಾನು ನಿನಗೆ ಇನ್ನೂ ಅವಕಾಶಕೊಡುವೆನು. ನಿನಗೆ ಅಹಿತಮಾಡಬೇಕೆಂದು ನಾನು ಇಲ್ಲಿಗೆ ಬಂದಿಲ್ಲ. ಸಾಮ್ರಾಜ್ಯವು ರಾಷ್ಟ್ರಕೂಟರದೇ ಇರಲೊಲ್ಲದೇಕೆ, ಚಾಲುಕ್ಯರದೇ ಇರಲೊಲ್ಲದೇಕೆ, ಆ ಪ್ರಸಂಗವನ್ನು ತೆಗೆದುಕೊಂಡು ನೀನು ಮಾಡುವದೇನು? ಈ ವಿಷಯದಲ್ಲಿ ನೀನು ತೀರ ಅಜ್ಞಾನಿಯಿರುವೆ. ಈ ತೈಲಪದೇವನು ಎಂದೂ ಅನ್ಯಾಯ ಮಾಡುವದಿಲ್ಲವೆಂದು ದೃಢವಾಗಿ ನಂಬು. ನಾನು ನನ್ನ ನಿರಪರಾಧಿತನವನ್ನು ನಿನ್ನೆದುರಿನಲ್ಲಿ ಸಿದ್ಧಮಾಡಿ ತೋರಿಸುವದರಿಂದಾದರೂ ಲಾಭವೇನಿರುವದು? ನಾನು ನಿನ್ನ ಹಿತಕ್ಕಾಗಿ ಹೇಳುವದೇನಂದರೆ, ನೀನು ಕರ್ನಾಟಕ ಸಾಮ್ರಾಜ್ಯದೊಳಗಿನ ಒಬ್ಬ ಮಾಂಡಲಿಕನಿರುವದರಿಂದ ಕನ್ನಡ ಸಾರ್ವಭೌಮನಿಗೆ ಕಪ್ಪುಕಾಣಿಕೆಗಳನ್ನರ್ಪಿಸುತ್ತ ಅವನಿಗೆ ಅಂಕಿತನಾಗಿ ನಡೆಯುವದು ಹಿತಾವಹವಿರುವದು. ಇದರ ಮೇಲೆ ನಿನ್ನ ಮನಸ್ಸು."

"ಸೆರಗೊಡ್ಡಿ ಬೇಡಿಕೊಂಡು ಹಣವೆತ್ತಲಿಕ್ಕೆ ನೀನು ಬಂದಿರುವೆ. ನೀನೇನೂ ದೊಡ್ಡ ವಿಕ್ರಮಶಾಲಿಯಲ್ಲವೆಂಬದು ನನಗೆ ಗೊತ್ತಿದೆ. ದೈವಬಲವಿದ್ದುದರಿಂದ ರಾಷ್ಟ್ರಕೂಟ ರಾಜ್ಯಕ್ಕೆ ಒಡೆಯನಾದೆ. ಬಹಳ ಹೇಳುವದೇನು? ನಾನು ನಿನ್ನೆದುರಿಗೆ ಎಂದೂ ತಲೆ ಬಾಗಲಾರೆನು."

"ನೀನು ಕಡುಮೂರ್ಖನಿರುವೆ. ಕರ್ನಾಟಕ ಸಾಮ್ರಾಜ್ಯದ ಸಾರ್ವಭೌಮನೆದುರಿಗೆ ತಲೆ ಬಾಗಲಿಕ್ಕಿಲ್ಲವೆಂದು ಹೇಳುವವನ ತಲೆಯು ಸ್ಥಿರವಾಗಿ ಉಳಿಯಲಾರದು." ಎಂದು ತೈಲಪದೇವನು ನುಡಿದು, ಪಾಂಚಾಲದೇವನ ಕೊಲೆ ಮಾಡಬೇಕೆಂದು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಆಜ್ಞೆಯಾಗುವದೊಂದೇ ಅವಕಾಶ; ಆ ಕ್ಷಣದಲ್ಲಿಯೇ ಉನ್ಮತ್ತನಾದ ಪಾಂಚಾಲದೇವನ ಶಿರವು ಹಾರಿಸಲ್ಪಟ್ಟಿತು! ‡ ತೈಲಪದೇವನ ಹೃದಯವು ಎಂತಹ ಕೋವಲವಾಗಿದ್ದರೂ ಕರ್ತವ್ಯಕ್ಕಾಗಿ ಅದು ವಜ್ರಕ್ಕಿಂತ ಕಠೋರವಾಗುತ್ತಿತ್ತು.

ಕಕ್ಕಲ ಮಾರಸಿಂಹ ಅಪರಾಜಿತ ಪಾಂಚಾಲರನ್ನು ಸದೆಬಡೆದು, ಮೂಡಣ ಪಡುವಣ ತೆಂಕಣ ಕರ್ನಾಟಕದಲ್ಲಿ ನಿಶ್ಯತ್ರುವಾದರೂ ತೈಲಪನು ನಿಶ್ಚಿಂತನಾಗಲಿಲ್ಲ.

‡ ಪಾಂಚಾಲನು ಮೈಸೂರಸಂಸ್ಥಾನ ಚಿತ್ರದುರ್ಗದ ನೆರೆಯಲ್ಲಿ ಕೊಲ್ಲಿಸಲ್ಪಟ್ಟನೆಂದು ತಿಳಿಸಬಹುದು.

ಮಾರಸಿಂಹನ ಪಕ್ಷಗಟ್ಟಿದ ಸೇವುಣದ ಮಹಾ ಮಂಡಲೇಶ್ವರನಾದ ಭಿಲ್ಲಮನು ಮಲೆತು ನಿಂತಿದ್ದನು. ತೈಲಪನು ಸೋಲಿಸಿ ಹಿಂದಕ್ಕಟ್ಟಿದ ಮಾಳವೆಯ ಅರಸನಾದ ಮುಂಜನು ಸೇಡುತೀರಿಸಿಕೊಳ್ಳುವ ಉದ್ದೇಶದಿಂದ ತನ್ನ ದಂಡನ್ನು ಬೆಳೆಯಿಸಿ, ಅನ್ನಸಾಮಗ್ರಿಯನ್ನು ಕೂಡಹಾಕಿ ತೈಲಪನ ಮೇಲೆ ದಂಡೆತ್ತಿ ಬರುವ ಜೋಡಣೆಯನ್ನು ಬಹಳೇ ಒತ್ತರದಿಂದ ನಡೆಯಿಸಿದ್ದನು. ಆದಕಾರಣ ಇವರಿಬ್ಬರನ್ನು ಮುರಿಬಡಿದ ಹೊರತು, ಇಷ್ಟು ದಿವಸ ಶ್ರಮಬಟ್ಟು ಸಂಪಾದಿಸಿದ ಸಾಮ್ರಾಜ್ಯವು ತನಗೆ ದಕ್ಕಲಿಕ್ಕಿಲ್ಲವೆಂಬ ವಿಚಾರವನ್ನು ಮನಸ್ಸಿನಲ್ಲಿ ತಂದು, ತನಗೆ ದೊರೆತ ಕಪ್ಪು ಕಾಣಿಕೆಯ ಹಣವನ್ನು ವೆಚ್ಚ ಮಾಡಿ ಹೊಸ ದಂಡನ್ನು ಕೂಡಿಸ ತೊಡಗಿದನು. ಸಾಕಷ್ಟು ಯುದ್ಧ ಸಾಮಗ್ರಿಗಳ ಪೂರೈಕೆ ಯಾದ ಕೂಡಲೆ ಅವನು ಭಿಲ್ಲಮನ ಮೇಲೆ ದಂಡೆತ್ತಿ ಹೊರಟನು.

ಭಿಲ್ಲಮನು ದೂರದರ್ಶಿಯಾಗಿದ್ದನು. ಪಾಂಚಾಲದೇವನಂತೆ ದುರಭಿಮಾನಕ್ಕೊಳಗಾದರೆ, ಅವನಂತೆಯೆ ತನ್ನ ಅವಸ್ಥೆಯಾದೀತೆಂಬ ಅಂಜಿಕೆಯು ಭಿಲ್ಲಮನಲ್ಲಿ ಹುಟ್ಟಿತ್ತು. ಮಾರಸಿಂಹನಂತಹ ಬಲಾಢ್ಯನನ್ನು ಸೋಲಿಸಿದ ಪ್ರತಾಪಶಾಲಿಯೊಡನೆ ಕಾದುವ ಸಾಮರ್ಥ್ಯವು ತನ್ನದಲ್ಲವೆಂಬದು, ಪಾಂಚಾಲದೇವನ ಕೊಲೆಯ ತರುವಾಯ ಅವನ ಮನಸ್ಸಿನಲ್ಲ ಹುಟ್ಟಿತು. ತೈಲಪದೇವನ ಸಾಮರ್ಥ್ಯವನ್ನು ಅಳೆಯದೆ, ವೃಥಾ ವೈರಬಳೆಯಿಸಿದೆನೆಂದು ಅವನು ಪಶ್ಚಾತ್ತಾಪಬಡತೊಡಗಿದನು. ಮಾಳವದರಸನಾದ ಮುಂಜನು ಕರ್ನಾಟಕ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬರುವ ಸಿದ್ಧತೆಯಲ್ಲಿರುವನೆಂಬ ಸಂಗತಿಯನ್ನು ಕೇಳಿದ ಮೇಲಂತು ಭಿಲ್ಲಮನ ಎದೆಯೊಡದಿತ್ತು. ಸುಮ್ಮನೆ ಗಾಳಿಯಗುದ್ದಿ ಮೈನೋಯಿಸಿಕೊಳ್ಳಬಾರದೆಂದು ವಿಚಾರಿಸಿ ಅವನು ತೈಲಪದೇವನಕಡೆಗೆ ಅನುಸಂಧಾನ ನಡೆಯಿಸಿದನು. ಅನುಸಂಧಾನಕ್ಕಾಗಿ ಭಿಲ್ಲಮನ ಪ್ರತಿನಿಧಿಯು ತೈಲಪದೇವನ ಬಳಿಗೆ ಬಂದನು. ಭಿಲ್ಲಮನು ತಾನೇ ಶಿಬಿರಕ್ಕೆ ಬಂದು ಒಪ್ಪಂದವನ್ನು ಪೂರೈಸಿಕೊಳ್ಳಬೇಕೆಂದು ತೈಲಪದೇವನು ಸೇವುಣದ ಪ್ರತಿನಿಧಿಗೆ ಹೇಳಿ ಕಳುಹಿದನು.

ತೈಲಪದೇವನು ತನ್ನ ಶಿಬಿರದಲ್ಲಿ ಉಚ್ಚಾಸನದ ಮೇಲೆ ಕುಳಿತುಕೊಂಡಿದ್ದನು. ಸೇನಾಪತಿಯಾದ ಚಾವುಂಡರಾಯ, ಗುಪ್ತಚರರ ಅಧಿಕಾರಿಯಾದ ದುರ್ಗಾನಾಥ ಮೊದಲಾದ ಜನರು ತಮ್ಮ ತಮ್ಮ ಸ್ಥಾನದಲ್ಲಿ ಕುಳತಿದ್ದರು. ಆಗ ಸೇವುಣದೊಡೆಯನಾದ ಭಿಲ್ಲಮನು ಹೇರಳವಾದ ಸುವರ್ಣ ಮುತ್ತು ರತ್ನಗಳ ಕಾಣಿಕೆಗಳನ್ನು ತೆಗೆದುಕೊಂಡು ತೈಲಪದೇವನ ತಿಬಿರಕ್ಕೆ ಬಂದನು. ಬಳಿಕ ಅವನು ತಾನು ತಂದ ಧನವನ್ನೆಲ್ಲ ತೈಲಪದೇವನ ಮುಂದಿರಿಸಿ, ವಿನಯದಿಂದ ಕೈ ಮುಗಿದು-"ಮಹಾರಾಜರೆ, ಅಪ್ರಬುದ್ಧತನದಿಂದ ನಾನು ಮಾಡಿದ ಅಪರಾಧಗಳನ್ನು ಕ್ಷಮಿಸಬೇಕು. ನಾನು ಚಿರಂತನವಾಗಿ ತಮ್ಮ ಮಾಂಡಲಿಕನಾಗಿ ನಡೆದುಕೊಳ್ಳುವೆನು. ನನ್ನ ನಿಷ್ಠೆಯಲ್ಲಿ ವ್ಯತ್ಯಾಸ ಕಂಡು ಬಂದರೆ, ನೀವು ವಿಧಿಸಿದ ದಂಡನೆಯನ್ನನುಭವಿಸಲಿಕ್ಕೆ

ನಾನು ಸಿದ್ಧನಿರುವೆನು. ನನ್ನಿಂದ ಅದೂರ ದೃಷ್ಟಿಯ ಕಾರ್ಯಗಳಾಗಿರುವದೇನೋ ನಿಜವು. ಪಶ್ಚಾತ್ತಾಪ ಪರಿಶುದ್ಧ ಹೃದಯನಾದ ನನ್ನನ್ನು ಕ್ಷಮಿಸುವದು ನಿಮ್ಮ ಧರ್ಮವಾಗಿರುವದು."

ಭಿಲ್ಲಮನ ಮಾತುಗಳನ್ನು ಕೇಳಿದೊಡನೆಯೆ ತೈಲಪದೇವನ ಸಂತಾಪವು ಶಾಂತವಾಯಿತು. ಮೊರೆ ಹೊಕ್ಕವರನ್ನು ಕಾಯುವದು ನಿಜವಾದ ರಾಜಧರ್ಮವೆಂಬದು ಅವನಿಗೆ ಚನ್ನಾಗಿ ಗೊತ್ತಿತ್ತು. ಆದರಲ್ಲಿ ಅವನ ಹೃದಯದ ಸ್ಥಿತಿಯು ಒಳ್ಳೆಯ ವಿಸ್ಮಯಜನಕನಾಗಿತ್ತು. ಅವನು ಕರ್ತವ್ಯಕ್ಕಾಗಿ ಒಮ್ಮೊಮ್ಮೆ ಅತ್ಯಂತ ಕಠೋರನಾಗುತ್ತಿದ್ದನು; ಪ್ರಸಂಗ ವಿಶೇಷವಲ್ಲ ವಜ್ರಕ್ಕಿಂತ ಕಠೋರವಾದ ಅವನ ಹೃದಯವು ಕುಸುಮಕ್ಕಿಂತಲೂ ಮೃದುವಾಗುತ್ತಿತ್ತು. ಭಿಲ್ಲಮನು ಶರಣಾಗತನಾಗಿ ಪಶ್ಚಾತ್ತಾಪಯುಕ್ತವಾದ ಉದ್ಗಾರ ತೆಗೆದದ್ದರಿಂದ ತೈಲಪದೇವನ ಅಂತಃಕರಣವು ನೀರಾಯಿತು. ಭಿಲ್ಲಮನಿಗೆ ಕ್ಷಮಾದಾನ ಮಾಡುವದರಿಂದ ಹಾನಿಯಾಗಲಿಕ್ಕಿಲ್ಲವೆಂಬದು ಅವನಿಗೆ ತಿಳಿದಿತ್ತು. ಮುಂದೆ ತಾನು ಕೈಕೊಳ್ಳಬೇಕಾದ ಮಾಳವದ ದಂಡಯಾತ್ರೆಯಲ್ಲಿ ಭಿಲ್ಲಮನಿಂದ ಉಪಯೋಗವಾಗಬಹುದೆಂದು ತಿಳಿದು, ಅವನ ಬೇಡಿಕೆಯನ್ನು ಮಾನ್ಯ ಮಾಡಿದನು. ಭಿಲ್ಲಮನು ಕ್ಷಮಾದಾನ ಮಾಡುವ ಬಗ್ಗೆ ಯಾಚನೆ ಮಾಡದಿದ್ದರೆ ಅವನಾದರೂ ಪಾಂಚಾಲದೇವನಂತೆ ದುರ್ದೆಶೆಯನ್ನು ಹೊಂದುತ್ತಿದ್ದನು. ತೈಲಪದೇವನು ಶರಣು ಬಂದ† ಭಿಲ್ಲಮನನ್ನು ದೊಡ್ಡಮನಸ್ಸಿನಿಂದ ಕ್ಷಮಿಸಿ, ಅವನನ್ನು ತನ್ನ ಮಾಂಡಲೇಶ್ವರನನ್ನಾಗಿ ಮಾಡಿಕೊಂಡನು.

ಮಾಳವದ ಮುಂಜರಾಜನು ಕರ್ನಾಟಕದ ಮೇಲೆ ದಂಡೆತ್ತಿ ಹೊರಡುವ ಸಿದ್ಧತೆಯಲ್ಲಿರುವನೆಂಬ ಸಂಗತಿಯು ತೈಲಪದೇವನಿಗೆ ಮೊದಲೇ ತಿಳಿದಿತ್ತು. ಅವನು ಬೇಗನೆ ದಂಡಯಾತ್ರೆಗೆ ಹೊರಡುವನೆಂತಲೂ, ಅವನು ಸಂಗ್ರಾಮದ ಅಪೂರ್ವ ಸಿದ್ಧತೆ ಮಾಡಿಕೊಂಡಿರುವನೆಂತಲೂ ಗುಪ್ತ ಚರರ ಮುಖಾಂತರವಾಗಿ ತೈಲಪದೇವನಿಗೆ ಗೊತ್ತಾಯಿತು. ಕೂಡಲೆ ಇವನೂ ಆ ಮಹಾಸಂಗ್ರಾಮದ ಸಿದ್ಧತೆಗಾಗಿ ತೊಡಗಿದನು.



† ನಿಜಾಮ ಸಂಸ್ಥಾನ ನಳದುರ್ಗದ ಬಳಿಯಲ್ಲಿ ಭಿಲ್ಲಮನು ತೈಲಪದೇವನಿಗೆ ಶರಣು ಹೋಗಿರಬಹುದು.

## ಕಾರಾಗೃಹದಲ್ಲಿ ಮದುವೆಯೆ?

"ಪ್ರಭಾವತಿ! ನನ್ನ ದೈವದಲ್ಲೇನಿದ್ದೀತೆ?"

"ದೇವಿ, ಚಿಂತಿಸಬೇಡಿರಿ. ನಿಮ್ಮಲ್ಲಿರುವ ಸದ್ಭಾವನೆಗಳು ನಿಮ್ಮ ಅಭಿಲಾಷೆಯನ್ನು ಪೂರೈಸುವವು."

"ಯಾವದೊಂದು ಅಜ್ಞಾತಕಾರಣದಿಂದ ನನ್ನ ಹೃದಯವು ತರಹರಗೊಳ್ಳುತ್ತಲಿರುವದು. ಬಹಳವಾಡಿ ಏನೋ ಅನಿಷ್ಟವೊದಗುವದೆಂಬಂತೆ ತೋರುತ್ತದೆ. ನನ್ನ ಅಭಿಲಾಷೆಯು ಈಡೇರಲಿಕ್ಕಿಲ್ಲವೆಂಬ ಲಕ್ಷಣವು ತೋರತೊಡಗಿದೆ. ದುಃಖ ನಿರಾಶೆಗಳಿಂದ ಮನಸ್ಸು ತಲ್ಲಣಿಸುತ್ತಿರುವದು. ಪ್ರಭೆ, ಇಂದಿಲ್ಲದಿದ್ದರೆ ನಾಳೆಯಾದರೂ ನನ್ನ ಅಣ್ಣಂದಿರ ಹೃದಯುವು ಕರಗಬಹುದೆಂದು ಆಶೆಗೊಂಡಿದ್ದೆನು. ಅವರು ನನ್ನನ್ನು ಬಂಧನೆಯಲ್ಲಿರಿಸಿದಾಗಿನಿಂದ ನನ್ನ ಮನೋರಾಜ್ಯವು ಹಾಳಾಯಿತು. ಶೇಷಾಯುಷ್ಯವನ್ನು ಅತ್ಯಂತ ವ್ಯಥೆಯಿಂದ ಕಳೆಯುವ ಪ್ರಸಂಗವೊದಗಿತು. ಆಪ್ತೇಷ್ಟರಿಗೆ ಹೊರತಾಗಿ ಕಾಲಕಳೆಯಬೇಕಾಯಿತು."

"ರಾಜಕುಮಾರಿಯವರೆ, ನಿಮ್ಮ ಅಣ್ಣಂದಿರೂ ಅತ್ತಿಗೆಯವರೂ ನಿಮ್ಮಲ್ಲಿ ಅನುರಾಗವುಳ್ಳವರಾದರೆ ಸೌಖ್ಯವು ಲಭಿಸುವ ಆಶೆಯುಂಟು. ನಿಮ್ಮ ಅಣ್ಣಂದಿರಂತೂ ತಮ್ಮ ಹೃದಯುವನ್ನು ಕಲ್ಲಿಗಿಂತಲೂ ಕಲ್ಲು ಮಾಡಿದರು. ಒಡಹುಟ್ಟಿದವರ ಮೇಲೆ ಕರುಣೆಯಿಲ್ಲದವರಿಗೆ ಏನೆನ್ನಬೇಕೋ ತಿಳಿಯದಾಗಿದೆ"

"ನಾನು ಯಾರಿಗೂ ಅನ್ನುವದಿಲ್ಲ. ನನ್ನ ದುರ್ದೈವಕ್ಕಾಗಿ ಎರಡನೆಯವರಿಗೆ ಮಾತಾಡಿ ಪ್ರಯೋಜನವೇನು?"

"ಮಹಾರಾಜರು ಅವ್ವನವರ ಆಜ್ಞೆಯಂತೆ ನಡೆಯಬಹುದೆಂದು ನಾನು ನಂಬಿದ್ದೆನು. ನಿನ್ನೆ ಅವರಾಡಿದ ಮಾತುಗಳನ್ನು ಕೇಳಿ ನನ್ನ ಆ ತಿಳುವಳಿಕೆಯು ಬೇರೆಯಾಯಿತು. ಈ ವಿಷಯವಲ್ಲಿ ಅವರು ಯಾರ ಮಾತುಗಳನ್ನೂ ಕೇಳುವದಿಲ್ಲವೆಂಬದು ಸ್ಪಷ್ಟವಾಗಿ ತೋರತೊಡಗಿದೆ. ನಿಮ್ಮ ಧರ್ಮವೇ ನಿಮ್ಮನ್ನು ತಾರಿಸಿದರೆ ತಾರಿಸಬಹುದು. ದೇವಿ, ಮಹಾರಾಜರು ಇಷ್ಟು ಕಠೋರ ಹೃದಯಿಗಳಿರುವರೆಂದು ನಾನು ಇದುವರೆಗೆ ತಿಳಿದಿರಲಿಲ್ಲ."

"ಪ್ರಭೆ, ಅಣ್ಣಂದಿರು ನನ್ನಲ್ಲಿ ಒಳ್ಳೆಯ ವಾತ್ಸಲ್ಯವುಳ್ಳವರಿರುವದು ನಿಜವು. ಅವರ ಹೃದಯುವು ಕಠೋರವಾದದ್ದರ ಕಾರಣವೆಂದರೆ, ನಾನು ಅವರ ಶತ್ರುಗಳಾದ ಮುಂಜಮಹಾರಾಜರಲ್ಲಿ ಅನುರಕ್ತಳಾದದ್ದು. ನಾನು ಇಂದೇ ನನ್ನ ಹೃದಯೇಶ್ವರನ ಮೂರ್ತಿಯನ್ನು ಹೃದಯುಸಿಂಹಾಸನದಿಂದ ಚ್ಯುತಗೊಳಿಸಿದರೆ, ಅವರು ನನ್ನಲ್ಲಿ ಮುಂಚಿನಂತೆ ಪ್ರೇಮವುಳ್ಳವರಾಗುವರು. ಇದೊಂದು ವಿಷಯವನ್ನು

ಬಿಟ್ಟು ಅಣ್ಣಂದಿರು ನನ್ನನ್ನು ಚನ್ನಾಗಿ ಪ್ರೀತಿಸುತ್ತಿರುವರು. ಈಗ ನಾನು ನನ್ನ ಹೃದಯದಲ್ಲಿ ನೆಲೆಗೊಂಡ ಮುಂಜಮಹಾರಾಜರ ಮೂರ್ತಿಯನ್ನು ಹೇಗೆ ದೂರ ಮಾಡಲಿ?"

"ಮುಂಜಮಹಾರಾಜರು ಶತ್ರುಗಳಾದರೇನಾಯಿತು? ನಿಮ್ಮ ಸಲುವಾಗಿ ಯಾದರೂ ಮಹಾರಾಜರು ಅವರೊಡನೆ ಸ್ನೇಹ ಬಳಿಯಿಸಿದರೆ ಅನ್ಯಾಯವಾಗುವ ದೆಂದು ನನಗಂತೂ ತೋರುವದಿಲ್ಲ"

"ಮುಂಜಮಹಾರಾಜನು ಈಗ ಯುದ್ಧದ ಸಿದ್ಧತೆಯನ್ನು ನಡೆಯಿಸಿರುವರಂತೆ. ಈ ವಾರ್ತೆಯನ್ನು ಕೇಳಿದ ಮೇಲಂತು ಅಣ್ಣಂದಿರ ಮನಸ್ಸು ಮೊದಲಿಗಿಂತಲೂ ಕಲ್ಲಾಗುವದು. ಹೀಗಿದ್ದ ಮೇಲೆ ಸ್ನೇಹ ಬಳಿಯಿಸುವ ಆಶೆಯೆಲ್ಲಿ? ಮುಂಜ ಮಹಾರಾಜರು ವಿಜಯಿಗಳಾದರೆ ಕ್ಷಾತ್ರಧರ್ಮಕ್ಕನುಗುಣವಾಗಿ ಕ್ಷತ್ರಿಯವಿವಾಹ ದಿಂದ ನನ್ನನ್ನು ವರಿಸುವರು. ಸಂಗ್ರಾಮದಲ್ಲಿ ಜಯಾಪಜಯಗಳು ದೈವಾಧೀನ ವಾದವುಗಳು. ಅಂತೂ ನನ್ನ ಆಯುಷ್ಯದಲ್ಲಿ ಸೌಖ್ಯವಿಲ್ಲೆಂದೇ ತಿಳಿಯಬೇಕಾಗಿದೆ."

"ಮುಂಜಮಹಾರಾಜರು ಪರಾಕ್ರಮಿಗಳಿರುವರು. ವಿಜಯಶ್ರೀಯು ಅವರ ಕೊರಳಲ್ಲಿ ವಿಜಯಮಾಲೆಯನ್ನು ಹಾಕುವ ಸಂಭವವುಂಟು."

"ಪ್ರಭೆ, ಅವರು ಎಷ್ಟೇ ಪರಾಕ್ರಮಿಗಳಾಗಿದ್ದರೂ ನನ್ನ ಅಣ್ಣಂದಿರ ಬಲದ ಪಾಸಂಗಕ್ಕೆ ಸಹ ಹತ್ತಲಾರರೆಂದು ನನಗೆ ತಿಳಿದಿದೆ. ಮಾರಸಿಂಹನು ಸೋತಂದಿ ನಿಂದಂತೂ ಇವರ ಬಲವು ಶತಗುಣಿತವಾಗಿದೆ. ಸೇವುಣದ ಭಿಲ್ಲಮದೇವನು ಈಗ ಇವರೊಡನೆ ಒಪ್ಪಂದ ಮಾಡಿಕೊಂಡಿರುವನು. ಕರ್ನಾಟಕ ಸಾಮ್ರಾಜ್ಯದೊಳಗಿನ ಮಂಡಲೇಶ್ವರರೂ ಮಹಾ ಸಾಮಂತರೂ ಇವರಿಗೆ ಅಂಕಿತರಾಗಿರುವರು. ವರ್ಧ ಮಾನ ವಿಕ್ರಮಶಾಲಿಗಳಾದ ನನ್ನ ಅಣ್ಣಂದಿರು ಅಜಿಂಕ್ಯರಿರುವರು. ಕರ್ನಾಟಕ ಮೇಲೆ ದಾಳಿ ಮಾಡಿ ಅದನ್ನು ಅಂಕಿತದಲ್ಲಿ ತೆಗೆತುಕೊಳ್ಳುವೆನೆಂದು ಮುಂಜರಾಜರು ಹೇಳುತ್ತಲಿರುವ ಮಾತುಗಳು ಏನೂ ಅರ್ಥವಿಲ್ಲದವುಗಳಾಗಿರುವವು. ಅವರು ಕೇವಲ ಹೇವಕ್ಕೆ ಬಿದ್ದು ಹೀಗೆ ಮಾತನಾಡತೊಡಗಿರುವರೆಂದು ಹೇಳಲು ಏನೂ ಅಡ್ಡಿಯಿಲ್ಲ."

"ದೇವಿ, ನೀವು ಬೇಕಾದದ್ದು ಹೇಳಿರಿ. ಯಾರು ಗೆದ್ದರೂ ಯಾರು ಸೋತರೂ ನಿಮ್ಮ ಕಲ್ಯಾಣವೇ ಇರುವದೆಂದು ನನ್ನ ಬುದ್ಧಿಗೆ ತೋಚತೊಡಗಿದೆ. ಮಹಾರಾಜರು ಗೆದ್ದರೆ ಅವರು ಮುಂಜರಾಜನನ್ನು ಸೆರೆಹಿಡಿದು ಮಾನ್ಯಖೇಟಕ್ಕೆ ತರುವರು. ಮುಂಜಮಹಾರಾಜರು ಮಹಾರಾಜರ ಅಂಕಿತರಾದ ಮೇಲೆ ನಿಮ್ಮ ಮನಸ್ಸಿನಂತೆ ಕೆಲಸವಾಗುವದರಲ್ಲಿ ಸಂದೇಹವಿಲ್ಲ. ಒಂದುವೇಳೆ ಮುಂಜಮಹಾ ರಾಜರು ವಿಜಯಿಗಳಾದರೆ ನಿಮ್ಮನ್ನು ಸ್ವಾಧೀನಪಡಿಸಿಕೊಂಡು, ಕ್ಷಾತ್ರವಿಧಿಯಿಂದ ನಿಮ್ಮನ್ನು ವರಿಸುವರು. ಈ ವಿಷಯದಲ್ಲಿ ನೀವು ಯೋಚಿಸಬೇಡಿರಿ. ದೇವಿ, ನೀವು ಮುಂಜರಾಜನನ್ನು ವರಿಸಬೇಕೆಂದು ಈಶಸಂಕಲ್ಪವಿರಬಹುದು. ಹಾಗಿಲ್ಲ

ದಿದ್ದರೆ ನಿಮ್ಮ ದೃಷ್ಟಿಗೆ ಅವರ ಭಾವಚಿತ್ರವೊ ಪ್ರಣಯ ಪತ್ರಿಕೆಯೂ ಬಿದ್ದೊಡ ನೆಯೆ ನಿಮ್ಮ ಮನಸ್ಸು ಚಂಚಲವಾಗುತ್ತಿರಲಿಲ್ಲ. ರಾಜಕುಮಾರಿಯವರೇ, ನಿಮ್ಮ ಹೃದಯವು (ಸಹಜವಿಕಾರವಶವಾಗುವಂತಹವೆ? 'ವ್ಯತಿಷಜತಿ ಪದಾರ್ಥಾನಾಂ ಅಂತರಃ ಕೋಪಿ ಹೇತುಃ | ನಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೆ' ಎಂಬಂತೆ ಬಹಿರಂಗ ಕಾರಣಗಳನ್ನು ಪ್ರೇಮಗಳು ಆಶ್ರಯಿಸುವದಿಲ್ಲ. ನೀವು ಮುಂಜಮಹಾರಾಜರನ್ನು ವರಿಸಬೇಕೆಂದು ಪರಮಾತ್ಮನ ಉದ್ದೇಶವಿದ್ದುದರಿಂದ ದೃಢತರವಾದ ನಿಮ್ಮ ಮನಸ್ಸಿನ ಮೇಲೆ ಅವರ ಭಾವಚಿತ್ರವು ಪರಿಣಾಮವನ್ನುಂಟು ಮಾಡಿರುವದು. ಶುಭಕಾರ್ಯಕ್ಕೆ ವಿಘ್ನಗಳು ಬಹಳ. ಕೊನೆಗೆ ನಿಮ್ಮ ಅಭಿ ಲಾಷೆಯು ಈಡೇರುವದೆಂಬದರಲ್ಲಿ ಸಂದೇಹವಿಲ್ಲ."

ಪ್ರಭಾವತಿಯ ಅಮೃತಸಿಂಚನ ಮಾಡುವಂತಹ ಮಾತುಗಳಿಂದ ರಾಜ ಕುಮಾರಿಯಾದ ಕುಸುಮಕುಮಾರಿಯ ಪರಿತಾಪಯುಕ್ತವಾದ ಮನಸ್ಸು ಆನಂದ ಪರಿಪ್ಲುತವಾಯಿತು. ದಾಸಿಯ ಮಾತುಗಳಲ್ಲಿ ತಥ್ಯಾಂಶವಿರುವದೆಂದು ಅವಳು ವಿಚಾರಾಂತ್ಯದಲ್ಲಿ ನಿರ್ಣಯಿಸಿಕೊಂಡು ಸಂಭ್ರಮವುಳ್ಳವಳಾದಳು. ಕೆಲವು ಹೊತ್ತಿನವರೆಗೆ ಇಬ್ಬರೂ ಮೌನವಾಗಿದ್ದರು. ಕುಸುಮಕುಮಾರಿಯ ಹೃದಯವು ಮಾತ್ರ ನಾನಾ ಬಗೆಯ ವಿಚಾರತರಂಗಗಳಿಂದ ಅಲ್ಲೋಲ-ಕಲ್ಲೋಲವಾಗತೊಡ ಗಿತ್ತು. ಎಷ್ಟೋ ವೇಳೆಯ ಮೇಲೆ ಪ್ರಭಾವತಿಯು ಕುಸುಮಕುಮಾರಿಯನ್ನು ಕುರಿತು:—"ರಾಜಕುಮಾರಿಯವರೆ, ಮಹಾರಾಜರ ಮನಸು ಕರಗುವಂತೆ ಇನ್ನೂ ಪ್ರಯತ್ನ ಮಾಡಬೇಕು. ಅಪ್ಪನವರ ಮುಖಾಂತರವಾಗಿ ಸಾಹಸ ಮಾಡಿ ನೋಡ ಬೇಕು."

ಪ್ರಭಾವತಿಯು ಹೀಗೆ ಮಾತಾಡುತ್ತಿರುವಾಗ ರಾಜಮಾತೆಯಾದ ಬೊಂಧಾ ದೇವಿಯು ಅಲ್ಲಿಗೆ ಬಂದಳು. ದುಃಖಸ್ವೈರಾಶ್ರುಗಳಿಂದ ಕುದಿಯುತ್ತ ದಿನದಿನಕ್ಕೆ ಕ್ಷೀಣಳಾಗತೊಡಗಿರುವ ಮಗಳನ್ನು ನೋಡಿ ಅವಳ ಎದೆಯು ಕರಗಿ ನೀರಾ ಯಿತು. ಇದ್ದ ಒಬ್ಬ ಮಗಳ ಅವಸ್ಥೆಯು ಹೀಗೆ ಚಿಂತಾಜನಕವಾದದ್ದರಿಂದ ಬೊಂಧಾದೇವಿಯು ಬಹಳೇ ವ್ಯಸನಪಡತೊಡಗಿದ್ದಳು. ಯಾವ ಪ್ರಯತ್ನ ದಿಂದಲೂ ಮಗಳ ಮನಸ್ಸು ತಿರಗುವದಿಲ್ಲವೆಂಬದು ನಂಬಿಗೆಯಾದ ಕೂಡಲೆ ಅವಳು ತೈಲಪದೇವನ ಮನಸ್ಸು ತಿರುಗಿಸಲಿಕ್ಕೆ ಯತ್ನಿಸತೊಡಗಿದಳು ಇನ್ನೂ ಅವಳ ಪ್ರಯತ್ನಕ್ಕೆ ಯಶವು ಲಭಿಸಿರಲಿಲ್ಲ. ದೃಢನಿಶ್ಚಯಿಯಾದ ತೈಲಪದೇವನ ಮುಂದೆ ಅವಳ ಆಟವು ನಿಂತಂತಾಗಿತ್ತು. ಇನ್ನೊಮ್ಮೆ ಕೊನೆಯ ಯತ್ನ ಮಾಡಿ ನೋಡಬೇಕೆಂದು ಅವಳು ರಾಜಕುಮಾರಿಯ ಮಂದಿರಕ್ಕೆ ಬಂದಳು. ಅವಳು ಅಲ್ಲಿಗೆ ಬಂದ ಕೂಡಲೆ ತೈಲಪದೇವನನ್ನು ಕರೆಯುವದಕ್ಕಾಗಿ ಸೇವಕನನ್ನು ಕಳುಹಿ ಸಿದಳು. ಅನಂತರದಲ್ಲಿ ಅವಳು ಕುಸುಮಕುಮಾರಿಯನ್ನು ಕುರಿತು:—"ಕುಮಾರಿ, ನಿನ್ನ ಅಭಿಲಾಷೆಯನ್ನು ಈಡೇರಿಸಬೇಕೆಂದು ನಾನು ತೈಲಪದೇವನಿಗೆ ಬಹುಪರಿ

ಯಾಗಿ ಹೇಳಿರುವೆನು. ಅವನು ನನ್ನ ಆಜ್ಞೆಯನ್ನು ಸಹ ಉಪೇಕ್ಷಿಸತೊಡಗಿರುವನು. ಇಂದು ಕೊನೆಯ ಪ್ರಯತ್ನಮಾಡಿ ನೋಡಬೇಕೆನ್ನುತ್ತೇನೆ. ಮುಪ್ಪಿನಲ್ಲಿ ನನಗೆ ಸೌಖ್ಯವು ಲಭಿಸಬಾರದೆಂದು ಈಶ ಸಂಕೇತವಿದ್ದರೆ, ಯಾರು ಮಾಡುವದೇನು? ನೀನು ಸುಖದಿಂದ ಸಂಸಾರಮಾಡತೊಡಗಿದ್ದನ್ನು ಕಣ್ತುಂಬ ನೋಡಬೇಕೆಂದು ಕುತೂಹಲವುಳ್ಳವಳಾಗಿರುವೆನು.''

''ಅವ್ವಾ, ನೀವು ನನ್ನ ವಿಷಯವಾಗಿ ಚಿಂತಿಸಬೇಡಿರಿ. ನಾನು ಇದ್ದ ಸ್ಥಿತಿಯಲ್ಲಿಯೆ ಸೌಖ್ಯವನ್ನು ಕಲ್ಪಿಸಿಕೊಳ್ಳುವೆನು. ವಿವಾಹವಾಗಬೇಕೆಂಬ ಇಚ್ಛೆಯು ನನ್ನಲ್ಲಿ ಉಳಿದಿರುವದಿಲ್ಲ. ಆರ್ಯಲಲನೆಯರು ಅವಿವಾಹಿತ ಸ್ಥಿತಿಯಲ್ಲಿದ್ದರೆ ಮಹಾಪಾತಕ ಮಾಡಿದಂತಾಗುವದಿಲ್ಲವಷ್ಟೇ? ನಾನು ಗಾರ್ಗಿಯಂತೆ ಬ್ರಹ್ಮವಾದಿನಿಯಾಗುವೆನು. ಚಿರಶತ್ರುಗಳಾದ ಮುಂಜಮಹಾರಾಜರ ಸ್ನೇಹ ಬಳೆಯಿಸುವದಕ್ಕೂ, ಅವರೊಡನೆ ಆಪ್ತಸಂಬಂಧ ಮಾಡುವದಕ್ಕೂ ನೀವು ಅಣ್ಣಂದಿರಿಗೆ ಒತ್ತಾಯ ಮಾಡುವ ಕಾರಣವಿಲ್ಲ. ವೇದವೇದಾಂತ ವಿಷಯಗಳಲ್ಲಿ ಜ್ಞಾನಾರ್ಜನೆ ಮಾಡಿಕೊಂಡು, ಭಗವಚ್ಚಿಂತನೆಯಲ್ಲಿ ಕಾಲಕಳೆಯುವದಕ್ಕಿಂತ ಹೆಚ್ಚಿನ ಆನಂದವು ಮತ್ತಾವುದರಲ್ಲಿರುವದು? ಅವ್ವಾ, ನೀವು ಅನಾಯಾಸವಾಗಿ ದೊರೆತ ಸುವರ್ಣಸಂಧಿಯನ್ನು ವ್ಯರ್ಥಮಾಡಬೇಡಿರಿ''

''ಕುಸುಮ,'' ಜೊಂಫಾದೇವಿಯು ವಿಸ್ಮಯದಿಂದಲೂ ಕ್ಲೇಶದಿಂದಲೂ— ''ನೀನು ಬ್ರಹ್ಮವಾದಿನಿಯಾಗುವೆಯಾ? ದಿವ್ಯವಾದ ಲಾವಣ್ಯ, ನೂತನವಾದ ಯೌವನ ಮುಂತಾದವುಗಳನ್ನು ವ್ಯರ್ಥಗೊಳಿಸುವೆಯಾ?''

''ಅವ್ವಾ, ಈ ರೂಪಯೌವನಗಳಿಗಾಗಿ ಜೀವಿತವಿರುವದಿಲ್ಲ.''

''ಮುಂಜರಾಜನ ಪಟ್ಟ ಮಹಿಷಿಯಾಗಿ ಅಧಿಕಾರ ವೈಭವಗಳನ್ನು ದೊರಕಿಸುವದಕ್ಕಾದರೂ ಜೀವಿತವಿರುವದೋ ಇಲ್ಲವೋ?''

''ಛೆ! ಛೆ!''

''ಹಾಗಾದರೆ ಜೀವಿತವು ಏತಕ್ಕಾಗಿ ಇರುವದು?''

''ಜೀವಿತವು ಸಚ್ಚಿದಾನಂದನಾದ ಪರಮಾತ್ಮನ ಅಂಶವಾಗಿರುವದು. ಅದು ಅವನಲ್ಲಿ ಲೀನವಾಗುವದೇ ಮುಕ್ತಿಯೆನಿಸಿಕೊಳ್ಳುವದು. ಅಂತಹ ನಿತ್ಯ ಸೌಖ್ಯವನ್ನು ಪಡೆಯುವದಕ್ಕಾಗಿ ಜ್ಞಾನಾರ್ಜನೆಯು ಅತ್ಯವಶ್ಯವಾಗಿ ಬೇಕಾಗುವದು. ಜ್ಞಾನಾರ್ಜನೆಯಾಗಬೇಕಾದರೆ ನಿವೃತ್ತಿ ಮಾರ್ಗವನ್ನವಲಂಬಿಸಬೇಕು. ನಿವೃತ್ತಿ ಮಾರ್ಗವನ್ನವಲಂಬಿಸಬೇಕಾದರೆ ಬ್ರಹ್ಮವಾದಿನಿಯಾಗಲಿಕ್ಕೆಬೇಕು ಸಂಸಾರವು ಅಸಾರವು. ರೂಪ, ಯೌವನ, ಐಶ್ವರ್ಯ, ಅಧಿಕಾರ ಮೊದಲಾದವುಗಳ ತೊಡಕಿನಲ್ಲಿ ಸಿಲುಕಿದ ಜೀವಿತವು ಎಂದೂ ಉನ್ನತಿ ಹೊಂದಲಾರದು.''

''ಬ್ರಹ್ಮವಾದಿನಿಗಳಾಗಬೇಕೆಂಬ ಕುತೂಹಲವುಳ್ಳ ರಾಜಕುಮಾರಿಯವರ ವೇದಾಂತದ ಪ್ರಸ್ತಾವನಾಖಂಡವಿದು!'' ಇಷ್ಟು ವೇಳೆಯ ವರೆಗೆ ಸುಮ್ಮನೆ ಕುಳಿತ

ಪ್ರಭಾವತಿಯು ನಗುತ್ತ ನಗುತ್ತ:—"ಮಾಳವೆಯರ ಮಹಾದೇವನನ್ನು ಮೆಚ್ಚಿಸುವ ವೇದಾಂತ ಭಾಗವು ಹೇಗಿದೆ ನೋಡಿರಿ. ಅಮ್ಮನವರೆ, ನೀವು ತಿಲಾಂಶವಾದರೂ ಅಂಜುವ ಕಾರಣವಿಲ್ಲ. ವೃದ್ಧಾಪ್ಯ ಕಾಲದಲ್ಲಿ ನಿಮಗೆ ತತ್ತ್ವೋಪದೇಶ ಮಾಡುವವರೇ ಭೆಟ್ಟಿಯಾಗಿದ್ದಿಲ್ಲ; ದೇವರು ಅನಾಯಾಸವಾಗಿ ಯೋಗ್ಯ ಸಂಧಿಯನ್ನು ಕೂಡಿಸಿಕೊಟ್ಟನು."

"ಕುಸುಮ," ಬೊಂಥಾದೇವಿಯು ವಾತ್ಸಲ್ಯದಿಂದ ಮಗಳ ಬೆನ್ನ ಮೇಲೆ ಕೈಯಾಡಿಸುತ್ತ:—"ನಿನ್ನಲ್ಲಿ ಈ ಬುದ್ಧಿಯು ಹೇಗೆ ಹುಟ್ಟಿತು? ಇಲ್ಲದ ಆಲೋಚನೆಗಳನ್ನು ಮನಸ್ಸಿನಲ್ಲಿ ತಂದುಕೊಳ್ಳಬೇಡ. ನಿನ್ನ ಮನೋರಥವು ಈಡೇರುವಂತೆ ಪ್ರಯತ್ನಿಸುವೆನು."

"ಅವ್ವನವರೆ, ಇನ್ನೇನೂ ನೀವು ಪ್ರಯತ್ನಿಸುವ ಕಾರಣವಿಲ್ಲ. ಸರ್ವಾರ್ಥಸಿದ್ಧಿಯವರಿಗೆ ಜೋಡು ದೊರೆಯಿತು. ಬುದ್ಧವಿಹಾರದ ಬಳಿಯಲ್ಲಿ ಒಂದು ಕೈವಲ್ಯಾಶ್ರಮವನ್ನು ಕಟ್ಟಿಸಲಿಕ್ಕೆ ಮಹಾರಾಜರಿಗೆ ಹೇಳಿಬಿಡಿರಿ."

"ಪ್ರಭೆ, ಕುಚೇಷ್ಟೆ ಮಾಡಬೇಡ. ನನ್ನ ಮನಸ್ಸು ನಿಜವಾಗಿಯೂ ವಿರಕ್ತಿಯನ್ನು ಹೊಂದಿರುವದು."

"ಅಂತೆಯೇ ಆಶ್ರಮವನ್ನು ಕಟ್ಟಿಸುವದಕ್ಕಾಗಿ ಮಹಾರಾಜರಿಗೆ ತಿಳಿಸಬೇಕೆಂದು ನಾನು ಹೇಳಿದೆನು." ಎಂದು ಪ್ರಭಾವತಿಯು ನಗುತ್ತಲೆ ಹೇಳಿದಳು.

"ಪ್ರಭೆ, ನಿಜವಾಗಿ ಹೇಳು. ನನಗೆ ನಿನ್ನಷ್ಟು ಸಹ ಸ್ವಾತಂತ್ರ್ಯವಿಲ್ಲ ನೀನು ಹಂಸನಾಯಕನಲ್ಲಿ ಪ್ರಣಯವುಳ್ಳವಳಾಗಿರುವೆಯಲ್ಲವೆ?"

"ಛೇ! ಇದೇನು ಹೇಳುವಿರಿ? ಯಾರಾದರೂ ಎರಡನೆಯವರು ಕೇಳಿದರೆ ಇದೇ ಮಾತನ್ನು ನಿಜವೆಂದು ತಿಳಿದಾರು." ಎಂದು ಪ್ರಭಾವತಿಯು ತನ್ನ ರಹಸ್ಯವು ಹೊರಬಿದ್ದೀತೆಂದು ಗಾಬರಿಗೊಂಡವರಂತೆ ನುಡಿದು:-"ಅವರು ನನ್ನಲ್ಲಿ ನಿರ್ವಿಕಾರ ಪ್ರೇಮವುಳ್ಳವರಾಗಿರುವರು. ನಾನಾದರೂ ಅವರಲ್ಲಿ ಅದೇ ಬಗೆಯ ಪ್ರೇಮದಿಂದ ನಡೆದುಕೊಳ್ಳುವೆನು. ಇಷ್ಟರ ಮೇಲಿಂದ ನೀವು ಇಲ್ಲದ ಕಲ್ಪನೆ ಮಾಡಬೇಡಿರಿ."

"ಸಾಕು ಬಿಡು; ಪ್ರಭೆ, ನೀನು ಮುಚ್ಚಿಕೊಂಡು ಮಾತನಾಡಬೇಡ. ನನಗೆ ಎಲ್ಲ ಸಂಗತಿಗಳೂ ತಿಳಿದಿರುವವು." ಎಂದು ಕುಸುಮಕುಮಾರಿಯು ಪ್ರಭಾವತಿಗೆ ನುಡಿದು, ಬೊಂಥಾದೇವಿಯನ್ನು ಕುರಿತು:—"ಅವ್ವಾ, ಈ ಪ್ರಭಾವತಿಗೆ ಇರುವಷ್ಟು ಸ್ವಾತಂತ್ರ್ಯವು ಕೂಡ ರಾಜಕುಮಾರಿಯಾದ ನನಗೆ ಇರುವದಿಲ್ಲ. ಪಾರತಂತ್ರ್ಯದ ಬಾಳು ಯಾತಕ್ಕೂ ಬೇಡ. ಪಾರತಂತ್ರ್ಯದಲ್ಲಿ ಸಿಲುಕಿ ರಾಜಮಂದಿರದಲ್ಲಿರುವದಕ್ಕಿಂತ ಸ್ವಾತಂತ್ರ್ಯಸುಖದಾಯಕವಾದ ಪರ್ಣಕುಟೀರದಲ್ಲಿರುವದು ಮೇಲೆಂದು ನನ್ನ ಅಭಿಪ್ರಾಯವಿರುವದು."

"ಪುತ್ರಿ, ಅತಿರೇಕವಾದ ನಿರಾಶೆಯಿಂದ ನಿನ್ನ ಮನಸ್ಸು ಉದಾಸೀನವಾಗಿರುವದು. ಅಂತೆಯೆ ನೀನು ಬ್ರಹ್ಮವಾದಿನಿಯಾಗುವೆನೆಂದು ಮಾತನಾಡತೊಡಗಿರುವೆ"

ಎಂದು ಬೊಂಥಾದೇವಿಯು ನುಡಿಯುತ್ತಿರಲು, ಅಲ್ಲಿಗೆ ತೈಲಪದೇವನು ಆಗಮಿಸಿದನು.

ತೈಲಪದೇವನು ಕುಸುಮಕುಮಾರಿಯ ಮಂದಿರವನ್ನು ಪ್ರವೇಶಿಸಿದ ಮೇಲೆ ಬೊಂಥಾದೇವಿಯನ್ನು ಕುರಿತು:—"ಅಪ್ಪಾ, ಈ ಕುಸುಮಕುಮಾರಿಯು ನನಗೂ ನಿನಗೂ ಕೂಡಿಯೇ ಸೌಖ್ಯವೀಯುವಂತೆ ಕಾಣುವದಿಲ್ಲ. ಇವಳು ಒಳ್ಳೆಯ ಸದ್ಗುಣಿಯೂ ವಿವೇಕಶಾಲಿನಿಯೂ ಇರುವಳೆಂದು ಇಷ್ಟು ದಿನಗಳ ವರೆಗೆ ನನ್ನ ಗ್ರಹಿಕೆಯಿತ್ತು. ಇಂತಹ ಅವಿಧೇಯಳನ್ನೂ ಹಟಮಾರಿಯನ್ನೂ ಸ್ವೇಚ್ಛಾ ಪ್ರವೃತ್ತಳನ್ನೂ ನಾನು ಇದುವರೆಗೆ ಎಲ್ಲಿಯೂ ಕಾಣಲಿಲ್ಲ. ಇವಳು ನನಗೆ ಕಡು ಹಗೆಯಾದಳು."

ತೈಲಪದೇವನ ಮಾತುಗಳನ್ನು ಕೇಳಿದ ಕೂಡಲೆ ಕುಸುಮಕುಮಾರಿಯ ಕಣ್ಣುಗಳು ಅಶ್ರುಪರಿಪೂರ್ಣವಾದವು. ಕಂಠವು ಸದ್ಗದಿತವಾಯಿತು. ಬಾಯಿಂದ ಮಾತುಗಳು ಹೊರಡದಾದವು. ಕೆಲವು ವೇಳೆಯ ವರಗೆ ಅವಳು ತಟಸ್ಥವೃತ್ತಿಯಿಂದಿದ್ದಳು. ಅನಂತರದಲ್ಲಿ ದುಃಖಿತ ಸ್ವರೂಪದಿಂದಲೂ ದೈನ್ಯದಿಂದಲೂ ಅವಳು ತೈಲಪದೇವನನ್ನು ಕುರಿತು:—"ಅಣ್ಣಾ, ನಾನು ಕಡು ಪಾಪಿಯು; ದುರ್ಗುಣಿಯು; ಉಚ್ಛೃಂಖಲ ಮನೋವೃತ್ತಿಯುವಳು; ನಮ್ರಭಾವವಿರಹಿತಳು; ಅವಿವೇಕಿಯು. ಅಂತೆಯೆ ನಿಮಗೆ ದುಃಖಕೊಡತೊಡಗಿರುವೆನು. ನಾನು ನಿಮಗೆ ವೈರಿಯಾಗುವದು ನಿಜವು. ನಿಮ್ಮ ಕೈಯೊಳಗಿನ ಖಡ್ಗದಿಂದ ನನ್ನ ಚಂಡಾಡಿ ಮನಸ್ಸು ಶಾಂತಮಾಡಿಕೊಳ್ಳಿರಿ. ಜಗತ್ತೆಂಬ ಮುಳ್ಳುಹಾಸುಗೆಯಲ್ಲಿ ಜೀವಿಸಿರುವದು ನನಗೇಕೋ ಬೇಸರವಾಗಿದೆ."

"ತೈಲಪ," ಬೊಂಥಾದೇವಿಯು ಮಗನನ್ನು ಕುರಿತು:—"ನಿಶ್ಚಲಮನೋವೃತ್ತಿಯ ಆರ್ಯಾಂಗನೆಯರ ಮನಃಸ್ಥಿತಿಯು ಹೀಗೆಯೇ ಸರಿ. ಕುಸುಮಕುಮಾರಿಯು ತನ್ನ ಹೃದಯವನ್ನು ಮುಂಜರಾಜನಿಗೆ ಸಮರ್ಪಿಸಿರುವಳು. ಒಮ್ಮೆ ಆತ್ಮಸಮರ್ಪಣ ಮಾಡಿದ ಮೇಲೆ ಆರ್ಯ ಲಲನೆಯರು ತಮ್ಮ ನಿಶ್ಚಯವನ್ನು ಎಂದೂ ತಿರುಗಿಸಲಾರರು. ಕುಮಾರ, ನೀನು ನನ್ನ ಆಜ್ಞೆಯನ್ನು ನಡೆಯಿಸಲಿಕ್ಕೆ ಬೇಕು. ಮುಂಜರಾಜನು ಚಿರಶತ್ರುವಿರುವನೆಂದು ತಿಳಿದು ಕುಸುಮಕುಮಾರಿಯ ಮನಸ್ಸನ್ನು ನೋಯಿಸಬೇಡ. ಅವನೊಡನೆ ಆಪ್ತಸಂಬಂಧ ಮಾಡುವದರಿಂದ ನೆಲೆಗೊಂಡ ವೈರಕ್ಕೆ ವ್ಯತ್ಯಯ ಸ್ವರೂಪವು ಪ್ರಾಪ್ತವಾಗಬಹುದು."

"ಅಪ್ಪಾ, ನಾನೇನು ಅವಿಚಾರಿಯೆ? ಮುಂಜನು ಮಹತ್ವಾಕಾಂಕ್ಷಿಯಿರುವನು. ಕರ್ನಾಟಕದ ಮೇಲೆ ಅವನ ಕಣ್ಣು ಬಹಳ. ಅವನೊಡನೆ ಆಪ್ತಸಂಬಂಧ ಬಳೆಯಿಸಿದರೂ ಅವನು ತನ್ನ ನಿಶ್ಚಯವನ್ನು ಬಿಡಲಾರನು ಸದ್ಯದಲ್ಲಿ ಅವನು ಸಂಗ್ರಾಮ ಸಿದ್ಧತೆ ಮಾಡತೊಡಗಿರುವನೆಂಬ ವಾರ್ತೆಯು ಬಂದಿದೆ. ಕುಸುಮಕುಮಾರಿಯನ್ನು ಅವನು ವರಿಸಿದ ಮೇಲೆಯೂ ಕರ್ನಾಟಕದ ಮೇಲೆ ದಂಡೆತ್ತಿ ಬರು

ವದು ಸ್ವಾಭಾವಿಕವು. ರಾಕ್ಷಸೀ ರಾಜ್ಯತೃಷ್ಣೆಯವನಾದ ಮುಂಜರಾಜನು ಆತ್ಮೀಯ ಭಾವನೆಗಳನ್ನು ಲೆಕ್ಕಿಸುವದಿಲ್ಲ. ಆಪ್ತಸಂಬಂಧ ಮಾಡಿದ ಮೇಲೆ ಶಸ್ತ್ರವೆತ್ತಿದರೆ ನೀವೇ ನನ್ನ ತಲೆಯ ಮೇಲೆ ಅಪಕೀರ್ತಿಯನ್ನು ಹೊರಿಸುವಿರಿ. ಜನರು ನನ್ನನ್ನು ನಿಂದಿಸತೊಡಗುವರು. ಭಗಿನಿಯಾದ ಈ ಕುಸುಮಕುಮಾರಿಯೂ ನನ್ನನ್ನು ಕಠಿಣ ಹೃದಯದವನೆಂದು ಭಾವಿಸುವಳು. ಕರಳಲ್ಲಿ ಕತ್ತರೆಯಾಡಿಸುವ ಸ್ವಭಾವ ದವನಾದ ಮುಂಜನೊಡನೆ ಆಪ್ತಸಂಬಂಧ ಮಾಡುವದು ಎಷ್ಟು ಮಾತ್ರವೂ ಲೇಸಲ್ಲ ವೆಂದು ನನ್ನ ಬುದ್ಧಿಗೆ ತಿಳಿಯತೊಡಗಿರುವದು. ಅಂತೆಯೆ ನಿಮ್ಮ ಹಾಗು ಕುಸುಮ ಕುಮಾರಿಯ ಮನಸ್ಸಿನ ವಿರುದ್ಧವಾಗಿ ವರ್ತನವಿಟ್ಟಿರುವೆನು. ಅಸ್ತಂಗತವಾದ ಚಾಲುಕ್ಯರವಿಯು ಇದೀಗ ಉದಯಿಸಿರುವನು. ಅವನು ಇಷ್ಟರಲ್ಲಿಯೆ ಅಸ್ತಂಗತ ನಾಗಬೇಕೆಂದು ನನ್ನ ಇಚ್ಛೆಯಿರುವದಿಲ್ಲ. ನನಗೆ ರಾಷ್ಟ್ರಧರ್ಮದ ಮುಂದೆ ಮಿಕ್ಕ ಎಲ್ಲ ಧರ್ಮಗಳೂ ಹೇಯವಾಗಿ ತೋರುವವು. ಮುಂಜರಾಜನಿಂದ ಚಾಲುಕ್ಯರ ಅಭ್ಯುದಯಕ್ಕೆ ವ್ಯತ್ಯಾಸವೊದಗುವದೆಂಬ ಚಿಹ್ನವು ತೋರಲಾರಂಭಿಸಿದೊಡನೆಯೆ ನಾನು ಅವನ ಮೇಲೆ ಶಸ್ತ್ರವನ್ನೆತ್ತತಕ್ಕವನೇ! ಆಗ ಮಾತ್ರ ನಾನು ಆಪ್ತನೆಂಬ ವ್ಯಾಮೋಹದಿಂದ ದೊಡ್ಡ ಮನಸ್ಸು ಮಾಡಲಾರೆನು. ಹಿಂದಿನಿಂದ ಯಾರಾದರೂ ನನಗೆ ಈ ವಿಷಯವಾಗಿ ಕಟುಭಾಷಣಗಳನ್ನಾಡಿದರೆ ಅದು ನನಗೆ ಎಂದೂ ಸಹಿ ಸದು. ಆಪ್ತ ಸಂಬಂಧ ಬಳೆಯಿಸಿದವನು ಸ್ನೇಹದಿಂದ ನಡೆದುಕೊಂಡರೆ ಮಾತ್ರ ನಾನು ಅವನಿಗೆ ಯಾವ ಬಗೆಯ ಕೇಡೂ ಬಗೆಯುವದಿಲ್ಲ. ಕನಿಷ್ಠ ಪಕ್ಷಕ್ಕೆ ಅವನು ತನ್ನಷ್ಟಕ್ಕೆ ತಾನು ಇದ್ದರೆ ಸಾಕು. ದಂತಿದುರ್ಗನು ಚಾಲುಕ್ಯರ ಆಪ್ತತ್ವದ ಲಾಭ ಪಡೆದಂತೆಯೂ, ನಾನು ರಾಷ್ಟ್ರಕೂಟರ ಸಂಬಂಧದ ಲಾಭ ಹೊಂದಿದಂತೆಯೂ ಮುಂಜರಾಜನು ನನ್ನೊಡನೆ ಆಪ್ತಸಂಬಂಧ ಮಾಡಿ ಲಾಭ ಮಾಡಿಕೊಳ್ಳಲಿಕ್ಕೆ ಹವಣಿಸಿದರೆ, ನಾನು ಅವನ ಮೇಲೆ ನಿಜವಾಗಿ ಶಸ್ತ್ರವೆತ್ತುವೆನು. ಈಗ ಮುಂಜ ರಾಜನು ಸಮರಸನ್ನಾಹದಲ್ಲಿರುವನು. ಅವನು ಬೇಗನೆ ದಂಡೆತ್ತಿ ಬರಬಹು ದಾಗಿದೆ. ಯುದ್ಧದ ನಿರ್ಣಯವಾದ ಮೇಲೆ ವಿವಾಹದ ಪ್ರಸ್ತಾಪವನ್ನು ತೆಗೆಯ ಬೇಕೆಂದು ನಿರ್ಧರಿಸಿರುವೆನು. ಈಗ ಈ ಪ್ರಸ್ತಾಪ ತೆಗೆದರೆ ಸಮರಕ್ಕಂಜಿ ಬೀಗ ತನ ಮಾಡಬಂದನೆಂಬ ಉಪಹಾಸಕ್ಕೆ ಈಡಾಗುವೆನು. ಆದ್ದರಿಂದ ಯುದ್ಧದ ನಿರ್ಣಯವಾಗುವ ವರೆಗೆ ಆತ್ಮಸಂಯಮನ ಮಾಡಿಕೊಳ್ಳಬೇಕು.'' ಎಂದು ತೈಲಪ ದೇವನು ನುಡಿದು, ಕುಸುಮಕುಮಾರಿಯನ್ನು ಕುರಿತು:—''ಕುಸುಮ, ನಾನು ಹೇಳಿದ ಮಾತುಗಳಿಗೆ ನಿನ್ನ ಒಪ್ಪಿಗೆಯಿರುವದೆ? ವಿವಾಹವಾದ ಮೇಲೆ ಪತಿಯನ್ನು ದಾರಿಗೆ ತಂದು, ಅವನಿಂದ ಸಾಮ್ರಾಜ್ಯಕ್ಕೆ ಕೇಡುಂಟಾಗದಂತೆ ಮಾಡುವ ಕಾರ್ಯವು ನಿನ್ನದಾಗಿದೆ. ನಾನು ನಿನ್ನನ್ನು ಮುಂಜರಾಜನಿಗೆ ಕೊಡುವೆನು; ಆದರೆ ಅವನು ನನ್ನೊಡನೆ ಎಂದೂ ವಿಶ್ವಾಸಘಾತಕತನ ಮಾಡಲಾಗದು. ಅವನು ನಂಬಿಗೆಗೇಡಿ ಯಿರುವನೆಂಬದು ನನ್ನ ಮನವರಿಕೆಯಾದರೆ ನಾನು ಅವನಿಗೆ ಕಠಿಣವಾದ ದಂಡನೆ

ಯನ್ನು ವಿಧಿಸಲಿಕ್ಕೆ ಹಿಂದೆ ಮುಂದೆ ನೋಡಲಾರೆನು. ನನ್ನ ಈ ಕಟ್ಟಳೆಗೆ ನೀನು ಒಪ್ಪಿದರೆ ನಾನು ನಿನ್ನನ್ನು ಅವಶ್ಯವಾಗಿ ಮುಂಜನಿಗೆ ಧಾರೆಯೆರೆದು ಕೊಡುವೆನು."

ತೈಲಪದೇವನ ಅಮೃತೋಪಮವಾದ ಮಾತುಗಳು ಅಲ್ಪಸ್ವಲ್ಪ ಕಟ್ವಾವನ್ನು ಮಿಶ್ರಿತವಾಗಿದ್ದರೂ ಕುಸುಮಕುಮಾರಿಗೆ ಅತಿಶಯವಾದ ಆನಂದವಾಯಿತು. ಹೇಗಾದರೂ ತನ್ನ ಅಣ್ಣನು ಹಟವನ್ನು ಬಿಟ್ಟು ಮುಂಜರಾಜನೊಡನೆ ಸಂಬಂಧ ಮಾಡಲಿಕ್ಕೆ ಮನಸ್ಸು ಮಾಡಿದ್ದಕ್ಕಾಗಿ ಅವಳು ಕೃತಾರ್ಥಳಾದಳು. ಪರಮಾನಂದ ಭರಿತಳಾದ ಕುಸುಮಕುಮಾರಿಯು ಸಸ್ಮಿತವದನೆಯಾಗಿ—"ಅಣ್ಣಾ, ನಾನು ಅವರಲ್ಲಿ ನೆಲೆಗೊಂಡ ದ್ವೇಷಾಗ್ನಿಯನ್ನು ನೊಂದಿಸುವದಕ್ಕೆ ಮನಃಪೂರ್ವಕವಾಗಿ ಯತ್ನಿಸುವೆನು. ನೀವಂದಂತೆ ಅವರು ಕರ್ನಾಟಕ ಸಾಮ್ರಾಜ್ಯದ ಮೇಲೆ ಕಣ್ಣಿಟ್ಟಿರುವದು ನಿಜವು. ನೀವು ಅವರ ಆಪ್ತರಾದ ಮೇಲೆ ಸದ್ಯದ ಸ್ಥಿತಿಯ ಸುಧಾರಣೆಯಾಗಬಹುದು"

"ಕುಸುಮ, ಹಾಗೆ ಕಲ್ಪಿಸಲಿಕ್ಕೆ ಬರುವಂತಿಲ್ಲ. ಮುಂಜನು ದುರಾಕಾಂಕ್ಷಿಯಾಗಿರುವನು. ರಾಜ್ಯಲೋಭಾಕೃಷ್ಟನಾದ ಅವನು ತನ್ನ ಕಾರ್ಯವನ್ನು ಮಾಡತಕ್ಕವನೇ. ಅವನು ನಮ್ಮ ಸಾಮ್ರಾಜ್ಯದ ಮೇಲೆ ಲೋಭವುಳ್ಳವನಾಗಿರುವನೆಂದು ನಾವು ಅವನಿಗೆ ಸೊಪ್ಪು ಹಾಕುವದಾದರೂ ಅಷ್ಟರಲ್ಲಿಯೇ ಇರುವದು." ಎಂದು ತೈಲಪದೇವನು ನುಡಿಯುತ್ತಿರಲು, ಒಬ್ಬ ಸೇವಕನು ಅಲ್ಲಿಗೆ ಬಂದು—"ಮಹಾರಾಜರೆ, ಧಾರಾನಗರಿಯಿಂದ ದೂತನು ಬಂದಿರುವನು. ಅವನು ಮುಂಜರಾಜರಿಂದ ಪತ್ರ ತಂದಿರುವನಂತೆ. ಆಜ್ಞೆಯಾದರೆ ಒಳಗೆ ಬಿಡುವೆನು."

ಸೇವಕನು ಹೀಗೆ ನುಡಿದ ಕೂಡಲೆ ತೈಲಪದೇವನು ಆ ದೂತನನ್ನು ಕಳುಹಿಸುವದಕ್ಕಾಗಿ ಅವನಿಗೆ ಆಜ್ಞಾಪಿಸಿದನು. ಅನಂತರದಲ್ಲಿ ದೂತನು ಅಲ್ಲಿಗೆ ಬಂದು ತನ್ನ ಒಡೆಯನ ಪತ್ರವನ್ನು ತೈಲಪದೇವನ ವಶಕ್ಕೆ ಕೊಟ್ಟನು. ಪತ್ರವನ್ನು ಸಂಪೂರ್ಣವಾಗಿ ಓದುವದಾದ ಮೇಲೆ ತೈಲಪದೇವನು ಜೋಂಧಾದೇವಿಯನ್ನು ಕುರಿತು-"ಅವ್ವಾ, ಮುಂಜರಾಜನು ಎಷ್ಟು ಉನ್ಮತ್ತನಿರುವನೆಂಬದನ್ನು ನೋಡು. ಅವನು ತನ್ನ ಸ್ವಭಾವಸಿದ್ಧವಾದ ದುರ್ಗುಣಗಳಿಗನುರೋಧವಾಗಿ ನಡೆಯತಕ್ಕವನೇ. ಕುಸುಮಕುಮಾರಿಯನ್ನು ಒಳ್ಳೇ ಮಾತಿನಿಂದ ತನಗೊಪ್ಪಿಸದಿದ್ದರೆ, ದೊಡ್ಡ ಸೈನ್ಯದೊಡನೆ ಬಂದು ಚಾಲುಕ್ಯಸಿಂಹಾಸನವನ್ನು ನಾಶಮಾಡುವೆನೆಂದು ಪತ್ರದಲ್ಲಿ ಬರೆದಿರುವನು. ಏನೂ ಅಡ್ಡಿಯಿಲ್ಲ. ನಾನು ಅವನ ಪರಾಕ್ರಮದ ಅಳವನ್ನು ಕಂಡೇ ಮುಂದಿನ ಕಾರ್ಯ ಮಾಡುವೆನು. ಹಿಂದೆ ಚನ್ನಾಗಿ ಬಿಸಿಯಾಗಿದ್ದರೂ, ಅವನು ಇಷ್ಟರಲ್ಲಿಯೇ ಎಲ್ಲ ಸಂಗತಿಗಳನ್ನು ಮರೆತಂತೆ ತೋರುವದು."

"ಅಣ್ಣಾ," ಕುಸುಮಕುಮಾರಿಯು ತೈಲಪದೇವನ ಮಾತುಗಳಿಂದ ಕಳವಳಗೊಂಡು—"ಯಾರ ಒಳಿತು-ಹೀನಗಳಾದರೂ ನನಗೆ ದುಃಖವಾಗುವದು. ಯುದ್ಧದ ಗೊಂದಲವೆಬ್ಬಿಸದೆ, ಸ್ನೇಹಸಂಬಂಧ ಬಳೆಯಿಸುವದು ಸರ್ವರಿಗೂ ಹಿತಾವಹವಲ್ಲವೆ?"

"ಕುಸುಮಕುಮಾರಿ, ನೀನು ಹುಚ್ಚಳಿರುವೆ. ಮುಂಜನು ಎಂತಹ ಸ್ವಭಾವದವನಿರುವನೆಂಬದನ್ನು ನೀನು ಅರಿತಿಲ್ಲ. ಅವನು ಕೃತಘ್ನನಿರುವನು. ಮಹತ್ವಾಕಾಂಕ್ಷಿಯಿರುವನು. ನೀನು ಅವನನ್ನು ವಿವಾಹವಾದ ನೇಲೆಯಾದರೂ, ಅವನು ನಿನ್ನೊಡನೆ ಸ್ನೇಹದಿಂದಿರುವನೆಂದು ಹೇಳಲಾಗುವದಿಲ್ಲ. ಅವನು ತುಸ ನೀರಲ್ಲಿ ಮುಳುಗುವವನಲ್ಲ. ಈ ಸಂಗತಿಯನ್ನು ರಾಜಕಾರಣದಲ್ಲಿ ಗತಿಯಿಲ್ಲದವಳಾದ ನೀನೇನು ಬಲ್ಲೆ? ತಂಗೀ, ನೀನು ಕೇವಲ ಅವನ ಭಾವಚಿತ್ರದಿಂದ ಅವನ ಗುಣ ರೂಪ ಕುಲ ಶೀಲಗಳನ್ನು ಕಲ್ಪಿಸಿರುವೆ. ಮುಂಜನು ಕರ್ರಗಿರುವನೋ, ಬೆಳ್ಳಗಿರುವನೋ, ಮನುಷ್ಯನೋ, ಪಶುಕೋಟಿಯೊಳಗಿನವನೋ ಎಂಬದನ್ನು ನೀನರಿಯೆ. ಅಂಥ ಶ್ರದ್ಧೆಯವಳಾದ ನೀನು ಸುಮ್ಮನೆ ಹಟಹಿಡಿದಿರುವೆ. ನೀನು ಅವನ ಸಹವಾಸದಲ್ಲಿ ಕೆಲವು ಕಾಲ ಕಳೆದ ನೇಲೆ ಅವನು ನಿಜವಾಗಿ ದುಶ್ಶೀಲನಿರುವನೆಂಬದರ ಅನುಭವವು ನಿನಗೆ ಬರುವದು. ಆಗ ಮಾತ್ರ ನೀನು ನಿನ್ನ ಅದೂರ ದೃಷ್ಟಿಯ ಬಗ್ಗೆ ಪಶ್ಚಾತ್ತಾಪ ಬಡತೊಡಗುವೆ. ಜನವಾಹಿನಿಯನ್ನು ನಚ್ಚಿ ಅಥವಾ ಭಾವಚಿತ್ರ-ಪ್ರಣಯಪತ್ರಗಳನ್ನವಲಂಬಿಸಿ ನೀನು ಅಪಾತ್ರದಲ್ಲಿ ಪ್ರೇಮದಾನ ಮಾಡಿರುವೆಯೆಂದು ನಾನು ಖಂಡಿತವಾಗಿ ಹೇಳುವೆನು. ನನ್ನ ಈ ಮಾತಿನ ಅನುಭವವು ನಿನಗೆ ಹಿಂದಿನಿಂದಾಗುವದು. ಪ್ರತ್ಯಕ್ಷ ಪರಿಚಯವಿಲ್ಲದೆ ಈ ಬಗೆಯಾಗಿ ಅಜಾಗ್ರತೆಯಿಂದ ನಡೆಯುವದು ನಿನ್ನಂತಹ ಸುಶಿಕ್ಷಿತಳಿಗೆ ಸಮಂಜಸವಾಗಲಾರದು."

"ಅಣ್ಣಾ, ನಾನು ಜನವಾಹಿನಿಯನ್ನೂ ಭಾವಚಿತ್ರ-ಪ್ರಣಯಪತ್ರಗಳನ್ನೂ ಅವಲಂಬಿಸಿ ಮುಂಜ ಮಹಾರಾಜರಲ್ಲಿ ಅನುರಕ್ತಳಾದೆನು; ಆದರೆ ನಾನು ಪ್ರೇಮವನ್ನರ್ಪಿಸಿದ ಸ್ಥಾನವು ಅಪಾತ್ರವಲ್ಲವೆಂಬದನ್ನು ಪ್ರತ್ಯಕ್ಷ ದರ್ಶನದಿಂದ—"

"ಏನು? ನೀನು ಮುಂಜನನ್ನು ಪ್ರತ್ಯಕ್ಷವಾಗಿ ಕಂಡಿರುವೆಯಾ? ಎಲ್ಲಿ ಕಂಡಿರುವೆ? ಹೇಗೆ ಕಂಡೆ? ಹೇಳು; ನಿಜವಾದ ಸಂಗತಿಯನ್ನು ನನಗೆ ಹೇಳು."

ತೈಲಪದೇವನು ಕುಸುಮಕುಮಾರಿಯ ಮಾತಿಗೆ ಅಚ್ಚರಿಗೊಂಡು ಹೀಗೆ ಕೇಳಿದ ಕೂಡಲೆ, ಅವಳು ತನ್ನ ಬಾಯಿಂದ ಹೊರಟ ಮಾತುಗಳಬಗ್ಗೆ ಪಶ್ಚಾತ್ತಾಪ ಬಡತೊಡಗಿದಳು. ಮಾತುಗಳು ಪೂರ್ಣವಾಗಿ ಹೊರಬೀಳದ್ದರಿಂದ ಅದರಲ್ಲಿ ಹೇಗಾದರೂ ತಿದ್ದುಪಡೆ ಮಾಡಿಕೊಳ್ಳಬೇಕೆಂದು ಯತ್ನಿಸತೊಡಗಿದಳು. ಕುಸುಮಕುಮಾರಿಯ ಮುಖದಿಂದ ಅಕಸ್ಮಾತ್ತಾಗಿ ದಡ್ಡತನವು ಘಟಿಸಿದ್ದರಿಂದ ಪ್ರಭಾವತಿಯಾದರೂ ಅವಳ ಮುಖವನ್ನು ದಿಟ್ಟಿಸಿನೋಡತೊಡಗಿದಳು. ಈಗ ಕುಸುಮಕುಮಾರಿಯು ತೈಲಪದೇವನನ್ನು ಕುರಿತು:—"ಅಣ್ಣಾ, ನಾನು ಮುಂಜಮಹಾರಾಜರನ್ನು ಪ್ರತ್ಯಕ್ಷವಾಗಿ ಕಾಣುವ ಬಗೆ ಹೇಗೆ? ನಾನು ಅಲ್ಲಿಗೆ ಹೋಗುವಂತಿಲ್ಲ. ನಾನು ಪ್ರೇಮವನ್ನರ್ಪಿಸಿದ ಸ್ಥಾನವು ಅಪಾತ್ರವಲ್ಲವೆಂಬದನ್ನು ಪ್ರತ್ಯಕ್ಷ ದರ್ಶನದಿಂದ ಆಗತಕ್ಕಂತೆ ಪರೋಕ್ಷವಾಗಿ ಮನವರಿಕೆ ಮಾಡಿಕೊಂಡಿರುವೆನು. ನನ್ನ ಮಾತು ಪೂರ್ಣ ಮುಗಿಯುವ ವರೆಗೆ ಅವಕಾಶ ಕೊಡದ್ದರಿಂದ ಅರ್ಥವಿಪರ್ಯಾಸವಾಯಿತು."

"ನಿಜವು. ರಾಜಕುಮಾರಿಯವರು ತಮ್ಮ ಸಖಿಯರನ್ನು ಮಾಳವೆಯರಸರ ಬಗ್ಗೆ ಯಾವಾಗಲೂ ಕೇಳುತ್ತಿರುತ್ತಾರೆ." ಎಂದು ಪ್ರಭಾವತಿಯು ಸಾಕ್ಷಿ ಹೇಳಿದಳು.

ಈ ಮಾತುಗಳಿಂದ ತೈಲಪದೇವನ ಸಾಶಂಕವಾದ ಮನಸ್ಸು ಸಮಾಧಾನ ಗೊಳ್ಳಲಿಲ್ಲ. ಕಾರಸ್ಥಾನಿಗಳಾದ ಸ್ತ್ರೀಯರು ಮುಂಜರಾಜನನ್ನು ಇಲ್ಲಿಗೆ ಕರೆಯಿಸಿಕೊಂಡು, ಕುಸುಮಕುಮಾರಿಗೆ ದರ್ಶನಮಾಡಿಸಿರಬಹುದೆಂದು ಅವನು ತರ್ಕಿಸಿದನು. ಈ ಮಾತಿಗೆ ಆಧಾರಗಳೇನೂ ದೊರೆಯದರಿಂದ ಅವನು ನಿರುಪಾಯನಾಗಬೇಕಾಯಿತು. ಆಗ ಅವನು ಕುಸುಮಕುಮಾರಿಯನ್ನು ಕುರಿತು:— "ಕುಸುಮ, ನಾನು ಮುಂಜನಿಗೆ ನಿನ್ನನ್ನು ಕೊಡುವೆನೆಂದು ವಚನ ಕಳೆದುಕೊಂಡಿರುವೆನು. ವಿವಾಹವು ಮಾತ್ರ ಕಾರಾಗೃಹದಲ್ಲಾಗುವದೆಂಬ ಭವಿಷ್ಯವು ನನಗೆ ತೋರಲಾರಂಭಿಸಿದೆ. ಮುಂಜರಾಜನು ಸಣ್ಣ ಪ್ರಕರಣದವನಲ್ಲ. ಅವನು ಸುಸೂತ್ರವಾಗಿ ಸ್ನೇಹ-ಋಣಾನುಬಂಧಗಳಿಂದ ಆಚರಿಸತಕ್ಕವನಲ್ಲ. ಅಂತೆಯೇ ಕಾರಾಗೃಹದಲ್ಲಿ ವಿವಾಹಕಾರ್ಯವನ್ನು ಜರುಗಿಸುವ ಪ್ರಸಂಗವು ಬರಬಹುದೆಂದು ನಾನು ತರ್ಕಿಸಿರುವೆನು."

"ಏನು, ಕಾರಾಗೃಹದಲ್ಲಿ ಮದುವೆಯೇ!" ಕುಸುಮಕುಮಾರಿಯು ಭಯ-ವಿಸ್ಮಯಗಳಿಂದ ಉದ್ಗಾರತೆಗೆದಳು.

---

## ಧಾರಾನಗರಿಯಲ್ಲಿ.

ಪರಮಾರ ಅರಸನಾದ ಸಿಯಾಕಹರ್ಷನು ದಕ್ಷಿಣ ದಿಗ್ವಿಜಯಮಾಡಿ ದಕ್ಷಿಣಾಪಥವನ್ನು ತನ್ನ ಅಂಕಿತದಲ್ಲಿ ತೆಗೆದುಕೊಳ್ಳಬೇಕೆಂದು ಸಾಹಸ ನಡೆಯಿಸಿದ್ದನು. ಅವನು ಒಮ್ಮೆ ರಾಷ್ಟ್ರಕೂಟರೊಡನೆ ಕಾಳಗ ಮಾಡಿ ವಿಜಯವನ್ನು ಸಂಪಾದಿಸಿದ ಕೆಲವು ದಿನಗಳಲ್ಲಿ ಮರಣಹೊಂದಿದನು. ಅವನ ಮಗನಾದ ಮುಂಜರಾಜನು ತಂದೆಗಿಂತಲೂ ದೀರ್ಘ ಪ್ರಯತ್ನಿಯಾಗಿದ್ದನು. ಕರ್ನಾಟಕ ಸಾಮ್ರಾಜ್ಯವನ್ನು ಪಾದಾಕ್ರಾಂತಗೊಳಿಸುವ ವರೆಗೆ ಅವನ ಮಹಾತ್ವಾಕಾಂಕ್ಷಿಯಾದ ಮನಸ್ಸು ಸಮಾಧಾನ ಹೊಂದುವಂತಿರಲಿಲ್ಲ. ಚಾಲುಕ್ಯ ಸಮ್ರಾಟನಾದ ತೈಲಪದೇವನು ಅವನ ಪ್ರತಿಸ್ಪರ್ಧಿಯಾಗಿದ್ದನು. ಒಂದೆಯೊಮ್ಮೆ ಅವನಿಂದ ಚನ್ನಾಗಿ ಪೆಟ್ಟು ತಿಂದಿದ್ದರೂ, ಮುಂಜರಾಜನು ತನ್ನ ಕಾರ್ಯವನ್ನು ಬಿಡುವ ಮನಸ್ಸು ಮಾಡಲಿಲ್ಲ. ಹೇರಳವಾದ ದಂಡಿನೊಡನೆ ಹೋಗಿ ಮಾನ್ಯಖೇಟ ರಾಜಧಾನಿಯನ್ನು ಮುತ್ತಬೇಕೆಂದು ಅವನು ಸೇನಾಸಿದ್ಧತೆ ನಡೆಯಿಸಿದನು. ಅವನು ಯುದ್ಧದ ಸಿದ್ಧತೆಯನ್ನು ಮೊದಲಿಗಿಂತ ರಭಸದಿಂದ ಸಾಗಿಸಲಿಕ್ಕೆ ಮತ್ತೊಂದು ಕಾರಣವೂ ಘಟಿಸಿತು.

ತೈಲಪದೇವನ ಭಗಿನಿಯಾದ ಕುಸುಮಕುಮಾರಿಯಲ್ಲಿ ಮುಂಜರಾಜನು ಪ್ರಣಯವುಳ್ಳವನಾಗಿದ್ದನಷ್ಟೆ? ತೈಲಪದೇವನು ಸಾಮೋಪಾಯದಿಂದ ತನ್ನ ಭಗಿನಿಯನ್ನು ಧಾರೆಯೆರೆದು ಕೊಟ್ಟರೆ, ಸದ್ಯಕ್ಕೆ ಯುದ್ಧದ ಗೊಂದಲವೆಬ್ಬಿಸಬಾರದೆಂದು ವಿಚಾರಿಸಿ, ಮುಂಜರಾಜನು ತೈಲಪದೇವನಿಗೆ ಪತ್ರವನ್ನು ಬರೆದಿದ್ದನು. ಕುಸುಮಕುಮಾರಿಯನ್ನು ತನಗೆ ಲಗ್ನಮಾಡಿಕೊಡಬೇಕೆಂತಲೂ, ಲಗ್ನ ಮಾಡಿಕೊಡದಿದ್ದರೆ ಯುದ್ಧವನ್ನು ಪ್ರಾರಂಭಿಸಬೇಕಾಗುವದೆಂತಲೂ ಅವನು ಪತ್ರದಲ್ಲಿ ಬರೆದು ಕಳುಹಿಸಿದ್ದನು. ತೈಲಪದೇವನು ಮುಂಜರಾಜನಿಗೆ ಸೊಪ್ಪು ಹಾಕುವಂತಹನಿರಲಿಲ್ಲ. ಪರಾಕ್ರಮವನ್ನು ಪ್ರಕಟಗೊಳಿಸಿ ಸಂಗ್ರಾಮದಲ್ಲಿ ವಿಜಯಶ್ರೀಯನ್ನೊಲಿಸಿಕೊಂಡರೆ ಮಾತ್ರ ಆ ವಿಜಯಲಕ್ಷ್ಮಿಯೊಡನೆ ಗೃಹಲಕ್ಷ್ಮಿಯಾದರೂ ಕೈವಶವಾಗುವಳೆಂಬಾಶಯದ ಪತ್ರವನ್ನು ಅವನು ಮುಂಜರಾಜನಿಗೆ ಕಳುಹಿದ್ದನು. ಪತ್ರದೊಳಗಿನ ಸಂಗತಿಯನ್ನು ನೋಡಿದೊಡನೆಯೆ ಮುಂಜರಾಜನ ತಾಮಸ ಹೃದಯವು ಜಾಗ್ರತವಾಯಿತು. ಆಗ ಅವನು ಸಂಗ್ರಾಮದ ಸಿದ್ಧತೆಯನ್ನು ಮೊದಲಿಗಿಂತಲೂ ಹೆಚ್ಚಾಗಿ ರಭಸದಿಂದ ಸಾಗಿಸಿದನು. ಹೊಸ ಸೈನ್ಯವನ್ನು ಕೂಡಿಸುವದಕ್ಕಾಗಿ ಅವನು ತನ್ನ ಸೇನಾಪತಿಗಳಾದ ವೀರಸೇನ ಕೀರ್ತಿವರ್ಮ ಮೊದಲಾದವರಗೆ ಆಜ್ಞೆ ಮಾಡಿದನು.

ಭವ್ಯವೂ ವಿಸ್ತೃತವೂ ಆದ ರಾಜಮಂದಿರದ ಸಮೀಪದಲ್ಲಿದ್ದ ಸುಶೋಭಿತವಾದ ಮಂತ್ರಣಾಗಾರದಲ್ಲಿ ಪರಮಾರ ವಾಕ್ಪತಿ ಮುಂಜಮಹಾರಾಜನು ರತ್ನಖಚಿತವಾದ ಸುವರ್ಣ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದನು. ಅವನ ಮುಖ್ಯ ಮಂತ್ರಿಯಾದ ರುದ್ರಾದಿತ್ಯನೂ ಉಪಮಂತ್ರಿಗಳಾದ ಭಟ್ಟ ಹಲಾಯುಧ ಧನಪಾಲ ಧನಿಕ ಮೊದಲಾದವರೂ, ಮಹಾ ಸೇನಾಪತಿಯಾದ ವೀರಸೇನನೂ, ಉಪಸೇನಾಪತಿಗಳಾದ ಕೀರ್ತಿವರ್ಮ ಚಂದ್ರಸೇನ ಮೊದಲಾದವರೂ ಸಿಂಹಾಸನದ ಎರಡೂ ಮಗ್ಗಲಿಗೆ ರೌಪ್ಯಾಸನಗಳಲ್ಲಿ ಕುಳಿತುಕೊಂಡಿದ್ದರು. ಸಾರ್ವಭೌಮ ರಾಷ್ಟ್ರಸೂತ್ರಚಾಲಕನೂ ಮುಖ್ಯ ಮಂತ್ರಿಯೂ ಆದ ರುದ್ರಾದಿತ್ಯನ ಹಾಗು ಪ್ರಸಿದ್ಧ ರಾಜನೀತಿ ಶಾಸ್ತ್ರ ನಿಪುಣನಾದ ಧನಪಾಲನ ಮುಖಗಳ ಮೇಲೆ ವಿಷಾದದ ಚಿಹ್ನಗಳು ತೋರಲಾರಂಭಿಸಿದ್ದವು. ಈ ಮಂತ್ರಿದ್ವಯರು ಅನೇಕ ಕಡೆಯ ರಾಜರಿಂದ ಬಂದ ಸಂದೇಶಗಳನ್ನು ತಿಳಿಸತೊಡಗಿದ್ದರು. ರಾಜಸಭೆಯು ನಿಶ್ಶಬ್ದವಾಗಿತ್ತು. ವಿದ್ವಾಂಸರೂ ರಾಜಕಾರಸ್ಥಾನಗಳ ತಂತ್ರಗಳನ್ನು ತಿಳಿಸುವವರೂ ಆದ ಭಟ್ಟ ಹಲಾಯುಧ, ಧನಿಕ, ಧನಂಜಯ ಮೊದಲಾದ ಶಸ್ತ್ರ-ಸಾಹಿತ್ಯ ಪಂಡಿತರು ಮಹಾ ಮಂತ್ರಿಯೂ ಉಪಮಂತ್ರಿಯೂ ಹೇಳುತ್ತಿರುವ ವಾರ್ತೆಗಳನ್ನು ಕೇಳುತ್ತ ತಟಸ್ಥರಾಗಿ ಕುಳಿತಿದ್ದರು. ಸಭೆಯು ಸ್ತಬ್ಧವಾಗಿದ್ದರೂ ಅತ್ಯಂತ ಗಂಭೀರವಾಗಿತ್ತು. ಪರರಾಜರಿಂದ ಬಂದ ಸಂದೇಶಗಳನ್ನು ತಿಳಿಸುವದಾದ ಮೇಲೆ ಮಹಾಮಂತ್ರಿಯಾದ ರುದ್ರಾದಿತ್ಯನು ಮುಂಜರಾಜನನ್ನು ಕುರಿತು ವಿನಯದಿಂದಲೂ ಗಂಭೀರತೆಯಿಂದಲೂ—"ಮಹಾ

ರಾಜರೆ, ಈಗ ನೀವು ಯುದ್ಧಯಾತ್ರೆಯನ್ನು ನಿಲ್ಲಿಸುವದುಚಿತವು. ಸದ್ಯಕ್ಕೆ ನಮಗೆ ಕಾಲವು ಪ್ರತಿಕೂಲವಿದ್ದಂತೆ ತೋರುವದು. ಮುಂದೆ ಪ್ರಸಂಗ ಬಂದಾಗ ನೋ-ಡೋಣವಂತೆ. ಕರ್ನಾಟಕ ಸಮ್ರಾಟನಾದ ತೈಲಪದೇವನಂತಹ ಪ್ರತಾಪಶಾಲಿಯು ಕೂಡ ಪ್ರಸಂಗವಿರುವದರಿಂದ ಅಜಾಗ್ರತೆಯಿಂದಲೂ ಅದೂರ ದೃಷ್ಟಿಯಿಂದಲೂ ಧುಡುಂ ಪ್ರವೇಶ ಮಾಡುವದು ಹಿತಾವಹವಲ್ಲ. ಯುದ್ಧ ಮಾಡದೆ ಗತ್ಯಂತರವಿಲ್ಲ ವೆಂಬ ಪ್ರಸಂಗವು ಇನ್ನೂ ನಮಗೆ ಬಂದಿರುವದಿಲ್ಲ. ಕರ್ನಾಟಕ ಸಾಮ್ರಾಜ್ಯದೊಳ ಗಿನ ಮಂಡಲೇಶ್ವರರಲ್ಲಿ ಕೆಲವು ಜನರು ಅಂತರಂಗದಿಂದ ನಮಗೆ ಅನುಕೂಲ ವಿದ್ದಂತೆ ತೋರುತ್ತಿದ್ದರೂ, ಬಹಿರಂಗವಾಗಿ ತಮ್ಮ ಸಾರ್ವಭೌಮನ ವಿರುದ್ಧ ವೈರ ಬಳೆ ಯಿಸಿ ನಮ್ಮನ್ನು ಕೂಡಲಾರರು. ಭಿಲ್ಲಮದೇವ, ಅಪರಾಜಿತರಾಜ ಮೊದಲಾದ ಮಹಾ ಮಂಡಲೇಶ್ವರರನ್ನಂತು ತೈಲಪದೇವನು ತನ್ನ ಸ್ವಾಧೀನ ಪಡಿಸಿಕೊಂಡಿರು ವನು. ನಾವು ಕೇವಲ ನಮ್ಮ ಬಲವನ್ನೇ ಅವಲಂಬಿಸಬೇಕಾಗಿರುವದು. ಶಕ್ತಿ ಸಮ್ರಾಟನಾದ ತೈಲಪದೇವ ಸಾರ್ವಭೌಮನು ನಮಗೆ ನಿಜವಾಗಿಯೂ ಅಜಿಂಕ್ಯ ನಾಗಿರುವನು. ಇಂತಹ ಸಂಧಿಯಲ್ಲಿ ಅವನ ಮೇಲೆ ದಂಡೆತ್ತಿ ಹೋಗುವದು ಎಷ್ಟು ಮಾತ್ರವೂ ಯೋಗ್ಯವೆನಿಸಲಾರದು. ನಾನು ಕೇವಲ ತಮ್ಮ ಮೇಲಿನ ನಿಷ್ಠೆಯಿಂದ ವಸ್ತುಸ್ಥಿತಿಯನ್ನು ನಿವೇದಿಸುತ್ತಿರುವೆನಲ್ಲದೆ, ಭಯಭೀತನಾಗಿಯಾಗಲಿ ಪಕ್ಷಪಾತ ಭಾವನೆಯಿಂದಾಗಲಿ ಹೀಗೆ ಮಾತನಾಡುವದಿಲ್ಲ. ನಾನು ಮಾಳವ ಸಮ್ರಾಟರ ಸಿಂಹಾಸನದ ಏಕನಿಷ್ಠ ಸೇವಕನಿರುವೆನೆಂಬದರ ವಿಶ್ವಾಸವು ತಮಗಿದ್ದರೆ ನಾನು ಹೇಳಿದಂತೆ ನಡೆಯಲೇಬೇಕು. ಇಲ್ಲದಿದ್ದರೆ ಅನಿಷ್ಟವೊದಗುವದೆಂದು ನಾನು ಸಾರಿ ಸಾರಿ ಹೇಳುವೆನು. ತಮ್ಮ ತೀರ್ಥರೂಪರವರಾದ ಸಾರ್ವಭೌಮ ಸಿಯಾಕ ಹರ್ಷರು ಪ್ರತಿಯೊಂದು ವಿಷಯದಲ್ಲಿ ನನ್ನ ಅಭಿಪ್ರಾಯ ಪಡೆದು ಅದರಂತೆ ವರ್ತಿಸುತ್ತಿದ್ದರು. ನೀವಾದರೂ ಅವರ ಅನುಕರಣ ಮಾಡಿದರೆ ರಾಷ್ಟ್ರಾಭ್ಯುದಯ ವಾಗುವದು. ಮಹಾರಾಜರು ತಮ್ಮ ಪರಾಕ್ರಮವನ್ನು ಪ್ರಕಟಗೊಳಿಸಬಾರದೆಂಬ ಹಟವನ್ನು ನಾನು ಹಿಡಿದಿಲ್ಲ. ರಾಜಕಾರಣವು ಅತ್ಯಂತ ಸೂಕ್ಷ್ಮವಿರುವದೆಂಬ ದನ್ನು ತಾವೇನು ಅರಿಯದಿಲ್ಲ. ಪ್ರಸಂಗ ಸಾಧಿಸಿ ಶಕ್ತಿಯನ್ನು ಯೋಜಿಸಿದರೆ ಫಲದ್ರೂಪವಾಗುವದು. ಸದ್ಯಕ್ಕೆ ದಂಡಯಾತ್ರೆಯನ್ನು ನಿಲ್ಲಿಸಬೇಕು. ಇಷ್ಟೇ ನನ್ನ ವಿನಂತಿಯು.''

• ರುದ್ರಾದಿತ್ಯನು ನಿಸ್ಪೃಹಮನೋವೃತ್ತಿಯಿಂದ ಮಾತನಾಡಿದ್ದನ್ನು ಕೇಳಿ, ಸಭಿಕರು ವಿಸ್ಮಿತರಾದರು. ಅವರು ಚಿತ್ರದಂತೆ ಸ್ತಬ್ಧರಾಗಿ ಕುಳಿತುಬಿಟ್ಟಿದ್ದರು. ಮಹಾಮಂತ್ರಿಯ ಮಾತುಗಳು ಮುಂಜರಾಜನಿಗೆ ತೀರ ಅಸಮಂಜಸವಾಗಿ ತೋರಿ ದವು. ಮಂತ್ರಿಯು ವೃದ್ಧನಾಗಿದ್ದರಿಂದ ಅವನ ರಾಜನೀತಿ ನೈಪುಣ್ಯವು ನಷ್ಟ ವಾಗಿರುವದೆಂದೂ, ಯುದ್ಧಯಾತ್ರೆಗಾಗಿ ಅವನು ಬಹಳವಾಗಿ ಅಂಜುತ್ತಿರುವ ನೆಂದೂ ಮುಂಜರಾಜನು ತಿಳಿದನು. ಆಗ ಅವನು ಮಹಾಮಂತ್ರಿಯನ್ನು ಕುರಿತು:

"* ಕಾಕಾಸಾಹೇಬ, ನಿಮ್ಮ ಮಾತುಗಳನ್ನು ಕೇಳಿ ನನಗೆ ಬಹಳೇ ವಿಸ್ಮಯ ವಾಯಿತು. ಶುಷ್ಕವಾದ ಕಾರಣಗಳನ್ನು ಮುಂದೆ ಮಾಡಿ ಕರ್ನಾಟಕದ ಮೇಲೆ ದಾಳಿಮಾಡಬಾರದೆಂದು ಹೇಳಿದ ನಿಮ್ಮ ಅಭಿಪ್ರಾಯವು ನನಗೆ ಎಷ್ಟು ಮಾತ್ರವೂ ಸಮಂಜಸವೆನಿಸಲೊಲ್ಲದು. ಯುದ್ಧದ ಸಿದ್ಧತೆಯು ಚನ್ನಾಗಿ ಇರದ್ದರಿಂದ ಹಿಂದೆ ನಮಗೆ ಅಪಜಯವೊದಗಿದ ಸಂಗತಿಯು ನಿಜವು. ಈಗ ನಾವು ಸಂಗ್ರಾಮದ ಸಿದ್ಧತೆ ಮಾಡಿಕೊಂಡಿರುವೆವು. ಈಗ ತೈಲಪದೇವನಲ್ಲಿ ಯಾವ ಅಲೌಕಿಕ ಶಕ್ತಿಯು ಬಂದಿರುವದು? ಅವನಿಗೆ ಯಾವ ಅಜಿಂಕ್ಯ ನರಶಾರ್ದೂಲನ ಸಹಾಯವು ದೊರೆ ತಿರುವದು? ಕರ್ನಾಟಕವನ್ನು ಅಂಕಿತದಲ್ಲಿ ತೆಗೆದುಕೊಳ್ಳದೆ ನನ್ನ ಆತ್ಮವು ಶಾಂತ ವಾಗುವಂತಿಲ್ಲ. ಮದಾಂಧನಾದ ತೈಲಪದೇವನ ಸಂದೇಶವನ್ನು ನೀವು ತಿಳಿದಿರುವಿ ರಷ್ಟೆ? ನಮ್ಮ ನಿರೋಪವನ್ನು ಶಿರಸಾವಹಿಸಿ ರಾಜಕುಮಾರಿಯನ್ನು ಕಾಣಿಕೆಯಾಗಿ ಅರ್ಪಿಸಿದ್ದರೆ, ಬಹಳಮಾಡಿ ಯುದ್ಧದ ಪ್ರಸಂಗವೊದಗುತ್ತಿದ್ದಿಲ್ಲ. ರಾಜಕುಮಾ ರಿಯು ನನಗೆ ತನ್ನ ಹೃದಯವನ್ನೊಪ್ಪಿಸಿ ತಪವನ್ನಾಚರಿಸುತ್ತಿರುವಳು. ಕರ್ನಾ ಟಕವನ್ನು ಅಂಕಿತದಲ್ಲಿ ತೆಗೆದುಕೊಳ್ಳುವದಕ್ಕಿಂತ ಮೊದಲು ರಾಜಕುಮಾರಿಯನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿದೆ. ತೈಲಪದೇವನಿಗಿಂತ ನಮ್ಮ ಸಾಮರ್ಥ್ಯವು ಕಡಿಮೆ ಇರುವದೆಂದು ಭಾವಿಸುವದು ತೀರ ಅನುಚಿತವು. ಕರ್ನಾಟಕದ ಮೇಲೆ ದಂಡೆತ್ತಿ ಹೋಗಿ ವಿಜಯಶ್ರೀಯನ್ನೂ ಗೃಹಶ್ರೀಯನ್ನೂ ಸ್ವಾಧೀನಪಡಿಸಿಕೊಳ್ಳ ದಿದ್ದರೆ, ಈ ಮಾಳವ ಸಮ್ರಾಟನ ಗೌರವವು ಉಳಿಯುವದೆ? ಮುಂದಕ್ಕಿಟ್ಟ ಹೆಜ್ಜೆ ಯನ್ನು ಹಿಂದಿಡುವದು ಪೌರುಷವೆನಿಸುವದೆ? ಸಂಗ್ರಾಮದಲ್ಲಿ ಶೌರ್ಯ ಸಾಹಸ ಗಳನ್ನು ತೋರಿಸಿ ವಿಜಯ ಮಾಲೆಯಿಂದ ವಿಭೂಷಿತನಾಗಿ ಬರದಿದ್ದರೆ, ಅಮೋಘ ಸೈನ್ಯವನ್ನೂ ಅದ್ವಿತೀಯ ಸಮರಪಟುಗಳಾದ ಸೇನಾನಾಯಕರನ್ನೂ ರಾಜಕಾರಣ ದುರಂಧರರಾದ ಮಂತ್ರಿಗಳನ್ನೂ ಸಂಪಾದಿಸಿದ್ದಕ್ಕೆ ಸಾರ್ಥಕವೇನು? ನೀವು ಯಾವ ಬಗೆಯ ಯೋಚನೆಯನ್ನೂ ಮಾಡಬೇಡಿರಿ. ನೀವು ದುಷ್ಟಭಾವನೆಗಳಿಂದ ಹೀಗೆ ಉಪದೇಶಿಸುವಿರೆಂದು ನಾನು ತಿಳಿದಿರುವದಿಲ್ಲ. ಈಗ ನಿಮ್ಮನ್ನು ಮುಪ್ಪು ಆವರಿಸಿರು ವದು. ವಯೋಮಾನಕ್ಕನುಗುಣವಾಗಿ ನೀವು ಇಂದ್ರಿಯಶೈಥಿಲ್ಯ ಹೊಂದಿರುವಿರಿ. ಅಂತೆಯೇ ನಿಮ್ಮಲ್ಲಿ ಅಂಜುಬುರುಕುತನವು ತಲೆದೋರತೊಡಗಿದೆ. ವರ್ಧಮಾನ

* ರುದ್ರಾದಿತ್ಯನು ವಯೋವೃದ್ಧನೂ ಜ್ಞಾನವೃದ್ಧನೂ ಇದ್ದುದರಿಂದ ಮುಂಜರಾಜನು ಅವನನ್ನು ಬಹಳವಾಗಿ ಸನ್ಮಾನಿಸುತ್ತಿದ್ದನು. ಮುಂಜರಾಜನನ್ನು ಅವನ ತಂದೆಯಾದ ಸಿಯಾಕ ಹರ್ಷನು ತನ್ನ ಮರಣಕಾಲದಲ್ಲಿ ರುದ್ರಾದಿತ್ಯನಿಗೆ ಒಪ್ಪಿಸಿದ್ದನು; ಹಾಗು ಪುತ್ರವತ್ಸರಿಪಾಲನೆ ಮಾಡಬೇಕೆಂದು ಸೂಚಿಸಿದ್ದನು. ಇದೇ ಸಂಬಂಧದಿಂದ ಮುಂಜರಾಜನು ರುದ್ರಾದಿತ್ಯನನ್ನು ತನ್ನ ತಂದೆಯ ಸ್ಥಳದಲ್ಲಿ ಭಾವಿಸಿ, ಅವನಿಗೆ ಬಹಳ ಮರ್ಯಾದೆ ಕೊಡುತ್ತಿದ್ದನು; ಅವನಿಗೆ ಕಾಕಾಸಾಹೇಬ ಎಂದು ಸಂಬೋಧಿಸತೊಡಗಿದ್ದನು. ಈ ಪದ್ಧತಿಯನ್ನು ಅವನು ಕಡೆತನಕ ಬಿಡಲಿಲ್ಲ.

ವಿಕ್ರಮಶಾಲಿಗಳಾದ ಪ್ರತಿಭಾಸಂಪನ್ನ ತರುಣರಿಗೆ ನಿಮ್ಮ ಮಾತುಗಳು ಎಂದೂ ಗ್ರಾಹ್ಯವಾಗಲಾರವು.''

ನಿಜವಾಗಿ ವಿಚಾರಿಸಿದರೆ ರುದ್ರಾದಿತ್ಯನ ಮಾತುಗಳಲ್ಲಿ ನಿಜವಾದ ತಥ್ಯಾಂಶ ವಿತ್ತು. ತೈಲಪದೇವನೊಡನೆ ಕಾಳಗವನ್ನು ಪ್ರಾರಂಭಿಸಕೂಡದೆಂದು ಹೇಳಲಿಕ್ಕೆ ಸಬಲವಾದ ಕಾರಣವಿತ್ತು. ಅವನು ರಾಜಕಾರಣ ಪಟುವಾಗಿದ್ದನು. ಅನುಭವಿಕ ನಿದ್ದನು. ಮುಂಜರಾಜನು ದುರಾಗ್ರಹ ಹಿಡಿದು ಅಪ್ರಾಸಂಗಿಕತನದಿಂದ ಆವೇಶ ಯುಕ್ತವಾದ ಭಾಷಣಗಳನ್ನಾಡಿದ್ದು ಆ ಧೂರ್ತನಿಗೆ ಸರಿದೋರಲಿಲ್ಲ. ಇಷ್ಟು ದಿನ ಗಳ ವರೆಗೆ ಜಾಣ್ಮೆಯಿಂದಲೂ ಏಕನಿಷ್ಠೆಯಿಂದಲೂ ರಾಜ್ಯ ಸೂತ್ರಗಳನ್ನು ಚಾಲನೆ ಮಾಡಿದ ಸ್ವಾಮಿಭಕ್ತ ರುದ್ರಾದಿತ್ಯನು ಮುಂಜರಾಜನ ಉಪಮರ್ದದಿಂದ ಸಂತಾಪ ಗೊಳ್ಳಲಿಲ್ಲ; ಕ್ಲೇಶಬಡಲಿಲ್ಲ. ಮುಂಜರಾಜನು ದೀರ್ಘಾಲೋಚನೆ ಮಾಡದೆ ಹುಂಬತನ ಮಾಡಲುಪಕ್ರಮಿಸಿದ್ದು ನೋಡಿ ಅವನ ಹೃದಯವು ದುಃಖ ಸಂತಾಪ ಗಳಿಂದ ಜಾಗ್ರುತವಾಯಿತು. ಆದರೂ ಅವನು ಯಾವ ವಿಕಾರಗಳನ್ನೂ ವ್ಯಕ್ತಪಡಿ ಸದೆ, ಶಾಂತಸ್ವರದಿಂದ—''ಮಹಾರಾಜರೆ, ಸದ್ಯದ ಪರಿಸ್ಥಿತಿಯಲ್ಲಿ ದಂಡಯಾತ್ರೆ ಗಾಗಿ ಹೊರಡುವದು ಶ್ರೇಯಸ್ಕರವಲ್ಲವೆಂದು ನಾನು ಅಭಿಪ್ರಾಯಬಟ್ಟದ್ದರಿಂದ ನಿಮಗೆ ವಿಸ್ಮಯವಾಗಿರಬಹುದು. ಅಯೋಗ್ಯವಾದ ಮತಪ್ರದರ್ಶನ ಮಾಡಿದ ನೆಂದು ಸಿಟ್ಟಾದರೂ ಬಂದಿರಬಹುದು. ನಾನು ವಯಾತೀತನಾಗಿರುವದೇನೋ ನಿಜವು. ಆದರೂ ರಾಜಕಾರಣದಲ್ಲಿ ಅಯೋಗ್ಯ ಸೂಚನೆ ಮಾಡುವಷ್ಟು ಭ್ರಮೆಯು ನನಗುಂಟಾಗಿಲ್ಲ. ಹಾಗಾಗಿದ್ದರೆ ನಾನು ಮಂತ್ರಿಪದಕ್ಕೆ ಶರಣುಹೊಡೆಯುತ್ತಿದ್ದೆನು. ಈ ದೇಹದಲ್ಲಿ ಪ್ರಾಣಸಂಚಾರವಾಗಿರುವ ವರೆಗೆ ನನ್ನಿಂದ ಅಸಮಂಜಸ ವಿಚಾರಗಳು ಪ್ರಕಟವಾಗಲಿಕ್ಕಿಲ್ಲವೆಂದು ಆತ್ಮವಿಶ್ವಾಸವಿರುವದು. ತೈಲಪದೇವನಲ್ಲಿ ಅಂತಹ ಅಲೌಕಿಕ ಶಕ್ತಿಯೇನಿರುವದೆಂದು ನೀವು ಕೇಳುತ್ತೀರಲ್ಲವೆ? ಅವನಲ್ಲಿ ನಿಶ್ಚಯವಾಗಿ ಅದ್ಭುತ ಶಕ್ತಿಯು ಪ್ರಾದುರ್ಭವಿಸಿರುವದು. ಅಜಿಂಕ್ಯರಾದಂತಹ ಮಹಾಮಂಡಲೇ ಶ್ವರರು ಅವನ ಕೈಯಲ್ಲಿರುವರು. ಅರಿಕೇಸರಿ, ಭಿಲ್ಲಮದೇವ, ಅಪರಾಜಿತ, ಜಾತ ರಸ, ಶಾಂತಿವರ್ಮ, ಕಾರ್ತವೀರ್ಯ, ಭೀಮರಸ ಮೊದಲಾದ ಮಂಡಲೇಶ್ವರರನ್ನು ನೀವು ಸಾಮಾನ್ಯರೆಂದು ತಿಳಿದುಕೊಂಡಿರುವಿರೇನು? ರಾಷ್ಟ್ರಕೂಟರ ಕಾಲಕ್ಕೆ ತೈಲಪ ದೇವನು ಎಷ್ಟು ನಿರಾಧಾರಿಯಾಗಿದ್ದರೂ ವಿಜಯ ಸಂಪಾದನೆ ಮಾಡಿಕೊಂಡನು. ಈಗಂತೂ ಅವನು ಸರ್ವಶಕ್ತಿಸಂಪನ್ನನಿರುವನು. ಸದ್ಯಕ್ಕೆ ಕರ್ನಾಟಕ ಸಾಮ್ರಾ ಜ್ಯವು ಅಭ್ಯುದಯಹೊಂದುತ್ತ ನಡೆದಿರುವದು. ಉತ್ತಮನಾದ ರಾಜ, ಜಾಣ ಮಂತ್ರಿ, ಬಲಾಢ್ಯರಾಜರ ಮೈತ್ರಿ, ಭೂರಿಸಂಪತ್ತು, ಭದ್ರವಾದ ಕೋಟೆ-ಕೊತ್ತಳ, ಅಮೋಘವಾದ ಸೇನೆ, ಬುದ್ಧಿವಂತರೂ ಏಕನಿಷ್ಠರೂ ಆದ ಅಧಳಿತಗಾರರು ಮೊದ ಲಾದವರಿಂದ ಕೂಡಿದ ರಾಷ್ಟ್ರವು ಉನ್ನತಿಯನ್ನೇ ಹೊಂದುವದು. ಕರ್ನಾಟಕ ಸಾಮ್ರಾಜ್ಯಕ್ಕೆ ಈ ಎಲ್ಲ ಬಗೆಯ ಅನುಕೂಲತೆಗಳುಂಟಾಗಿರುವವು. ಚಾಲುಕ್ಯರ

ಅಭ್ಯುದಯುವಾಗಬೇಕೆಂದು ಜಗದೀಶನ ಪ್ರೇರಣೆಯಿದ್ದಂತೆ ತೋರುವದು. ಇಂತಹ ಸಂಧಿಯಲ್ಲಿ ಕಾಲು ಕೆದರಿ ಜಗಳ ತೆಗೆಯಬಾರದೆಂದು ನನ್ನ ನಮ್ರ ವಿನಂತಿಯುಂಟು."

ರುದ್ರಾದಿತ್ಯನು ಹೀಗೆ ನುಡಿಯಲು, ಮುಂಜರಾಜನು ಅವನ ಮೇಲೆ ಸಂತಾಪಗೊಂಡನು. ಶತ್ರುಗಳಿಗೆ ಅಂಜಿ, ಅವರ ಪ್ರಶಂಸೆ ಮಾಡುವ ಗುಣವು ಮಂತ್ರಿಯಲ್ಲಿ ಹೊಸದಾಗಿ ಪ್ರಾದುರ್ಭವಿಸಿರುವದೆಂದು ಮುಂಜರಾಜನು ತಿಳಿದುಕೊಂಡನು. ಆಗ ಅವನು ಕಠೋರವಾಣಿಯಿಂದ:—"ಕಾಕಾಸಾಹೇಬರೆ, ನೀವು ಹೇಳುವ ಅನುಕೂಲತೆಗಳು ಮಾಳವರಾಷ್ಟ್ರಕ್ಕಿಲ್ಲವೆ? ಮಾಳವ ಸಾರ್ವಭೌಮನಾದ ನಾನು ಹೇಡಿಯೆ? ಮಹಾಮಂತ್ರಿಗಳಾದ ನೀವೂ ಉಪಮಂತ್ರಿಗಳಾದ ಧನಪಾಲರೂ ಮಂದಬುದ್ಧಿಯವರೆ? ಬಲಾಢ್ಯ ರಾಜವಂಶಗಳ ಮೈತ್ರಿಯು ನಮಗಿಲ್ಲವೆ? ಚೇದಿ† ರಾಜನಾದ ಅಜಯದೇವನೂ, ಗುಜರಾಥದ ಮೂಲರಾಜನೂ,‡ ಪುಷ್ಕರ ರಾಜನೂ§ ನಮಗೆ ಸಹಾಯಮಾಡಲಿಕ್ಕೆ ಸಮ್ಮತಿಸಬಹುದು. ತಿರುಗಿ ಕೇಳಿದರೆ, ವಿಕ್ರಮಾರ್ಜಿತ ಸತ್ವಶಾಲಿಯಾದ ನನಗೆ ಯಾರ ಆವಶ್ಯಕತೆಯೂ ಇಲ್ಲ. ತೈಲಪದೇವನನ್ನು ರಣದಲ್ಲಿ ಸೋಲಿಸಿ, ದಿವ್ಯಲಾವಣ್ಯನಿಧಿಯನ್ನು ಸ್ವಾಧೀನಪಡಿಸಿಕೊಳ್ಳದಿದ್ದರೆ, ಬಳಿಯಲ್ಲಿ ಅಮೋಘ ಸೈನ್ಯವೂ ಸತ್ವಶಾಲಿಗಳಾದ ಸೇನಾಪತಿಗಳೂ ಇದ್ದು ಪ್ರಯೋಜನವೇನು? ಕಾಕಾಸಾಹೇಬರೆ, ನೀವು ಚನ್ನಾಗಿ ವಿಚಾರಿಸಿ ನೋಡಿದರೆ, ನನ್ನ ಮಾತು ಸತ್ಯವೆಂದು ತಿಳಿಯುವದು."

"ಮಹಾರಾಜರೆ!" ಮುಂಜರಾಜನನ್ನು ಕುರಿತು ರುದ್ರಾದಿತ್ಯನು ಸ್ಪಷ್ಟವಾದ ವಾಣಿಯಿಂದ:—ಬೇರೆ ಬೇರೆ ಕಡೆಯಿಂದ ಬಂದ ಸಂದೇಶಗಳನ್ನು ತಮಗೆ ತಿಳಿಸಿರುವೆನು. ಮಿತ್ರರಾಜರ ಹಾಗು ಅಂಕಿತ ರಾಜರ ಸಂದೇಶ ನೋಡಿದರೆ ಸದ್ಯಕ್ಕೆ ಕಾಲವು ಪ್ರತಿಕೂಲವೆಂದೇ ಹೇಳಬೇಕಾಗಿದೆ. ಗುಜರಾಥದ ಮೂಲರಾಜನು ತೈಲಪದೇವನಿಗೆ ಅಂಕಿತನಾಗಿರುವನು. ಆವನು ನಮ್ಮ ಪಕ್ಷಕ್ಕೆ ಎಂದೂ ಬರಲಾರನು.

† ಜಬ್ಬಲಪುರದ ಹತ್ತರ ನರ್ಮದೆಯ ತೀರದಲ್ಲಿ ತಿಹೋರ ಎಂಬ ಒಂದು ಹಳ್ಳಿಯಿರುವದು. ಅದಕ್ಕೆ ತ್ರಿಪುರಿಯೆಂಬ ಹೆಸರಿತ್ತು. ಈ ತ್ರಿಪುರಿಗ್ರಾಮದ ಸುತ್ತಮುತ್ತಲಿನ ಪ್ರದೇಶಕ್ಕೆ ಚೇದಿರಾಜ್ಯವೆನ್ನುತ್ತಿದ್ದರು. ಚಾಲುಕ್ಯಸಾರ್ವಭೌಮನಾದ ತೈಲಪದೇವನ ತಾಯಿಯು ಇದೇ ಚೇದಿದೇಶದ ರಾಜಪುತ್ರಿಯು.

‡ ಗುಜರಾಥದ ರಾಜಧಾನಿಯು ಅನಹಿಲ ಪಟ್ಟಣವು. ಇದನ್ನು ಚಾವಡೆ ಮನೆತನದ ವನರಾಜನೆಂಬವನು ಕಟ್ಟಿಸಿದನು. ಕ್ರಿ. ಶ ೯೪೨ರ ವರೆಗೆ ಅದೇ ಮನೆತನದ ಅರಸರು ಅನಹಿಲ ಪಟ್ಟಣದಲ್ಲಿ ಆಳುತ್ತಿದ್ದರು. ಚಾವಡೆ ಮನೆತನದ ಕಡೆಯ ಅರಸನಾದ ಸಾಮಂತಸಿಂಹನನ್ನು ಅವನ ಅಳಿಯನಾದ ಚಾಲುಕ್ಯರ ಮೂಲರಾಜನು ಸೋಲಿಸಿ, ಅವನ ರಾಜ್ಯವನ್ನು ಸ್ವಾಧೀನ ಪಡಿಸಿಕೊಂಡನು. ಈ ಮೂಲರಾಜನು ತೈಲಪದೇವನ ಅಂಕಿತದಲ್ಲಿದ್ದನು.

§ ಅಜಮೀರಕ್ಕೆ ಪುಷ್ಕರವೆಂಬ ಹೆಸರಿತ್ತು. ಅದೇ ಹೆಸರಿನ ಸರೋವರವು ಅಜಮೀರದ ಬಳಿಯಲ್ಲಿರುವದು.

ಚೇದಿ ರಾಜನಾದ ಅಜಯದೇವನು ತೈಲಪದೇವನ ವಿರುದ್ಧವಾಗಿ ನಮಗೆ ಸಹಾಯಮಾಡುವನೆಂಬ ಆಶೆಯುಂಟು. ಮಾಳವದ ಉತ್ಕರ್ಷವು ಅವನಿಗೆ ಅಸಹ್ಯ ವೆನಿಸತೊಡಗಿರುವದರಿಂದ ಅವನು ಪ್ರಸಂಗದಲ್ಲಿ ವಿಶ್ವಾಸಘಾತಕತನ ಮಾಡದಿರ ಲಾರನೆಂಬದನ್ನು ನಿಶ್ಚಿತವಾಗಿ ಹೇಳಲಾಗುವದಿಲ್ಲ. ಪುಷ್ಕರರಾಜನು ನಿಮ್ಮ ಸ್ನೇಹಿತನಿರುವದರಿಂದ ಅವನು ನಿಮಗೆ ಬೇಕಾದಂತೆ ನೆರವಾಗುವದರಲ್ಲಿ ಸಂದೇಹ ವಿಲ್ಲ. ಸದ್ಯಕ್ಕೆ ಮಾತ್ರ ಅವನು ಗೃಹಕಲಹದಲ್ಲಿ ನಿಮಗ್ನನಾಗಿರುವದರಿಂದ ನಿಮಗೆ ಸಹಾಯ ಮಾಡುವದಕ್ಕೆ ಸಮರ್ಥನಾಗುವನೋ ಇಲ್ಲವೋ ಯಾರು ಬಲ್ಲರು? ಕರ್ನಾಟಕ ಸಾಮ್ರಾಜ್ಯದೊಳಗಿನ ಮಂಡಲೇಶ್ವರರ ಆಶೆಯನ್ನಂತೂ ಬಿಟ್ಟುಬಿಡು ವದೇ ಲೇಸು. ಕಕ್ಕಲದೇವನು ಮರಣ ಹೊಂದಿದ ಮೇಲೆ ರಾಷ್ಟ್ರಕೂಟರ ಪಕ್ಷ ಪಾತದಿಂದ ಎಷ್ಟೋ ಮಂಡಲೇಶ್ವರರೂ ಮಹಾ ಸಾಮಂತರೂ ತೈಲಪದೇವ ನೊಡನೆ ಬಡಿದಾಡಿ, ಕಡೆಗೆ ಅವನ ಆಶ್ರಯವನ್ನೇ ಹೊಂದಿರುವರು. ನಮಗೆ ಸ್ವಕೀಯರ ಅನುಕೂಲವಿಲ್ಲ, ತೈಲಪದೇವನಿಗೆ ಮಾತ್ರ ಅವನ ಮಾಂಡಲಿಕರು ಏಕನಿಷ್ಠೆಯಿಂದ ಸಹಾಯ ಮಾಡಲು ಸಿದ್ಧರಿರುವರು. ಮಾನ್ಯಖೇಟದ ವರೆಗೆ ದಂಡೆತ್ತಿ ಹೋಗುವದೇನು ಸಾಮಾನ್ಯ ಸಂಗತಿಯಲ್ಲ. ದಾರಿಯಲ್ಲಿ ಕರ್ನಾಟಕ ಸಾಮ್ರಾಜ್ಯಕ್ಕೆ ಅಂಕಿತರಾದ ಮಂಡಲೇಶ್ವರರ ಪ್ರತ್ಯವಾಯಗಳನ್ನು ನಿವಾರಿಸಿ ಕೊಳ್ಳಬೇಕಾದರೆ ನಿಮ್ಮ ಅರ್ಥ-ಮರ್ಥ ಬಲವು ವೆಚ್ಚವಾಗಿ ಹೋಗುವದು. ರಾಜ ಕುಮಾರಿಯನ್ನು ವಿವಾಹವಾಗಬೇಕೆಂದು ನಿಮ್ಮ ಉತ್ಕಟೇಚ್ಛೆಯಿದ್ದರೆ, ತೈಲಪ ದೇವನೊಡನೆ ಸ್ನೇಹ ಬಳೆಯಿಸಿ ಕಾರ್ಯಸಾಧನೆ ಮಾಡಿಕೊಳ್ಳಬೇಕು. ನಾನಂತೂ ನನ್ನ ಸ್ಪಷ್ಟವಾದ ಅಭಿಪ್ರಾಯವಿತ್ತಿರುವೆನು. ಮಿಕ್ಕ ಮಂತ್ರಿ-ಸೇನಾಪತಿಗಳ ಮತ ವೇನಿರುವದೆಂಬದನ್ನು ತಿಳಿದುಕೊಂಡು ಮುಂದಿನ ಕೆಲಸ ಮಾಡಿರಿ"

"ಮಹಾರಾಜರೇ," ಉಪಮಂತ್ರಿಯಾದ ಧನಪಾಲನು ವಿನಯದಿಂದ ಮುಂಜರಾಜನನ್ನು ಕುರಿತು:--"ರುದ್ರಾದಿತ್ಯ ಮಹಾಮಂತ್ರಿಗಳ ಅಭಿಪ್ರಾಯವು ಸರಿಯಾಗಿರುವದು. ತೈಲಪದೇವನ ಸ್ನೇಹ ಸಂಬಂಧವನ್ನು ಬಳೆಯಿಸಿದರೆ ರಾಜ ಕುಮಾರಿಯು ತಾನಾಗಿ ನಿಮ್ಮ ವಶಳಾಗುವಳು. ನಿರರ್ಥಕವಾಗಿ ಯುದ್ಧದ ಗೊಂದಲವೆಬ್ಬಿಸಬಾರದೆಂದು ನನ್ನ ಅಭಿಪ್ರಾಯವಿರುವದು."

ಧನಪಾಲನು ಹೀಗೆ ನುಡಿದ ಮೇಲೆ ಭಟ್ಟಹಲಾಯುಧನು:-"ಮಹಾಮಂತ್ರಿ ಗಳಾದ ರುದ್ರಾದಿತ್ಯರ ಹಾಗು ಉಪಮಂತ್ರಿಗಳಾದ ಧನಪಾಲರ ಅಭಿಪ್ರಾಯಗಳು ಗ್ರಾಹ್ಯವಾಗಿರುತ್ತವೆ. ತೈಲಪದೇವನೊಡನೆ ಸ್ನೇಹ ಬಳೆಯಿಸುವದರಿಂದ ಲಾಭ ವುಂಟು. ನಮ್ಮ ರಾಷ್ಟ್ರವು ಸರ್ವಶಕ್ತಿಸಂಪನ್ನವಾದ ಮೇಲೆ ಕರ್ನಾಟಕದ ಮೇಲೆ ದಾಳಿಮಾಡಬಹುದು"

ಭಟ್ಟಹಲಾಯುಧನಂತೆಯೆ ಧನಿಕ ಮಂತ್ರಿಯು ತನ್ನ ಅಭಿಪ್ರಾಯವನ್ನು ಹೇಳಿದನು. ಮುಂಜರಾಜನಿಗೆ ಇವರ ಅಭಿಪ್ರಾಯಗಳು ಸರಿಯಾಗಿ ತೋರಲಿಲ್ಲ.

ಕರ್ನಾಟಕದ ಮೇಲೆ ದಾಳಿ ಮಾಡಿ ಅದನ್ನು ಪಾದಾಕ್ರಾಂತಗೊಳಿಸಿ, ಲಾವಣ್ಯ ಮಯಿಯಾದ ಕುಸುಮಕುಮಾರಿಯನ್ನು ಯಾವಾಗ ಕೈವಶ ಮಾಡಿಕೊಂಡೇನೋ ಎಂದು ಅವನು ಆತುರಗೊಂಡಿದ್ದನು. ಅಂತೆಯೆ ಮಂತ್ರಿಮಂಡಳದ ಅಭಿಪ್ರಾಯಗಳು ಅವನಿಗೆ ಯೋಗ್ಯವಾಗಿ ಕಾಣಲಿಲ್ಲ. ಆಗ ಅವನು ತನ್ನ ಮುಖ್ಯ ಸೇನಾಪತಿಯಾದ ವೀರಸೇನನ ಮುಖವನ್ನು ನೋಡಿದನು. ಕೂಡಲೆ ಸೇನಾಪತಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲಾರಂಭಿಸಿದನು.

"ಮಹಾರಾಜರೆ, ಮಾಳವ ರಾಷ್ಟ್ರವು ಮಂದಿಯ ಸಹಾಯವನ್ನು ಅಪೇಕ್ಷಿಸುವಷ್ಟು ಹೇಡಿಯಾಗಿಲ್ಲ. ಬೇಕಾದವರು ಸಹಾಯ ಮಾಡಲಿ, ಮಾಡದಿರಲಿ, ತೈಲಪ ದೇವನನ್ನು ಹಣ್ಣು ಮಾಡುವಷ್ಟು ಸಾಮರ್ಥ್ಯವು ಮಹಾರಾಜರಲ್ಲಿರುವದು. ತಿರುಗಿ ಕೇಳಿದರೆ, ನಾನು ನನ್ನ ಸೈನ್ಯದೊಡನೆ ಹೋಗಿ ಆ ಕನ್ನಡಿಗ ರಾಜನನ್ನು ಕೈಸೆರೆ ಹಿಡಿದುಕೊಂಡು ಬಂದೇನು. ತೈಲಪದೇವನು ನಾಮಾಂಕಿತ ಶೂರನೆಂದು ದೇಶದಲ್ಲೆಲ್ಲ ನಿರರ್ಥಕವಾಗಿ ಹುಯಿಲು ಎದ್ದಿರುವದು. ಹಿಂದಿನ ದಂಡಯಾತ್ರೆಯಲ್ಲಿ ನಮಗೆ ಅಪಜಯವುಂಟಾದಗಿದ್ದನ್ನೇ ಘನವೆಂದು ತಿಳಿದು, ಮಂತ್ರಿ ಪರಿವಾರದವರು ಅಡ್ಡ ಬರುತ್ತಿರುವರು. ಮಹಾರಾಜರೆ, ದಂಡಯಾತ್ರೆಗಾಗಿ ತಾವು ತೆರಳುವ ಕಾರಣವಿಲ್ಲ. ನಾನು ನನ್ನ ಸೈನ್ಯದೊಡನೆ ಹೋಗಿ ಆ ಕರ್ನಾಟಕ ರಾಜನನ್ನು ಕೈಸೆರೆ ಹಿಡಿದುಕೊಂಡು ಬರುವೆನು; ಅಜ್ಞೆ ದೊರೆಯಬೇಕು."

ಅನಂತರದಲ್ಲಿ ಎರಡನೆಯ ಸೇನಾಪತಿಯಾದ ಕೀರ್ತಿವರ್ಮನು ಆವೇಶದಿಂದ- "ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೆ? ತೈಲಪದೇವನನ್ನು ಕೈಸೆರೆ ಹಿಡಿದುಕೊಂಡು ಬರಲಿಕ್ಕೆ ಅಥವಾ ಕರ್ನಾಟಕವನ್ನು ಪಾದಾಕ್ರಾಂತಗೊಳಿಸಲಿಕ್ಕೆ ಇಡಿ ಉತ್ತರಾಪಥವೇ ಬೇಕಾಗಿಲ್ಲ. ಮಾಳವ ಸಾಮ್ರಾಜ್ಯವು ಎರಡನೆಯವರ ಸಹಾಯವನ್ನವಲಂಬಿಸಿಲ್ಲ. ತೈಲಪದೇವನನ್ನು ಪರಾಭವಗೊಳಿಸಲಿಕ್ಕೆ ನಮ್ಮ ಸೈನ್ಯವಷ್ಟೇ ಸಾಕಾಗಿರುವದು. ಮಂತ್ರಿ ಮಂಡಳವು ಧೂರ್ತತನವುಳ್ಳದ್ದೂ ರಾಜಕಾರಸ್ಥಾನದಲ್ಲಿ ನೈಪುಣ್ಯವನ್ನು ಪಡೆದದ್ದೂ ಆಗಿದ್ದರೂ, ಈ ವಿಷಯದಲ್ಲಿ ಮಾತ್ರ ಅವರ ಬುದ್ಧಿವಂತಿಕೆಯು ನಿರುಪಯುಕ್ತವಾಯಿತೆಂದೆನ್ನಲಿಕ್ಕೆ ಅಡ್ಡಿಯಿಲ್ಲ ಮಾಳವ ಸೇನಾಸಾಮರ್ಥ್ಯವು ಮಂತ್ರಿ ಮಂಡಳಕ್ಕೆ ತಿಳಿದಿಲ್ಲವೆಂದು ನಿರ್ವಿವಾದವಾಗಿ ಹೇಳಬಹುದು. ಮಹಾರಾಜರು ದಂಡಯಾತ್ರೆಗಾಗಿ ತೆರಳುವದಕ್ಕೆ ನನ್ನ ಪೂರ್ಣ ಅನುಮೋದನವಿರುತ್ತದೆ."

ಸೇನಾಪತಿಗಳ ಅಭಿಪ್ರಾಯವು ಮಂತ್ರಿಮಂಡಳದ ಮನಸ್ಸಿಗೆ ಸರಿದೋರಲಿಲ್ಲ. ಆಗ ರುದ್ರಾದಿತ್ಯನು:—"ಮಹಾರಾಜರೇ, ಮಾಳವರಾಷ್ಟ್ರದ ಹಾಗು ತಮ್ಮ ಗೌರವವನ್ನು ಕಳೆಯಬೇಕೆಂದು ನಾವು ಇಚ್ಛಿಸುವೆವೇ ಹೇಗೆ? ಸೇನಾಪತಿಗಳು ರಾಜಕಾರಣನಿಪುಣರೆಂದು ನಿಮ್ಮ ತಿಳುವಳಿಕೆಯಿದ್ದರೆ ನಿಮ್ಮ ಮನಸ್ಸಿಗೆ ಬಂದಂತೆ ನಡೆಯಿರಿ. ಸದ್ಯದ ಸ್ಥಿತಿಯಲ್ಲಿ ತೈಲಪದೇವನೊಡನೆ ಕಾಳಗವನ್ನು ಪ್ರಾರಂಭಿಸುವದು ಹಿತಾವಹವಲ್ಲವೆಂದು ನನ್ನ ಅಲ್ಪ ಮತಿಗೆ ತೋರುತ್ತದೆ.

ಕರ್ನಾಟಕವು ದೊಡ್ಡ ಸಾಮ್ರಾಜ್ಯವಿರುವದು; ತೈಲಪದೇವನು ದೊಡ್ಡ ಸಮ್ರಾಟ ನಿರುವನು. ಅವನ ಅಜಿಂಕ್ಯವಾದ ಪಡೆಯು ಬಹಳೇ ದೊಡ್ಡದಿರುವದು. ಈ ಬಗೆಯು ಪರಿಸ್ಥಿತಿಯಿರುವಾಗ ತಾವು ಕರ್ನಾಟಕದ ಮೇಲೆ ದಂಡಯಾತ್ರೆಗಾಗಿ ತೆರಳುವದು ಯೋಗ್ಯವೆನಿಸಲಾರದು."

"ಕಾಕಾಸಾಹೇಬ, ಮಾಳವರಾಷ್ಟ್ರವು ಕರ್ನಾಟಕವನ್ನು ಸರಿಗಟ್ಟಲಾರದೆಂದು ನೀವು ಅನ್ನುವಿರಲ್ಲವೆ?"

"ಸದ್ಯಕ್ಕೆ ನನ್ನ ಬುದ್ಧಿಗೆ ಹಾಗೆ ತೋರುವದು. ಮಹಾರಾಜರೆ, ಇನ್ನೂ ಸೈನ್ಯವನ್ನು ಕೂಡಿಸಿರಿ. ಮಂಡಲೇಶ್ವರರ ಸಹಾನುಭೂತಿಯನ್ನು ಪಡೆಯಿರಿ. ಕರ್ನಾಟಕದಲ್ಲಿ ಒಡಕು ಹುಟ್ಟಿಸುವದಕ್ಕಾಗಿ ಪ್ರಯತ್ನಿಸಿರಿ. ಮಹಾರಾಜರು ಯೋಗ್ಯ ವಾದ ರೀತಿಯಿಂದ ಸಾಹಸ ಮಾಡಿದರೆ ಸ್ವರ್ಗದ ಮೇಲೆ ದಾಳಿಮಾಡಬಹುದು. ಯಾವದೊಂದು ಮಾತಿಗಾಗಿ ಧುಡುಂಪ್ರವೇಶ ಮಾಡಬಾರದೆಂದು ನನ್ನ ಅಭಿ ಪ್ರಾಯವಿರುವದಲ್ಲದೆ, ಶೂರರ ಮನಸ್ಸನ್ನು ಔದಾಸೀನ್ಯಗೊಳಿಸಬೇಕೆಂದು ನಾನು ಯತ್ನಿಸಿಲ್ಲ."

ಕಾಕಾಸಾಹೇಬ, "ನೀವು ನಮ್ಮ ಮನಸ್ಸನ್ನು ನೋಯಿಸುವದಕ್ಕಾಗಿ ಯಾಗಲಿ, ಉದಾಸೀನಗೊಳಿಸುವದಕ್ಕಾಗಿಯಾಗಲಿ ಹೀಗೆ ಮಾತನಾಡುವಿರೆಂದು ನಾನು ತಿಳಿದಿಲ್ಲ. ಮೊದಲಿನ ಜನರಾದ ನೀವು ಆಧುನಿಕ ಪದ್ಧತಿಯ ಸುಧಾರಣೆ ಯನ್ನು ತಿಳಿಯಲಾರಿರಿ. ಕರ್ತವ್ಯನಿಷ್ಠೆಯಿಂದ ಹೋರಾಡಿದರೆ ಮಾಳವ ರಾಷ್ಟ್ರಕ್ಕೆ ಕರ್ನಾಟಕವು ಎಂದೂ ಈಡಾಗಲಾರದು. 'ವಿನಾಶಕಾಲೇ ವಿಪರೀತಬುದ್ಧಿ' ಎಂಬಂತೆ ತೈಲಪದೇವನ ಸ್ಥಿತಿಯಾಗಿರುವದು. ನನ್ನಂತಹ ಪಿಕ್ರಮಾರ್ಜಿತ ಸತ್ವ ಶಾಲಿಯ ಬೇಡಿಕೆಯನ್ನುಪೇಕ್ಷಿಸಿದ ತೈಲಪದೇವನು ನಿಜವಾಗಿ ಅದೂರದರ್ಶಿಯು. ಮೈಯಲ್ಲಿ ಸಾಮರ್ಥ್ಯವಿದ್ದರೆ ರಾಜಕುಮಾರಿಯನ್ನು ವಶಪಡಿಸಿಕೊಂಡು ಹೋಗ ಬಹುದೆಂದು ಅವನು ಸಂದೇಶ ಕಳುಹಿಸಿರುವನು. ಇಂತಹ ಮಾನಹಾನಿಕಾರಕ ಸಂಗತಿಗಳನ್ನು ಮರೆತು ಮನೆ ಹಿಡಿದು ಕುಳಿತುಕೊಂಡರೆ, ಮಾಳವ ಸಾಮ್ರಾಜ್ಯದ ಬೆಲೆಯು ಕಟ್ಟಿಯೋಗುವದು. ವಿನಾವಧಿ ಮಾಡದೆ ಕರ್ನಾಟಕದ ಮೇಲೆ ದಂಡೆತ್ತಿ ಹೋಗುವದು ನಮ್ಮ ಆವ್ಯಕರ್ತವ್ಯವಾಗಿರುವದು. ಕಾಕಾಸಾಹೇಬರೇ, ಶಕ್ತಿಯು ಕ್ಷೀಣವಾದಂತೆ ನಿಮ್ಮ ಉತ್ಸಾಹವು ಕುಗ್ಗತೊಡಗಿರುವದು. ವಯೋ ಧರ್ಮದ ಮುಂದೆ ಯಾರ ಆಟವೂ ನಡೆಯುವದಿಲ್ಲ. ನೀವು ನಿಮ್ಮ ವಯೋ ಮಾನಕ್ಕನುಗುಣವಾಗಿ ಅಂಜುಬುರುಕತನದ ಮತವನ್ನು ಪ್ರದರ್ಶಿಸತೊಡಗಿರುವಿ ರೆಂಬದು ನನಗೆ ತಿಳಿದಿದೆ. ನೀವು ಅನುಚಿತವಾದ ಅಭಿಪ್ರಾಯವನ್ನಿತ್ತಿರೆಂದು ನಾನು ಕ್ಷೋಭೆಗೊಂಡಿಲ್ಲ. ಧನಪಾಲ, ಧನಿಕ, ಭಟ್ಟಹಲಾಯುಧ ಮೊದಲಾದ ಮಂತ್ರಿ ಗಳು ಮಹಾಮಂತ್ರಿಗಳಾದ ನಿಮ್ಮ ಬೆನ್ನು ಹತ್ತಿದ್ದನ್ನು ನೋಡಿ ನನಗೆ ವಿಸ್ಮಯ ವೆನಿಸಿತು ಅವರು ಸೇನಾಪತಿಗಳಂತೆ ನಿಸ್ಪೃಹ ವೃತ್ತಿಯಿಂದ ತಮ್ಮ ಮತವನ್ನು

ವ್ಯಕ್ತಪಡಿಸಬೇಕಾಗಿತ್ತು. ವೀರಸೇನ ಕೀರ್ತಿವರ್ಮ ಸೇನಾಪತಿಗಳ ಯುದ್ಧೋತ್ಸಾಹವು ಅವರ್ಣನೀಯವಿರುವದು. ಸ್ವಲ್ಪ ದಿನಗಳಲ್ಲಿ ಚೆನ್ನಾಗಿ ಸಂಗ್ರಾಮಸಿದ್ಧತೆ ಮಾಡಿಕೊಂಡು ದಕ್ಷಿಣ ದಂಡಯಾತ್ರೆಗೆ ತೆರಳುವದನ್ನು ನಾನು ನಿರ್ಧರಿಸಿರುವೆನು."

ಮುಂಜರಾಜನು ಹಟಹಿಡಿದದ್ದನ್ನು ನೋಡಿ ರುದ್ರಾದಿತ್ಯ ಮೊದಲಾದ ಮಂತ್ರಿಗಳಿಗೆ ಬಹಳೇ ವಿಷಾದವಾಯಿತು. ಅವರು ಮೋರೆ ಸಪ್ಪಗೆ ಮಾಡಿಕೊಂಡು ಕುಳಿತರು. ಅನಂತರದಲ್ಲಿ ಮುಂಜರಾಜನು ಸೇನಾಸಿದ್ಧತೆ ಮಾಡಿಕೊಳ್ಳುವದಕ್ಕಾಗಿ ಸೇನಾಪತಿಗಳಿಗೆ ಆಜ್ಞೆಮಾಡಿ ಸಭೆಯ ವಿಸರ್ಜನೆ ಮಾಡಿದನು.

ತಮ್ಮ ಅರಸನು ಕರ್ನಾಟಕದ ಮೇಲೆ ದಾಳಿ ಮಾಡುವನೆಂಬ ಸಂಗತಿಯನ್ನು ಕೇಳಿ ಧಾರಾನಗರಿಯ ನಾಗರಿಕರು ಭಯಭೀತರಾದರು. ಸಭೆಯಲ್ಲಿ ರುದ್ರಾದಿತ್ಯನು ಮುಂಜನಿಗೆ ಮಾಡಿದ ಉಪದೇಶದ ವಾರ್ತೆಯನ್ನು ಕೇಳಿದ ಮೇಲಂತು ಅವರು ತಮ್ಮ ಅರಸನ ಹೆಡ್ಡತನವನ್ನು ಯಥೇಷ್ಟವಾಗಿ ಹಳಿದರು. ಕಾಳಗದ ಕೋಲಾಹಲವೇಳುವದೆಂದು ಧಾರಾನಗರಿಯ ನಾಗರಿಕರೆಲ್ಲರು ಭಯಗೊಂಡಿದರು. ಭವಿತವ್ಯವನ್ನು ತಪ್ಪಿಸುವರಾರು?

---

## ಗೋದಾವರಿಯ ಕಾಳಗ.

ಮುಂಜರಾಜನು ಮಹಾಮಂತ್ರಿಯಾದ ರುದ್ರಾದಿತ್ಯನ ಮಾತುಗಳನ್ನು ಪೇಕ್ಷಿಸಿ ಹೇರಳವಾದ ಸೈನ್ಯದೊಡನೆ ದಕ್ಷಿಣ ದಿಗ್ವಿಜಯಕ್ಕಾಗಿ ಹೊರಟನು. ದಂಡಯಾತ್ರೆಗೆ ಹೊರಟರೂ ವಿಂಧ್ಯಾಚಲದ ದಕ್ಷಿಣಕ್ಕೆ ಹೋಗಬಾರದೆಂದು ರುದ್ರಾದಿತ್ಯನು ಮುಂಜರಾಜನಿಗೆ ಬಹು ಪರಿಯಾಗಿ ಬೇಡಿಕೊಂಡನು. ಕರ್ನಾಟಕದ ಸಾರ್ವಭೌಮನೊಡನೆ ಯುದ್ಧಕ್ಕೆ ಹೊರಟು, ವಿಂಧ್ಯಗಿರಿಯ ದಕ್ಷಿಣಕ್ಕೆ ಹೋಗದಿದ್ದರೆ ಯಾವ ಪುರುಷಾರ್ಥ ಸಾಧಿಸಿದಂತಾಯಿತೆಂದು ಮುಂಜರಾಜನು ಮಹಾಮಂತ್ರಿಗೆ ಉತ್ತರವಿತ್ತು, ಗೋದಾವರೀತೀರದ ವರೆಗೆ ದಂಡೆತ್ತಿ ಬಂದನು. ತೈಲಪದೇವನು ತನ್ನ ಸೈನ್ಯಕ್ಕೆ ಎದುರಾಗಿ ಹೊರಟ ಸಂಗತಿಯು ಗುಪ್ತಚರರ ಮುಖಾಂತರವಾಗಿ ಮುಂಜರಾಜನಿಗೆ ತಿಳಿದಿತ್ತು. ಗೋದಾವರಿಯ ವರೆಗೆ ಬಂದರೂ ತೈಲಪದೇವನೂ ಕರ್ನಾಟಕ ಸಾಮ್ರಾಜ್ಯದೊಳಗಿನ ಮಂಡಲೇಶ್ವರರೂ ತನಗೆ ಅಡ್ಡಿಮಾಡದ್ದನ್ನು ನೋಡಿ, ಅವರು ಮಾಳವ ಸೇನಾಸಾಗರಕ್ಕೆ ಅಂಜಿಕೊಂಡಿರುವರೆಂದು ಮುಂಜರಾಜನ ಗ್ರಹಿಕೆಯಾಗಿತ್ತು. ಎದುರಾಗಲಿಕ್ಕೆ ಹೊರಟ ತೈಲಪದೇವನು ತನ್ನ ಭೀತಿಯಿಂದ ಎಲ್ಲಿಯೋ ಮಾಯವಾಗಿ ಹೋದನೆಂದು ಅವನು ಭಾವಿಸಿದನು. ಕರ್ನಾಟಕದೊಳಗಿನ ಮಂಡಲೇಶ್ವರರನ್ನು ಭೇದೋಪಾಯದಿಂದ ಒಡೆಯಿಸಿಕೊಳ್ಳುವ ಕಾರಸ್ಥಾನವನ್ನು ಮಹಾಮಂತ್ರಿಯಾದ ರುದ್ರಾದಿತ್ಯನು ನಡೆಯಿಸಿದ್ದನು. ಅವನ ಪ್ರಯತ್ನಕ್ಕೆ ಯಶಸ್ಸು ದೊರೆತು, ಕೆಲವು ಮಂಡಲೇಶ್ವರರು ಅಂತರಂಗದಿಂದ

ತನ್ನ ಪಕ್ಷವನ್ನು ವಹಿಸಿರಬಹುದೆಂದು ಅವನು ದೃಢವಾಗಿ ನಂಬಿದನು. ಮಾಂಡಲಿಕರೆಲ್ಲರು ತಟಸ್ಥವೃತ್ತಿಯನ್ನು ಧರಿಸಿದ್ದರಿಂದಲೆ ತೈಲಪದೇವನು ಅಂಜಿಕೊಂಡು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋಗಿರಬಹುದೆಂದು ಮುಂಜರಾಜನ ಕಲ್ಪನೆಯಾಯಿತು. ಆಗ ಅವನು ಪರಮ ಸಂಭ್ರಮಗೊಂಡು ತನ್ನ ಸೈನ್ಯವನ್ನು ಒಳ್ಳೆಯ ರಭಸದಿಂದ ಸಾಗಿಸಿ ಗೋದಾವರೀ ತೀರಕ್ಕೆ ಬಂದು, ಪೈಠಣದ ಬಳಿಯಲ್ಲಿ ಬೀಡುಬಿಟ್ಟನು.

ತೈಲಪದೇವನಂತಹ ಬಲಾಢ್ಯ ಸಾರ್ವಭೌಮನೊಡನೆ ಕಾದಬಂದ ಮುಂಜರಾಜನ ಕೆಚ್ಚೆದೆಯು ಅವರ್ಣನೀಯವಾದದ್ದು; ಅವನ ಸೇನಾಪತಿಗಳಾದ ವೀರಸೇನ ಕೀರ್ತಿವರ್ಮರ ರಣೋತ್ಸಾಹವು ಅನುಪಮವಾದದ್ದು. ಧಾರಾನಗರಿಯಿಂದ ಹೊರಟು ವಿಂಧ್ಯಾಚಲವನ್ನು ದಾಟಿ, ಕರ್ನಾಟಕ ಸಾಮ್ರಾಜ್ಯದೊಳಗಿನ ಮಾಂಡಲಿಕರ ರಾಜ್ಯದೊಳಗಿಂದ ಹಾಯ್ದು ಗೋದಾವರಿ ತೀರದಲ್ಲಿ ಹಾಳ್ಯವನ್ನು ತರುವ ಕಾರ್ಯವೇನು ಸಣ್ಣಪುಟ್ಟದಲ್ಲ. ಮುಂಜರಾಜನು ಗಟ್ಟಿಗನಿದ್ದುದರಿಂದ ಗೋದಾವರಿಯನ್ನು ದಾಟಿ ಮಾನ್ಯಖೇಟವನ್ನು ಮುತ್ತುವ ಸಾಹಸ ಕಾರ್ಯವನ್ನು ಕೈಕೊಂಡಿದ್ದನು. ತೈಲಪದೇವನ ಕಾರಸ್ಥಾನಗಳು ಅವನ ಧೈರ್ಯವನ್ನು ದ್ವಿಗುಣಿತಗೊಳಿಸತೊಡಗಿದ್ದವು. ಕರ್ನಾಟಕದ ಗುಪ್ತಚರಾಧಿಕಾರಿಯಾದ ದುರ್ಗಾನಾಥನು ತನ್ನ ನುರಿತ ಗುಪ್ತಚರರ ಜಾಳಿಗೆಯನ್ನು ನಾಲ್ಕೂ ಕಡೆಗೆ ಪಸರಿಸಿದ್ದನು. ಅವರು ಅನೇಕ ಬಗೆಯ ಸುಳ್ಳು ಸುದ್ದಿಗಳನ್ನು ಬೀರತೊಡಗಿದ್ದರು. ಯಾದವ ಭಿಲ್ಲಮನು ತೈಲಪದೇವನಿಂದ ಒಡೆಯುವ ಪ್ರಯತ್ನದಲ್ಲಿರುವನೆಂದೂ, ಅರಿಕೇಸರಿ ಶಾಂತಿವರ್ಮ ಮೊದಲಾದ ಪ್ರಮುಖ ಸಾಮಂತರು ತಟಸ್ಥವೃತ್ತಿಯನ್ನವಲಂಭಿಸಿರುವರೆಂದೂ, ಕೊಲ್ಹಾಪುರದ ಶಿಲಾಹಾರ ಮನೆತನದ ಸಂಗ್ರಾಮಜಿತನೂ, ಉತ್ತರ ಕೊಂಕಣದ ಶಿಲಾಹಾರ ಮನೆತನದ ಅಪರಾಜಿತನೂ ತೈಲಪದೇವನ ವಿರುದ್ಧನಾಗಿ ಯುದ್ಧಮಾಡಲುದ್ಯುಕ್ತರಾಗಿರುವರೆಂದೂ, ಕರ್ಣೋಪಕರ್ಣವಾದ ಸುದ್ದಿಗಳು ಮುಂಜರಾಜನ ಕಿವಿಯ ಮೇಲೆ ಬೀಳತೊಡಗಿದ್ದವು. ಈ ಬಗೆಯ ವಾರ್ತೆಗಳು ಹಬ್ಬುತ್ತ ನಡೆದಂತೆ ಮುಂಜರಾಜನ ಆವೇಶದ ಕ್ಷೇತ್ರವಾದರೂ ವಿಸ್ತಾರವಾಗುತ್ತ ನಡೆದಿತ್ತು. ಹಿಂದೆ ಮಾನ್ಯಖೇಟವನ್ನು ಸುಲಿದಂತೆ ಈ ಸಾರೆಯಾದರೂ ಸುಲಿದುಕೊಂಡು, ಅಲ್ಲಿಯ ಚಾಲುಕ್ಯ ಸಿಂಹಾಸನವನ್ನು ನಾಶಗೊಳಿಸಬೇಕೆಂಬ ಮಹತ್ವಾಕಾಂಕ್ಷೆಯು ಅವನಲ್ಲಿ ಕ್ಷಣಕ್ಷಣಕ್ಕೆ ಹೆಚ್ಚಾಗತೊಡಗಿತ್ತು. ಅವನು ತೈಲಪದೇವನನ್ನು ನಾಶಗೊಳಿಸಿ, ವಿಜಯ ವೈಭವದಿಂದ ಕರ್ನಾಟಕದ ರಾಜಧಾನಿಯನ್ನು ಪ್ರವೇಶಿಸಬೇಕೆಂದು ಉತ್ಕಂಠಿತನಾಗಿದ್ದನು; ಆದರೆ ಯುದ್ಧಕ್ಕಾಗಿ ಹೊರಟ ತೈಲಪದೇವನ ಸಪ್ಪಳ ಇದ್ದಿಲ್ಲ. ಕೆಲವು ದಿನಗಳ ವರೆಗೆ ಶೋಧಿಸಿದ ಮೇಲೆ ಅವನು ನಳದುರ್ಗದ ಬಳಿಯಲ್ಲಿ ಪಾಳಯ ಹಾಕಿಕೊಂಡಿರುವನೆಂತಲೂ, ಬೇಗನೆ ತನಗೆ ಎದುರಾಗುವದಕ್ಕಾಗಿ ಹೊರಡತಕ್ಕವನಿರುವನೆಂತಲೂ ಮುಂಜರಾಜನಿಗೆ ಸುಳ್ಳುಹತ್ತಿತು. ಕೂಡಲೆ ವಿಕ್ರಮಶಾಲಿಯಾದ ಮುಂಜರಾಜನ

ಬಾಹುಗಳು ಸ್ಫುರಣ ಹೊಂದಲಾರಂಭಿಸಿದವು. ಅವನು ತನ್ನ ವೈರಿಯ ಆಗಮನ ವನ್ನು ನಿರೀಕ್ಷಿಸುತ್ತ ಪೈಠಣದ ಬಳಿಯಲ್ಲಿಯೆ ನಿಂತುಕೊಂಡನು.

ಮುಂಜರಾಜನಿಗೆ ಎದುರಾಗುವದಕ್ಕಾಗಿ ಹವಣಿಸುತ್ತಿದ್ದ ತೈಲಪದೇವನು ನಳದುರ್ಗದ ಬಳಿಯಲ್ಲಿ ಬೀಡು ಬಿಟ್ಟಿದ್ದನು. ಶತ್ರುವು ಕರ್ನಾಟಕದ ದಂಡಯಾತ್ರೆ ಗೋಸ್ಕರ ದೊಡ್ಡ ದಂಡನ್ನು ಕಟ್ಟಿಕೊಂಡು, ಎಲ್ಲ ಯುದ್ಧಸಾಮಗ್ರಿಗಳನ್ನು ಸಂಗ್ರ ಹಿಸಿಕೊಂಡು ಉಬ್ಬಿನಿಂದ ತನ್ನ ರಾಜಧಾನಿಯನ್ನು ಬಿಟ್ಟು, ನೇಮಾಡದ ಹತ್ತರ ನರ್ಮದೆಯನ್ನೂ, ಭುಸಾವಳವದ ನೆರೆಯಲ್ಲಿ ತಾಪಿ ನದಿಯನ್ನೂ ದಾಟಿ, ಬುಲಢಾ ಣಾದಲ್ಲಿ ಪಾಳಯ ಹಾಕಿಕೊಂಡಿರುವನೆಂಬ ಸುದ್ದಿಯು ತೈಲಪದೇವನಿಗೆ ತಿಳಿಯಿತು. ಕೂಡಲೆ ಅವನು ಭಿಲ್ಲಮದೇವನನ್ನು ಕೂಡಿಕೊಂಡು ನಳದುರ್ಗವನ್ನು ಬಿಟ್ಟು, ಬುಲಢಾಣಾದ ಅಭಿಮುಖವಾಗಿ ಹೊರಟನು ಅಷ್ಟರಲ್ಲಿ ಮುಂಜರಾಜನು ಗೋದಾ ವರಿಯ ತೀರದಲ್ಲಿ ಪೈಠಣದ ಹತ್ತರ ಬಂದಿರುವನೆಂಬ ವಾರ್ತೆಯು ತೈಲಪದೇವನಿಗೆ ತಿಳಿಯಿತು. ಆಗ ಅವನು ತನ್ನ ಸೈನ್ಯವನ್ನು ಗೋದಾವರಿಯ ದಕ್ಷಿಣತೀರದಲ್ಲಿ ಒಯ್ದನು. ಗೋದಾವರಿಯ ಉತ್ತರತೀರದಲ್ಲಿ ಮುಂಜರಾಜನೂ ದಕ್ಷಿಣತೀರದಲ್ಲಿ ತೈಲಪದೇವನೂ ಪಾಳಯ ಹಾಕಿಕೊಂಡು ಕುಳಿತರು ಎರಡೂ ಪಕ್ಷದ ಗುಪ್ತ ಚಾರರು ಮಾಳವೆಯರ ಸುದ್ದಿಯನ್ನು ಚಾಲುಕ್ಯರಿಗೂ ಚಾಲುಕ್ಯರ ಸುದ್ದಿಯನ್ನು ಮಾಳವೆಯರಿಗೂ ಎಡೆಬಿಡದೆ ತರಲಾರಂಭಿಸಿದರು. ತೈಲಪನು ಚತುರ ದೊರೆಯಾಯಿ ಯಾಗಿದ್ದನು. ಅವನು ಗೋದಾವರಿಯನ್ನು ದಾಟಿ ಶತ್ರುಗಳ ಮೇಲೆ ಬೀಳಬೇ ಕೆಂಬ ಹವ್ಯಾಸಕ್ಕೆ ಹೋಗಲಿಲ್ಲ. ಅವನು ಹಗೆಗಳ ಆಗಮನವನ್ನು ನಿರೀಕ್ಷಿಸುತ್ತ ಕುಳಿತುಕೊಂಡನು. ಮುಂಜನು ಮಾತ್ರ ಉಲಕೋಚನಾಗಿದ್ದನು. ಹಗೆಗಳನ್ನು ಎದುರು ನೋಡುತ್ತ ಸುಮ್ಮನೆ ಕುಳಿತುಕೊಳ್ಳುವದು ಅವನಿಗೆ ಸರಿಯಾಗಿ ತೋರ ಲಿಲ್ಲ. ಗೋದಾವರಿಯನ್ನು ದಾಟಿ ಕಾಳಗವನ್ನು ಪ್ರಾರಂಭಿಸಬೇಕೆಂದು ಅವನು ನಿರ್ಧರಿಸಿಕೊಂಡನು. ಅವನ ಈ ಹವಣಿಕೆಯು ಅವನ ಮುಖ್ಯಮಂತ್ರಿಯಾದ ರುದ್ರಾದಿತ್ಯನಿಗೆ ತಿಳಿಯಿತು. ವಿಂಧ್ಯಾದ್ರಿಯನ್ನು ದಾಟಿದ್ದು ಅನುಚಿತವಾಗಿರುವ ದೆಂದೂ, ಗೋದಾವರಿಯನ್ನು ದಾಟಿ ದಕ್ಷಿಣಕ್ಕೆ ತೆರಳುವದು ತೀರ ಅನಿಷ್ಟಕಾರಕ ವಾಗಿರುವದೆಂದೂ ಅವನು ಮುಂಜರಾಜನಿಗೆ ತಿಳಿಸಿದನು ರಾಜಧಾನಿಯಲ್ಲಿ ಕುಳಿತುಕೊಂಡು ಹಿಂದೆಮುಂದಿನ ವಿಚಾರ ಮಾಡದೆ ಮಂತ್ರಿಯು ಸಂದೇಶ ಕಳಿ ಸಿದ್ದನ್ನು ನೋಡಿ ಮುಂಜರಾಜನು ನಸುನಕ್ಕನು ಮಂತ್ರಿಯು ವಯೋಮಾನ ಕ್ಕನುಗುಣವಾಗಿ ಸಂಗ್ರಾಮಭೀರುವಾಗಿರುವನೆಂದು ಅವನು ತಿಳಿದುಕೊಂಡನು. ಕೂಡಲೆ ಅವನು ಗೋದಾವರಿಯನ್ನು ದಾಟುವದಕ್ಕಾಗಿ ತನ್ನ ದಂಡಿಗೆ ಕಟ್ಟಪ್ಪಣೆ ಮಾಡಿದನು.

ಮಾಳವೇಯರ ಸೈನ್ಯವು ಗೋದಾವರಿಯನ್ನು ದಾಟಲುಪಕ್ರಮಿಸಿದೊಡ ನೆಯೆ ಕನ್ನಡಿಗರು ಅವರ ಮೇಲೆ ಬಾಣಗಳ ಸುರಿಮಳೆಯನ್ನು ಪ್ರಾರಂಭಿಸಿದರು.

ವೀರ ಕನ್ನಡಿಗರ ಹೊಡತಕ್ಕೆ ಮಾಳವಸೈನ್ಯವು ಕಂಗಾಲವಾಗಹತ್ತಿತು. ಬಾಣಗಳ ಪೆಟ್ಟಿನಿಂದ ಎಷ್ಟೋ ಜನರು ನೌಕೆಯಲ್ಲಿಯೂ ಎಷ್ಟೋ ಜನರು ನದಿಯಲ್ಲಿಯೂ ಬಿದ್ದು ಮರಣ ಹೊಂದಿದರು. ಮುಂಜರಾಜನ ಸೈನ್ಯದಲ್ಲಿ ಹೊಸ ಜನರೇ ಬಹಳವಾಗಿದ್ದರು. ಅವರಿಗೆ ನಿಜವಾದ ಯುದ್ಧಕಲೆಯ ಗಂಧವಾರ್ತೆಯೇ ಇದ್ದಿಲ್ಲ. ಮುಂಜರಾಜನ ಉತ್ಸಾಹಜನಕ ಭಾಷಣದಿಂದ ಹುರುಪುಗೊಂಡು ಆ ಜನರು ಮುಂದೆ ಹೆಜ್ಜೆಯಿಟ್ಟಿದ್ದರು. ರಣಕ್ಕಂಜಿ ಯಾರು ಹಿಂದಿರುಗುವರೋ ಅವರ ಕೊಲೆ ಮಾಡಿಸುವೆನೆಂದು ಮುಂಜರಾಜನು ತನ್ನ ಸೈನಿಕರಿಗೆ ಕಟ್ಟಪ್ಪಣೆ ಮಾಡಿದ್ದನು. ಮುಂದೆ ಹೋದರೂ ಸಾವು, ಹಿಂದಿರುಗಿದರೂ ಸಾವು. ಇವೆರಡರಲ್ಲಿ ಯಾವ ಬಗೆಯ ಸಾವು ಮೇಲೆಂಬದನ್ನು ತಮ್ಮ ಬುದ್ಧಿಶಕ್ತಿಯಿಂದ ನಿರ್ಣಯಿಸಿಕೊಂಡು, ಮಾಳವ ಸೈನಿಕರು ಮುಂದೆ ಹೋಗುವದನ್ನೇ ನಿರ್ಧರಿಸಿಕೊಂಡರು. ಜೀವದ ಹಂಗುದೊರೆದು ನದಿಯನ್ನು ದಾಟತೊಡಗಿದ ಮಾಳವಸೇನೆಯವರನ್ನು ಕನ್ನಡಿಗರು ಎಷ್ಟು ಬಗೆಯಿಂದ ತಡೆದರೂ, ಅವರು ಶತ್ರುಗಳ ಹೊಡತವನ್ನು ಲೆಕ್ಕಿಸದೆ ನದಿಯನ್ನು ದಾಟಿದರು. ಇನ್ನು ಮೇಲೆ ಎರಡೂ ಸೈನ್ಯಗಳ ನಡುವೆ ಯುದ್ಧವು ಪ್ರಾರಂಭವಾಗತಕ್ಕದ್ದಿತ್ತು. ಅಷ್ಟರಲ್ಲಿ ತೈಲಪದೇವನು ತನ್ನ ಸೈನ್ಯವನ್ನು ರಭಸದಿಂದ ಹಿಂದೆ ತೆಗೆದುಕೊಂಡನು. ಕನ್ನಡಿಗರು ಹೆದರಿ ಓಡತೊಡಗಿರುವರೆಂದು ಮುಂಜರಾಜನು ತಿಳಿದನು. ಆಗ ಅವನು ಪಲಾಯನ ಮಾಡಹತ್ತಿದ ಸೈನ್ಯವನ್ನು ಬೆನ್ನಟ್ಟುವದಕ್ಕಾಗಿ ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಆಗ ವೀರಸೇನ ಸೇನಾಪತಿಯು ಅವನ ಬಳಿಗೆ ಬಂದು, ನದಿಯನ್ನು ದಾಟುವಾಗ ತಮ್ಮ ಸೈನ್ಯವು ಬಹಳ ದಣಿದಿರುವದರಿಂದ ಸ್ವಲ್ಪ ವಿಶ್ರಾಂತಿಯನ್ನು ಪಡೆದು, ಶತ್ರುಗಳನ್ನು ಬೆನ್ನಟ್ಟುವದು ಹಿತಕರವೆಂದು ಹೇಳಿದನು. ಸೇನಾಪತಿಯ ಮಾತುಗಳು ಮುಂಜರಾಜನಿಗೆ ಯಥಾರ್ಥವಾಗಿ ಕಾಣಲಿಲ್ಲ. ಆಗ ಅವನು ತೈಲಪದೇವನ ಕಡೆಗೆ ವಿಲಕ್ಷಣವಾದ ಸಂದೇಶವನ್ನು ಕಳುಹಿಸಿದನು. ರಣಕ್ಕಂಜಿ ಓಡುವವರನ್ನು ಬೆನ್ನಟ್ಟಿ ಹತ್ಯಾಕಾಂಡವನ್ನು ಪ್ರಾರಂಭಿಸುವದು ದಯಾಮಯನಾದ ತನ್ನ ಮನಸ್ಸಿಗೆ ಬರಲಿಲ್ಲವೆಂತಲೂ, ರಾಜಕುಮಾರಿಯನ್ನೂ ಹೇರಳವಾದ ಕಪ್ಪ ಕಾಣಿಕೆಯನ್ನೂ ಕೊಟ್ಟು, ತನ್ನ ಮಾಂಡಲಿಕನಾಗಿರಲಿಕ್ಕೆ ಒಪ್ಪಿಕೊಂಡರೆ ಅನುಗ್ರಹ ಮಾಡುವೆನೆಂತಲೂ ಅವನು ತೈಲಪದೇವನಿಗೆ ತಿಳಿಸಿದನು. ಈ ವಿಲಕ್ಷಣವಾದ ಸಂದೇಶದಿಂದ ತೈಲಪದೇವನು ನಸುನಕ್ಕನು. ಕರ್ನಾಟಕ ಸಾಮ್ರಾಜ್ಯವನ್ನು ಆಕ್ರಮಿಸಿ ತೀವ್ರವಾಗಿ ಆಕ್ರಾಂತಗೊಳಿಸಿಯೆ ಹಿಂದಿರುಗುವೆನೆಂದು ಹೆಮ್ಮೆ ತೊಟ್ಟು ಬಂದ ಮುಂಜರಾಜನು ಈಗ ಅಲ್ಪಮಟ್ಟಿಗಾದರೂ ಮೆತ್ತಗಾಗಿರುವನೆಂದು ಅವನು ತಿಳಿದನು. ರಾಜಕುಮಾರಿಯೂ, ಕಪ್ಪಕಾಣಿಕೆಗಳೂ ಸಾರ್ವಭೌಮತ್ವವೂ ಬೊಗಸೆಯೊಡ್ಡಿ ಪ್ರಾರ್ಥಿಸುವದರಿಂದ ದೊರೆಯುವದಿಲ್ಲವೆಂತಲೂ, ಅವು ಕ್ಷಾತ್ರತೇಜದ ಪ್ರಭಾವದಿಂದ ಕೈಸೇರತಕ್ಕವುಗಳಾಗಿರುವವೆಂತಲೂ ತೈಲಪದೇವನು ಮುಂಜರಾಜನಿಗೆ ತಿಳಿಸಿದನು. ಅಪಮಾನಕಾರಕವಾದ ಈ ಸಂದೇಶದಿಂದ ರೇಗಿಗೆದ್ದು, ಅವನು

ಮುಂದೆ ಸಾಗಿರಬೇಕೆಂತಲೇ ತೈಲಪದೇವನ ತಂತ್ರವಿತ್ತು.

ಮುಂಜರಾಜನು ಮಹಾ ಮಾನವಂತನಾಗಿದ್ದನು. ಅವನು ಅಪಮಾನವನ್ನು ಎಂದೂ ಸಹಿಸುತ್ತಿರಲಿಲ್ಲ. ಅವನಿಗೆ ಸ್ವಪರಾಕ್ರಮದ ಉತ್ಕಟಾಭಿಮಾನವಿತ್ತು. ತೈಲಪದೇವನ ಸಂದೇಶವು ಮುಟ್ಟಿದ ಕೂಡಲೆ ಅವನು ಅತಿಯಾಗಿ ಸಂತಪ್ತನಾದನು. ಆಗ ಅವನು ತನ್ನ ಮುಖ್ಯ ಸೇನಾಪತಿಯಾದ ವೀರಸೇನನನ್ನು ಕರೆದು—"ತೈಲಪದೇವನು ಉನ್ಮತ್ತನಿರುವನು. ಅವನನ್ನು ರಣದೇವತೆಗೆ ಬಲಿಯಿತ್ತು, ಚಾಲುಕ್ಯಸಿಂಹಾಸನವನ್ನೂ ಚಾಲಕ್ಯ ರಾಜಕುಮಾರಿಯನ್ನೂ ಕೈವಶ ಮಾಡಿಕೊಳ್ಳಲಿಕ್ಕೆ ಬೇಕು. ಸೈನಿಕರಿಗೆ ಪ್ರೋತ್ಸಾಹನೆ ಕೊಡುತ್ತ ಒಳ್ಳೆಯ ಆವೇಶದಿಂದ ಕಾಳಗವನ್ನು ಪ್ರಾರಂಭಿಸಿರಿ ನಾವು ನಮ್ಮ ಕರ್ತವ್ಯದ ವಿಷಯಕ್ಕೆ ಔದಾಸೀನ್ಯ ತಳೆದರೆ 'ನಭೂತೋ ನ ಭವಿಷ್ಯತಿ' ದುಷ್ಪರಿಣಾಮ ಹೊಂದಬೇಕಾಗುವದೆಂಬದನ್ನು ಯಾರೂ ಮರೆಯುತಕ್ಕದ್ದಲ್ಲ. ಸೈನ್ಯವನ್ನು ಬೇಗನೆ ಸಜ್ಜುಗೊಳಿಸಿರಿ. ಶತ್ರುಸೇನೆಯು ನಮ್ಮಿಂದ ದೂರವಿಲ್ಲ ಲಬ್ಧಪ್ರತಿಷ್ಠರಾದ ಮಾಳವೆಯರಿಗೆ ಕನ್ನಡಿಗರು ಈಡಾಗಲಾರರೆಂಬ ಮಾತು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದ್ದರೂ, ಕರ್ತವ್ಯ ಜಾಗ್ರತೆಯುಳ್ಳವರಾಗಬೇಕೆಂದು ನಾನು ಎರಡು ಮಾತು ಹೇಳಿದೆನು."

"ಮಹಾರಾಜರೆ!" ವೀರಸೇನನು ಸ್ವಾಭಿಮಾನದಿಂದ—"ಕನ್ನಡಿಗರೆಂದರೆ ಎಷ್ಟರವರು? ಅವರೇನು ದೇವಕೋಟಿಯೊಳಗಿನವರಲ್ಲ. ಕನ್ನಡ ಸೈನ್ಯದಲ್ಲಿ ಕಾರ್ತಿಕೇಯನಂತಹ ವಿಕ್ರಮಶಾಲಿಗಳೂ ಇಲ್ಲ ಪಾರ್ಥನಂತಹ ಧನುರ್ಧಾರಿಗಳೂ ಇಲ್ಲ. ಪಾರ್ಥ-ಸಾರಥಿಯಂತಹ ಸಾರಥಿಗಳೂ ಭೀಷ್ಮ-ದ್ರೋಣ-ಕರ್ಣರಂತಹ ಮಹಾರಥಿಗಳೂ ತೈಲಪದೇವನ ಸೈನ್ಯದಲ್ಲಿರುವದಿಲ್ಲ. ನಾವು ಮನಸ್ಸಿನ ಮೇಲೆ ತೆಗೆದುಕೊಂಡರೆ ದಕ್ಷಿಣಾಪಥವನ್ನೆಲ್ಲ ಪಾದಾಕ್ರಾಂತಗೊಳಿಸಬಹುದು. ಮಹಾರಾಜರೆ, ತಮ್ಮ ಆಜ್ಞೆಯ ಮೇರೆಗೆ ಸೈನ್ಯವನ್ನು ಸಜ್ಜುಗೊಳಿಸುವೆನು."

ವೀರಸೇನ-ಕೀರ್ತಿವರ್ಮ ಸೇನಾಪತಿಗಳು ತಮ್ಮ ಸೈನ್ಯಗಳನ್ನು ಸಜ್ಜುಗೊಳಿಸಿ ತೈಲಪದೇವನ ಸೈನ್ಯದ ಮೇಲೆ ಸಾಗಿಸಿದರು. ಮುಂಜರಾಜನು ಸೈನ್ಯದ ಹಿಂಭಾಗದಲ್ಲಿ ಗಜಾರೋಹಿಯಾಗಿ ಸಾಗಿದ್ದನು. ಅವನು ತನ್ನ ಸೈನಿಕರಿಗೆ ಸ್ಫೂರ್ತಿದಾಯಕ ಉಪದೇಶ ಮಾಡತೊಡಗಿದ್ದನು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಅವನಿಗೆ ತೈಲಪದೇವನ ಶಿಬಿರವು ಕಾಣಹತ್ತಿತು. ಆಗ ಅವನು ಬಳಿಯಲ್ಲಿದ್ದ ವೀರಸೇನ-ಕೀರ್ತಿವರ್ಮರನ್ನು ಕುರಿತು:—"ಸೇನಾಪತಿಗಳೇ, ಅಲ್ಲಿ ನೋಡಿರಿ. ತೈಲಪದೇವನ ಸೈನ್ಯವು ಕಾಣುತ್ತಲಿರುವದು. ತೈಲಪದೇವನ ಸೈನ್ಯವು ಅಪರಿಮಿತವಿರುವದೆಂದು ರುದ್ರಾದಿತ್ಯರು ಸುಮ್ಮನೆನಮ್ಮನ್ನು ಅಂಜಿಸಿದ್ದರು. ನಮ್ಮ ಸೈನ್ಯವು ಅವನ ಸೈನ್ಯವನ್ನು ಒಂದೆರಡು ಗಳಿಗೆಗಳಲ್ಲಿ ನುಗ್ಗು ಮಾಡುವದು."

ನಿಜವಾಗಿ ವಿಚಾರಿಸಿದರೆ ಮುಂಜರಾಜನ ಸೈನ್ಯವು ಅಲ್ಪವಾಗಿತ್ತು. ಧೂರ್ತನಾದ ತೈಲಪದೇವನು ತನ್ನ ಸೈನ್ಯದ ಬಹು ದೊಡ್ಡ ಭಾಗವನ್ನು ಚಾವುಂಡರಾಯ

ಸೇನಾಪತಿಯ ಆಧಿಪತ್ಯದಲ್ಲಿ ಕೊಟ್ಟು ಮಾಳವ ಸೈನ್ಯದ ಹಿಂಭಾಗದಲ್ಲಿ ದಾಳಿ ಮಾಡಬೇಕೆಂದು ಅಪ್ಪಣೆ ಮಾಡಿದ್ದನು. ಮುಂಜರಾಜನಿಗೆ ಈ ತಂತ್ರವು ಹೇಗೆ ತಿಳಿಯಬೇಕು? ಕರ್ನಾಟಕದೊಳಗಿನ ಮಾಂಡಲಿಕ ರಾಜರು ತೈಲಪದೇವನಿಂದ ಒಡೆದು ಹೋಗಿರುವರೆಂಬ ವಾರ್ತೆಯನ್ನು ಅವನು ಕೇಳಿದ್ದನು. ಎದುರಿಗಿದ್ದ ಕನ್ನಡ ದಳವನ್ನು ನೋಡಿ, ಈ ಸುದ್ದಿಯು ನಿಜವೆಂದು ಮುಂಜರಾಜನ ಭಾವನೆಯಾಯಿತು. ಕೂಡಲೆ ಅವನ ವೀರಾವೇಶವು ದ್ವಿಗುಣಿತವಾಗಿ, ಒಳ್ಳೆಯ ರಭಸದಿಂದ ತನ್ನ ಸೈನ್ಯವನ್ನು ಸಾಗಿಸಿದನು.

ತೈಲಪದೇವನು ಶತ್ರುಸೈನ್ಯದ ಆಗಮನವನ್ನೇ ನಿರೀಕ್ಷಿಸುತ್ತಲಿದ್ದನು. ಆ ಸೈನ್ಯವು ಸಮೀಪಕ್ಕೆ ಬಂದಂತೆ ಅವನು ತನ್ನ ಸೈನ್ಯದ ಅರ್ಧಚಂದ್ರಾಕೃತಿ ವ್ಯೂಹವನ್ನು ರಚಿಸಿದನು. ಮಧ್ಯಭಾಗದ ಆಧಿಪತ್ಯವನ್ನು ತನ್ನ ಕೈಯಲ್ಲಿ ತಗೆದುಕೊಂಡು ಎಡಬಲಗಳಲ್ಲಿ ಭಿಲ್ಲಮ-ಅಂಬರನರಿಯರನ್ನು ನಿಲಿಸಿದನು. ಮುಂಜರಾಜನ ಸೈನ್ಯವು ಸಮೀಪಕ್ಕೆ ಬಂದಕೂಡಲೆ ತೈಲಪದೇವನು ತನ್ನ ಸೈನ್ಯವನ್ನು ಮುಂದೆ ಸಾಗಿಸಿದನು. ಎರಡೂ ಸೈನ್ಯಗಳ ನಡುವೆ ತುಮುಲವಾದ ಯುದ್ಧವು ಪ್ರಾರಂಭವಾಯಿತು. ಮುಂಜರಾಜನು ಒಳ್ಳೆಯ ವೀರಾವೇಶದಿಂದ ಕಾದತೊಡಗಿದ್ದನು. ಅವನ ಸೈನಿಕರು ಪರಾಕ್ರಮದ ಪರಾಕಾಷ್ಠೆಯನ್ನು ತೋರಿಸಹತ್ತಿದರು. ಬಾಣಗಳ ಸುರಿಮಳೆಯಿಂದ ಎರಡೂ ಬಣಗಳಲ್ಲಿಯ ಅಸಂಖ್ಯ ಜನರು ರಣಭೂಮಿಗೆ ಬಿದ್ದರು. ಹೆಣಗಳು ರಾಶಿರಾಶಿಯಾಗಿ ಬಿದ್ದವು. ರಣಭೂಮಿಯು ರಕ್ತಮಯವಾಗಿ ಭೀಷಣ ಸ್ವರೂಪವನ್ನು ಹೊಂದಿತು. ವಿಜಯಲಕ್ಷ್ಮಿಯು 'ಯಾರನ್ನು' ವರಿಸುವಳೆಂಬದು ಇನ್ನೂ ನಿಶ್ಚಿತವಿರಲಿಲ್ಲ. ಕನ್ನಡಿಗರ ಪರಾಕ್ರಮವು ಮೇರೆದಪ್ಪಿತ್ತು. ಅವರು ಸ್ಫೂರ್ತಿಯಿಂದ ರಣಕೌಶಲ್ಯವನ್ನು ತೋರಿಸುತ್ತ ಎದುರಿಸುವವರನ್ನು ದಂಗುಬಡಿಸಿದ್ದರು. ಒಂದು ಪ್ರಹರದವರೆಗೆ ಯುದ್ಧವು ನಡೆದ ಮೇಲೆ ಮಾಳವೀಯರ ಸೈನ್ಯವು ಹಿಂದೆ ಸರಿಯಲಾರಂಭಿಸಿತು. ಕೂಡಲೆ ತೈಲಪದೇವನು ಎಡಭಾಗದಿಂದ ಭಿಲ್ಲಮನನ್ನೂ ಬಲಭಾಗದಿಂದ ಅಂಬರನರಿಯನ್ನೂ ಮಾಳವ ಸೈನ್ಯವನ್ನು ಸುತ್ತುಗಟ್ಟಲಿಕ್ಕೆ ತಿಳಿಸಿ, ತಾನೂ ಸಿದ್ಧಸೇನಾಪತಿಯೂ ಆ ಸೈನ್ಯದ ಸಮ್ಮುಖದಲ್ಲಿ ದಾಳಿಮಾಡಹತ್ತಿದರು. ಮಾಳವಸೈನ್ಯವು ಹಿಂದೆ ಸರಿಯುತ್ತಿದ್ದಾಗ ಕೂಡಲೆ ಹಿಂಭಾಗದಲ್ಲಿ ಲಗ್ಗೆ ಮಾಡಬೇಕೆಂದು ಚಾವುಂಡರಾಯ ಸೇನಾಪತಿಗೆ ತೈಲಪದೇವನ ಆಜ್ಞೆಯಾಗಿತ್ತು. ಮುಂಜರಾಜನ ಸೈನ್ಯವು ಶತ್ರುಗಳ ಹೊಡೆತವನ್ನು ತಡೆಯದೆ ಹಿಮ್ಮುಖವಾಯಿತು. ಅದನ್ನು ತಡೆದು ನಿಲ್ಲಿಸುವದಕ್ಕಾಗಿ ಮುಂಜರಾಜನು ಬಹಳ ಸಾಹಸ ಮಾಡಿದನು; ಆದರೆ ಅವನ ಯತ್ನವು ನಿಷ್ಫಲವಾಯಿತು.

ಮುಂಜರಾಜನ ಸೇನಾಪತಿಯಾದ ವೀರಸೇನನು ಅತ್ಯಂತ ಪರಾಕ್ರಮಿಯೂ ಸ್ವಾಭಿಮಾನಿಯೂ ಆಗಿದ್ದನು. ಮಾಳವ ಸೈನ್ಯವು ಹಿಂದೆಗೆದದ್ದು ನೋಡಿ ಅವನಿಗೆ ಬಹಳೇ ಸಂತಾಪವಾಯಿತು. ಆಗ ಅವನು ಕುದುರೆಯನ್ನೇರಿ ನಾಲ್ಕೂ ಕಡೆಗೆ

ಸಂಚರಿಸುತ್ತ, ವೀರಾವೇಶ ಜನಕ ಭಾಷಣಗಳಿಂದ ಓಡಿಹೋಗುವ ಪಡೆಯನ್ನು ತಡೆಯುವ ಸಾಹಸ ಮಾಡಿದನು. ಸೇನಾಪತಿಯು ಪ್ರಯತ್ನದಿಂದ ಮಾಳವ ಸೈನ್ಯವು ತಡೆದು ನಿಂತಿತು. ಅದು ಮೊದಲಿಗಿಂತ ಹೆಚ್ಚಾಗಿ ಆವೇಶದಿಂದ ಕಾಳಗ ವನ್ನು ಪ್ರಾರಂಭಿಸಿತು. ಸ್ವಾಮಿನಿಷ್ಠನೂ ಶೂರನೂ ಆದ ವೀರಸೇನನ ಕರ್ತವ್ಯ ಪ್ರಭಾವವನ್ನು ನೋಡಿ ಮುಂಜರಾಜನು ಸಂಭ್ರಮಗೊಂಡನು. ಅವನು ತನ್ನ ಸೈನಿಕರಿಗೆ ಪ್ರೋತ್ಸಾಹನೆ ಕೊಡುತ್ತ ತನ್ನ ಆನೆಯನ್ನು ಮುಂದೆ ನೂಕಿದನು. ಎರಡೂ ಸೈನ್ಯಗಳು ನಿಕರವಾದ ಯುದ್ಧವನ್ನು ಪ್ರಾರಂಭಿಸಿದವು. ತೈಲಪದೇವನ ಸೈನಿಕರು ಮುಂಜರಾಜನ ಸೈನ್ಯದ ಮೂರು ಕಡೆಯಲ್ಲಿಯೂ ಮುತ್ತಿದ್ದರು. ವೀರ ಕನ್ನಡಿಗರ ಹೊಡತಕ್ಕೆ ಮಾಳವ ಸೈನ್ಯವು ಹತಾಶವಾಯಿತು. ವೀರಸೇನ ಸೇನಾ ಪತಿಯ ಕರ್ತವ್ಯ ಪ್ರಭಾವದಿಂದಲೇ ಅದು ಇಷ್ಟು ವೇಳೆಯವರೆಗೆ ತಡೆದು ನಿಂತಿತ್ತು. ಅಷ್ಟರಲ್ಲಿ ಚಾಲುಕ್ಯ ಸೇನಾಪತಿಯಾದ ಸಿದ್ಧಸೇನನು ವೀರಾವೇಶದಿಂದ ಮುಂದೆ ಸಾಗಿ ವೀರಸೇನನ ಮೇಲೆ ಬಾಣಪ್ರಯೋಗ ಮಾಡಿದನು. ಆ ಬಾಣವು ಕೋಲ್ಮಿಂಚಿ ನಂತೆ ಸಾಗಿ ಹೋಗಿ ಮಾಳವ ಸೇನಾಪತಿಯ ಅಸುವನ್ನು ಹೀರಿತು! ವೀರಸೇನನು ಗತಾಸುವಾಗಿ ಭೂಮಿಗೆ ಬಿದ್ದ ಕೂಡಲೆ ಸಂಗ್ರಾಮದ ಸ್ವರೂಪವೇ ಬೇರೆಯಾಗಿ ಹೋಯಿತು. ಮಾಳವೆಯರು ತಮ್ಮ ಸೇನಾಪತಿಯು ಬಿದ್ದದ್ದಕ್ಕಾಗಿ ಎದೆಗುಂದಿ ದಾರಿ ದೊರೆತ ಕಡೆಗೆ ಓಡತೊಡಗಿದರು. ಮುಂಜರಾಜನೂ ಕೀರ್ತಿವರ್ಮ ಸೇನಾ ಪತಿಯೂ ಓಡಿಹೋಗುವ ತಮ್ಮ ಸೈನ್ಯವನ್ನು ತಡೆಯಲಿಕ್ಕೆ ಎಷ್ಟು ಪ್ರಯತ್ನಮಾಡಿ ದರೂ ಸಾಧ್ಯವಾಗಲಿಲ್ಲ.

ಕನ್ನಡಿಗರು ಮಾಳವ ಸೈನ್ಯವನ್ನು ಮೂರು ದಿಕ್ಕುಗಳಲ್ಲಿ ಮುತ್ತಿದ್ದರಿಂದ ಅವರಿಗೆ ಓಡಿ ಹೋಗಲಿಕ್ಕೆ ಒಂದೇ ಕಡೆಯಲ್ಲಿ ಮಾರ್ಗವಿತ್ತು. ಆ ಸೈನ್ಯವು ಓಡ ತೊಡಗಿದ ಕೂಡಲೆ ಚಾವುಂಡರಾಯ ಸೇನಾಪತಿಯು ತನ್ನ ಸೈನ್ಯವನ್ನು ಅದಕ್ಕೆ ಎದುರು ಮಾಡಿದನು. ಸುತ್ತಮುತ್ತಲೆಲ್ಲ ಶತ್ರುಸೈನ್ಯವು ಮುಸುಕಿದ್ದರಿಂದ ಮಾಳವ ಸೈನ್ಯವು ಗಂಡಾಂತರದಲ್ಲಿ ಬಿತ್ತು. ಚಾವುಂಡರಾಯ ಸೇನಾಪತಿಯು ಯುದ್ಧಕೌಶಲ್ಯ ತೋರಿಸುತ್ತ ಶತ್ರುಸೈನ್ಯವನ್ನು ನುಗ್ಗಿ, ಮಾಳವ ಸಾರ್ವ ಭೌಮನನ್ನು ಸೆರೆ ಹಿಡಿದನು. ಮಾಳವ ಸಿಂಹನು ಸೆರೆ ಸಿಕ್ಕ ಕೂಡಲೆ ಪರಾಭೂತ ಸೈನಿಕರನ್ನು ತನ್ನ ಸೇನಾವ್ಯೂಹದಿಂದ ದಾಟಿ ಹೋಗಲಿಕ್ಕೆ ತೈಲಪದೇವನು ಹಾದಿ ಯನ್ನು ಕೊಟ್ಟನು ಓಡಿಹೋಗುವ ಸೈನಿಕರ ಬೆನ್ನಟ್ಟಬಾರದೆಂದೂ, ಅವರ ಮೇಲೆ ಶಸ್ತ್ರಾಸ್ತ್ರಗಳ ಪ್ರಯೋಗ ಮಾಡಕೂಡದೆಂದೂ ಅವನು ತನ್ನ ಸೈನಿಕರಿಗೆ ಕಟ್ಟಪ್ಪಣೆ ಮಾಡಿದನು. ಗೋದಾವರಿಯ ಕಾಳಗದಲ್ಲಿ ವಿಜಯಶ್ರೀಯು ಕನ್ನಡ ಸಾರ್ವಭೌಮ ನಾದ ತೈಲಪದೇವನಿಗೆ ವಿಜಯಮಾಲೆಯನ್ನು ಹಾಕಿದಳು. ಕನ್ನಡಿಗರು ಜಯ ಜಯಕಾರ ಮಾಡಿದರು. ಸೈನ್ಯದಲ್ಲಿ ವಿಜಯ ದುಂದುಭಿಯು ಮೊಳಗಿತು.

ಚಾವುಂಡರಾಯ ಸೇನಾಪತಿಯು ಸೆರೆಸಿಕ್ಕ ಸಾರ್ವಭೌಮ ಮುಂಜರಾಜನನ್ನು

ತೈಲಪದೇವನ ಬಳಿಗೆ ತಂದನು. ಶೂರನೂ ಸಾಹಸಿಯೂ ತರುಣನೂ ಆದ ಮುಂಜರಾಜನನ್ನು ನೋಡಿ ತೈಲಪದೇವನು:—

"ಮುಂಜರಾಜರೆ, ಯುದ್ಧದಲ್ಲ ಜಯಾಪಜಯಗಳು ಧೈವಾಧೀನವಾದವುಗಳಾಗಿರುವವು. ನೀವು ಪರಾಭೂತವಾಗಿದ್ದರೂ ನಾನು ನಿಮ್ಮ ನಿರ್ಭತ್ಸನೆ ಮಾಡಲಾರೆನು. ನೀವು ಮಹತ್ವಾಕಾಂಕ್ಷಿಗಳೂ ದೀರ್ಘಪ್ರಯತ್ನಿಗಳೂ ಆಗಿರುವದರಿಂದ ಬಲಾಬಲಗಳ ವಿಚಾರ ಮಾಡದೆ ಕರ್ನಾಟಕದ ಮೇಲೆ ದಂಡೆತ್ತಿ ಬಂದಿರಿ. ನಾನು ನಿಮ್ಮನ್ನು ಬಂಧವಿಮೋಚನೆ ಮಾಡುತ್ತಿದ್ದೆನು; ಆದರೆ ಹಾಗೆ ಮಾಡಲಿಕ್ಕೆ ನನ್ನ ಮನಸ್ಸು ಒಪ್ಪದಾಗಿದೆ. ನೀವು ಉಲಕೋಚಿ ಸ್ವಭಾವದವರಿರುವದರಿಂದ ನಿಷ್ಕಾರಣವಾಗಿ ಅನ್ಯದೇಶದ ರಾಜರಿಗೆ ಪೀಡೆ ಕೊಡುವಿರೆಂದು ನನ್ನ ಮನವರಿಕೆಯಾದದ್ದರಿಂದ ನಾನು ನಿಮ್ಮನ್ನು ರಾಜಧಾನಿಗೆ ಒಯ್ಯುವದನ್ನು ನಿರ್ಧರಿಸಿರುವೆನು. ನನ್ನಿಂದ ನಿಮ್ಮ ಮಾನಮರ್ಯಾದೆಗಳಿಗೆ ಬಾಧೆ ಬರಲಾರದೆಂದು ನಿಶ್ಚಯವಾಗಿ ತಿಳಿದುಕೊಳ್ಳಿರಿ."

ಪರಾಭೂತನಾದ ಮುಂಜರಾಜನು ಮುಖವನ್ನು ಕೆಳಗೆ ಮಾಡಿ ನಿಂತುಕೊಂಡಿದ್ದನು. ತೈಲಪದೇವನ ಭಾಷಣಗಳಿಂದ ಅವನ ಮನಸ್ಸು ಸಂತಪ್ತವಾಯಿತು. ಗೆಲವು ಹೊಂದಿದೆನೆಂಬ ಗರ್ವದಿಂದ ತೈಲಪದೇವನು ಮಾತನಾಡತೊಡಗಿರುವನೆಂದು ಅವನ ಭಾವನೆಯಾಯಿತು. ಆಗ ಅವನು ಕಠೋರ ಧ್ವನಿಯಿಂದ:—"ತೈಲಪದೇವರಾಜರೆ, ನಾನು ಬಲಾಬಲಗಳ ವಿಚಾರ ಮಾಡದೆ ಇಲ್ಲಿಗೆ ಬಂದಿಲ್ಲ. ವೇಳೆಯು ಪ್ರತಿಕೂಲವಿದ್ದುದರಿಂದ ಸಂಗ್ರಾಮದಲ್ಲಿ ನನಗೆ ಅಪಜಯವೊದಗಿತು ಈ ದೇಹದಲ್ಲಿ ಪ್ರಾಣಸಂಚಾರವಾಗಿರುವವರೆಗೆ ನಾನು ಕರ್ನಾಟಕದ ಕಹುಹಗೆಯೆಂಬದನ್ನು ಮರೆಯಬೇಡಿರಿ. ಅನುಕೂಲವೊದಗಿದ ಕೂಡಲೆ ನಾನು ನಮ್ಮ ಅಪಮಾನದ ಸೇಡನ್ನು ತೀರಿಸಿಕೊಳ್ಳತಕ್ಕವನೇ. ಒಂದು ವೇಳೆ ನಾನು ನಿನ್ನ ಸೆರೆಮನೆಯಿಂದ ಪಾರಾಗದಿದ್ದರೆ ನನ್ನ ಬಂಧುವಾದ ಸಿಂಧುರಾಜನೂ, ರುದ್ರಾದಿತ್ಯ ಮಂತ್ರಿಯೂ ಗೋದಾವರೀ ಕಾಳಗದ ಸೇಡನ್ನು ತೀರಿಸಿಕೊಳ್ಳದಿರಲಾರರು. ಕರ್ನಾಟಕ ಸಾಮ್ರಾಜ್ಯವು ಮಾಳವ ಸಮ್ರಾಟರ ವಶವಾಗುವದೆಂದು ಸೆರಗಿಗೆ ಗಂಟು ಹಾಕಿಕೊಳ್ಳಿರಿ."

"ಮುಂಜರಾಜರೆ, ಇನ್ನು ವಾಕ್ಪೌರುಷವನ್ನು ಸಾಕುಮಾಡಿರಿ. ಕರ್ನಾಟಕ ಸಮ್ರಾಟನೊಡನೆ ಸ್ನೇಹ ಬಳೆಯಿಸುವ ವರೆಗೆ ಮಾಳವ ಸಾರ್ವಭೌಮರಿಗೆ ಸೌಖ್ಯವು ದೊರೆಯಲಾರದೆಂದು ಖಂಡಿತವಾಗಿ ಹೇಳುವೆನು. ನೀವು ಕರ್ನಾಟಕ ರಾಜ್ಯಲಕ್ಷ್ಮಿಯ ಆಶೆಯನ್ನು ಬಿಡಿರಿ ಅವಳು ದುಸ್ಸಾಧ್ಯಳಿರುವಳು. ನೀವು ಕನ್ನಡ ಸಾರ್ವಭೌಮನಾದ ನನ್ನೊಡನೆ ಸ್ನೇಹದಿಂದ ನಡೆಯದಿದ್ದರೆ ಆಮರಣವಾಗಿ ಕಾರಾಗೃಹದಲ್ಲಿರಬೇಕಾಗುವದು."

"ಪರವಿಲ್ಲ; ಪರವಿಲ್ಲ." ಎಂದು ಮುಂಜರಾಜನು ಸಂತಾಪದಿಂದ ನುಡಿದನು

ಕ್ರೋಧೋನ್ಮತ್ತನಾದ ಅವನು ಮುಂದೆ ಮಾತನಾಡದೆ ಸ್ವಸ್ಥವಾಗಿ ಕುಳಿತದ್ದನ್ನು ನೋಡಿ ತೈಲಪದೇವನು ಸೌಮ್ಯವಾಣಿಯಿಂದ—"ನೀವು ಕನ್ನಡಿಗರೊಡನೆ ಸ್ನೇಹ ಸಂಬಂಧವನ್ನು ಮಾಡಬೇಕೆಂದು ನನ್ನ ಇಚ್ಛೆಯಿರುವದು. ನಿಷ್ಕಾರಣವಾದ ಹಗೆತನದಿಂದ ಯಾರಿಗೂ ಸೌಖ್ಯವು ದೊರೆಯಲಾರದು. ಚನ್ನಾಗಿ ವಿಚಾರಮಾಡಿ ನೋಡಿರಿ," ಎಂದು ತೈಲಪದೇವನು ನುಡಿದು ತನ್ನ ಸೇನಾಪತಿಗಳಾದ ಚಾವುಂಡರಾಯ ಸಿದ್ಧಸೇನರನ್ನು ಕುರಿತು:—"ಸೇನಾಪತಿಗಳೇ, ನಾಳೆ ಪ್ರಾತಃಕಾಲದಲ್ಲಿ ಇಲ್ಲಿಂದ ಪಯಣ ಮಾಡತಕ್ಕದ್ದು. ಅಷ್ಟರಲ್ಲಿ ಎಲ್ಲ ಬಗೆಯ ಸಿದ್ಧತೆ ಮಾಡಿಕೊಳ್ಳುವ ಬಗ್ಗೆ ಸೈನಿಕರಿಗೆ ಆಜ್ಞಾಪಿಸಿರಿ."

ಬೆಳಗಾದ ಕೂಡಲೆ ಕನ್ನಡ ಸೈನ್ಯವು ಗೋದಾವರೀ ತೀರದಿಂದ ಮಾನ್ಯಖೇಟದ ದಾರಿಯನ್ನು ಹಿಡಿಯಿತು. ಮಹಾರಾಷ್ಟ್ರದ ಮೇಲೆ ದಂಡೆತ್ತಿ ಹೋಗಿ ವಿಜಯ ಸಂಪಾದನೆ ಮಾಡಿದ ಕನ್ನಡ ಸಾಮ್ರಾಟನನ್ನು ಸಾಮ್ರಾಜ್ಯವಾಸಿಗಳು ಮನಸ್ವಿಯಾಗಿ ಕೊಂಡಾಡಿದರು. ಸೈನ್ಯವು ರಾಜಧಾನಿಗೆ ಬಂದಕೂಡಲೆ, ಮಂತ್ರಿಸೇನಾಪತಿಗಳೂ ನಾಗರಿಕರೂ ಅದನ್ನು ಎದುರುಗೊಂಡು ಪುರದಲ್ಲಿ ಕರೆದೊಯ್ದರು. ತೈಲಪದೇವನು ಗೋದಾವರಿ ಕಾಳಗದಲ್ಲಿ ವಿಜಯ ಸಂಪಾದನೆ ಮಾಡಿದ್ದರಿಂದ ಕನ್ನಡಿಗರೆಲ್ಲರು ಸ್ವಾಭಿಮಾನದಿಂದ ಅವನನ್ನು ಪ್ರಶಂಸಿಸಿದರು.

---

## ವಿಕಲ್ಪ ಭಾವನೆ.

ಪರಮಾರ ವಾಕ್ಪತಿ ಮುಂಜರಾಜನನ್ನಿರಿಸಿದ ಸೆರೆಮನೆಯು ಅರಮನೆಯನ್ನು ಹೋಲುತ್ತಿತ್ತು. ಅಲ್ಲಿ ಮುಂಜರಾಜನಿಗೆ ರಾಜವಿಲಾಸದ ಸಾಧನಗಳೆಲ್ಲವೂ ಅನುಕೂಲ ಮಾಡಿಕೊಡಲ್ಪಟ್ಟಿದ್ದವು. ಸೆರೆಮನೆಯ ಹಿಂಭಾಗದಲ್ಲಿ ಉದ್ಯಾನ-ಕ್ರೀಡಾಸರೋವರಗಳಿದ್ದವು. ಮುಂಭಾಗದಲ್ಲಾದರೂ ಸೊಬಗು ಒಡೆದ ಪುಷ್ಪವಾಟಿಕೆಯಿತ್ತು. ಮುಂಜರಾಜನ ಸೇವೆಗೆ ಅನೇಕ ದಾಸದಾಸಿಯರಿದ್ದರು. ಮಾಳವ ಸಾರ್ವಭೌಮನಂತಹ ಪ್ರತಿಷ್ಠಿತನನ್ನು ಸಾಮಾನ್ಯ ಸೆರೆಯಾಳುಗಳಂತೆ ಹೀನಸ್ಥಿತಿಯಲ್ಲಿರಿಸುವದು ಘನವಂತನಾದ ತೈಲಪದೇವನಿಗೆ ಸರಿದೋರದ್ದರಿಂದ ಅವನು ಪ್ರಮೋದಮಂದಿರವೆಂಬ ಹೆಸರಿನ ರಾಜಮಂದಿರವನ್ನೇ ಸೆರೆಮನೆಗಾಗಿ ತೆಗೆದುಕೊಂಡು ಅಲ್ಲಿ ಎಲ್ಲ ವಿಧದ ಸುಖಸೌಕರ್ಯಗಳನ್ನೊದಗಿಸಿ ಕೊಟ್ಟಿದ್ದನು. ಮುಂಜರಾಜನು ವಿದ್ವಾಂಸನು; ಸಂಗೀತ ಮೊದಲಾದ ಲಲಿತಕಲೆಗಳಲ್ಲಿ ವಿಶಾರದನು. ಆದ್ದರಿಂದ ಅವನಿಗೆ ಹೊತ್ತು ಹೋಗುವದಕ್ಕಾಗಿ ಪ್ರಮೋದಮಂದಿರದಲ್ಲಿ ಉತ್ತಮೋತ್ತಮ ಕಾವ್ಯಗ್ರಂಥಗಳ ಹಾಗು ಗಾಯನ-ವಾದನ ಸಾಮುಗ್ರಿಗಳ ಅನುಕೂಲತೆಯು ಮಾಡಲ್ಪಟ್ಟಿತ್ತು. ಇಷ್ಟೆಲ್ಲ ರಾಜವೈಭವಗಳು ಅನುಕೂಲಿಸಿದ್ದನ್ನು ನೋಡಿದರೆ ಮುಂಜರಾಜನು ಸೆರೆಯಾಳೆಂದು ಯಾರೂ ಅನ್ನುವಂತಿದ್ದಿಲ್ಲ.

ಮುಂಜರಾಜನ ಇರುವಿಕೆಯು ಎಷ್ಟೋ ಸುಖಸೌಕರ್ಯಗಳುಳ್ಳದ್ದಾಗಿದ್ದರೂ ಅವನ ಆತ್ಮಕ್ಕೆ ಶಾಂತತೆಯಿರಲಿಲ್ಲ. ತನ್ನ ಸೈನ್ಯವೆಲ್ಲ ಚದರಿ ಹೋಗಿ ಚಾವುಂಡ ರಾಯ ಸೇನಾಪತಿಯ ಬಂಧನದಲ್ಲಿ ಸಿಕ್ಕಾಗಲೆ, ಅವನ ಮನಶ್ಶಾಂತಿಯು ನಷ್ಟವಾಗಿತ್ತು. ಪ್ರಮೋದಮಂದಿರದ ಸುಂದರವಾದ ಕಟ್ಟಡವೂ, ಉಪವನ-ಕ್ರೀಡಾಜಲಾಶಯಗಳೂ, ಕಾವ್ಯಾಲಂಕಾರ ಗ್ರಂಥಗಳೂ, ಸಂಗೀತ ಸುಕಲಾ ಸಾಮಗ್ರಿಗಳೂ ಅವನ ವಿಮನಸ್ಕತೆಯನ್ನು ನಾಶಗೊಳಿಸಲು ಸಮರ್ಥವಾಗಲಿಲ್ಲ. ಅವನಿಗೆ ಭಾವೀ ಆಯುಷ್ಯವು ಶೂನ್ಯವತ್ತಾಗಿ ತೋರಲಾರಂಭಿಸಿತ್ತು. ನಿರಾಶೆ ಔದಾಶೀನ್ಯಗಳಿಂದ ಅವನ ಅಂತರಾತ್ಮವು ಕಳವಳಗೊಳ್ಳಹತ್ತಿತ್ತು. ಶೃಂಖಲೆಯು ಸುವರ್ಣದ್ದಾದರೂ ಶೃಂಖಲೆಯೇ. ಕಾರಾಗೃಹವು ಪ್ರಮೋದ ಮಂದಿರವಾದರೂ ಕಾರಾಗೃಹವೇ. ಸುವರ್ಣಪಂಜರದೊಳಗಿನ ಶುಕಕ್ಕೆ ಸ್ವೈರಸಂಚಾರ ಮಾಡುತ್ತಿರುವ ಸ್ವಾತಂತ್ರ್ಯ ಶುಕಕ್ಕಿರುವ ಸೌಖ್ಯಗಳು ಹೇಗೆ ದೊರೆಯಬೇಕು? ಒಂದು ದೊಡ್ಡ ರಾಷ್ಟ್ರದ ಸಾರ್ವಭೌಮನಾದ ತಾನು ಪರಕೀಯ ರಾಜನ ಕೈಯಲ್ಲಿ ಸಿಲುಕಿ ಪಾರತಂತ್ರ್ಯ ದುಃಖವನ್ನನುಭವಿಸಬೇಕಾಯಿತೆಂದು, ಮಾನಧನನೂ ಸ್ವಾಭಿಮಾನಿಯೂ ಆದ ಮುಂಜರಾಜನು ಚಡಪಡಿಸುತ್ತಿದ್ದರಲ್ಲಿ ವಿಸ್ಮಯವಿಲ್ಲ.

ಸೆರೆಯಾಳುಗಳಿಗೆ ಯಾವದೊಂದು ಕೆಲಸ ಮಾಡಹಚ್ಚುವ ಪದ್ಧತಿಯು ಈಗಿನಂತೆ ಆಗಿನ ಕಾಲದಲ್ಲಾದರೂ ರೂಢವಾಗಿತ್ತು. ಮುಂಜರಾಜನಿಗಾದರೂ ಒಂದು ಕೆಲಸ ನಿಯಮಿಸಿ ಕೊಡಬೇಕೆಂದು ತೈಲಪದೇವನು ನಿರ್ಧರಿಸಿದನು. ಆಗ ಅವನು ಕಾರಾಗ್ರಹಕ್ಕೆ ಬಂದು ಮುಂಜರಾಜನನ್ನು ಕುರಿತು—"ಪರಮಾರವಾಕ್ಪತಿಗಳೆ, ನೀವು ನನ್ನ ಸೆರೆಯಾಳಾಗಿರುವಿರೆಂದು ಚಿಂತಿಸುವ ಕಾರಣವಿಲ್ಲ. ನಾನು ನಿಮ್ಮ ಮರ್ಯಾದೆಗೆ ಭಂಗ ತರುವಂತಹ ಒಂದೂ ಕೃತಿಗಳನ್ನು ನಡೆಯಗೊಡುವದಿಲ್ಲ. ರಾಜಪದ್ಧತಿಯಂತೆಯೇ ನಿಮಗೆ ಸೌಕರ್ಯಗಳನ್ನೊದಗಿಸಿ ಕೊಟ್ಟಿರುವೆನು. ಎಷ್ಟು ಬಗೆಯ ಸುಖ-ಸೌಕರ್ಯಗಳಿದ್ದರೂ ನಿಮಗೆ ಮಾನ್ಯಖೇಟ ರಾಜಧಾನಿಯೂ ಈ ಪ್ರಮೋದ ಮಂದಿರವೂ ಅಪ್ರಿಯವಾಗಿರುವವೆಂಬದನ್ನು ನಾನು ಬಲ್ಲೆನು. ನಿಮ್ಮ ರಾಕ್ಷಸೀ ರಾಜ್ಯತೃಷ್ಣೆಗೆ ಸರಿಯಾಗಿ ಪ್ರತಿಫಲವು ದೊರೆತಿರುವದು. ಅದಕ್ಕೆ ಯಾರ ಯತ್ನವೂ ಇಲ್ಲ. ನೀವು ಇನ್ನು ಮೇಲೆ ಮಾಳವದೇಶವನ್ನು ಕಾಣುವೆನೆಂದು ತಿಳಿಯಬೇಡಿರಿ. ನೀವು ಇಲ್ಲಿಂದ ಜಾರಿ ಹೋಗಲುಪಕ್ರಮಿಸಿದರೆ ನಾನು ನಿಮ್ಮನ್ನು ಕ್ಷಮಿಸಲಾರೆನು. ಇಲ್ಲಿಂದ ಪಲಾಯನ ಮಾಡುವ ಕಾರಸ್ಥಾನಗಳು ನಡೆದದ್ದು ನನಗೆ ತಿಳಿದರೆ, ನಾನು ಯಾವ ವಿಧದ ದಯಾದಾಕ್ಷಿಣ್ಯಗಳನ್ನು ಹಿಡಿಯದೆ ನಿಮ್ಮ ಕೊಲೆ ಮಾಡಿಸುವೆನು. ನೀವು ಕರ್ನಾಟಕ ಸಾಮ್ರಾಜ್ಯದ ಅಪ್ಪಿವೈರಿಗಳಿರುವದರಿಂದ ನಿಮ್ಮನ್ನು ನಾನು ಬಿಡಲಾರೆನು. ನಿಮ್ಮ ತಮ್ಮಂದಿರಾದ ಸಿಂಧುರಾಜರೂ, ಮಂತ್ರಿಸೇನಾಪತಿಗಳಾದ ರುದ್ರಾದಿತ್ಯ ಕೀರ್ತಿವರ್ಮ ಮೊದಲಾದವರೂ ಮಾನ್ಯಖೇಟವನ್ನು ಮುತ್ತಿ ತಮ್ಮ ಪರಾಕ್ರಮ ಪ್ರಭಾವದಿಂದ ನಿಮ್ಮನ್ನು ಬಿಡಿಸಿಕೊಂಡು

ಹೋಗಲೊಲ್ಲರೇಕೆ? ಕುಟಿಲಕಾರಸ್ಥಾನದಿಂದ ಜಾರಿ ಹೋಗುವದನ್ನು ನಾನು ಎಂದೂ ಕ್ಷಮಿಸಲಾರೆನು."

ತೈಲಪದೇವನ ಮಾತುಗಳು ಮುಂಜರಾಜನ ಕರ್ಣದಲ್ಲಿ ತಪ್ತಶಲಾಕವನ್ನು ಹಾಕಿದಂತೆ ಭಾಸವಾಗತೊಡಗಿದ್ದವು. ಬಲೆಯಲ್ಲಿ ಸಿಕ್ಕ ಸಿಂಹನಂತೆ ಅವನು ಮನದಲ್ಲಿಯೇ ಕುದಿಯಹತ್ತಿದನು. ಪರಾಧೀನನಾದ ಆ ಮಾನಧನನು ತೈಲಪದೇವನ ದರ್ಪೋಕ್ತಿಗಳನ್ನೂ ಅಪಮಾನಕಾರಕ ಭಾಷಣಗಳನ್ನೂ ಅನಿರ್ವಾಹಕ್ಕಾಗಿ ಸಹಿಸತೊಡಗಿದ್ದನು. ಮುಂಜರಾಜನು ಮೌನವಾಗಿ ಕುಳಿತದ್ದನ್ನು ನೋಡಿ ತೈಲಪದೇವನು—"ಮುಂಜರಾಜರೆ, ಇನ್ನು ಮೇಲೆ ನೀವು ವೈರಭಾವವನ್ನು ಬಿಟ್ಟು ಸ್ನೇಹದಿಂದ ವರ್ತಿಸಹತ್ತಿದರೆ ಒಳಿತಾಗುವದು. ನಾನು ನಿಮ್ಮ ಮನಸ್ಸನ್ನು ನೋಯಿಸಬೇಕೆಂಬ ಉದ್ದೇಶದಿಂದ ಇಲ್ಲಿಗೆ ಬಂದಿಲ್ಲ; ಸೆರೆಯಲ್ಲಿ ಸಿಕ್ಕವರೆಂದು ಮಾನಗೇಡು ಮಾಡಬೇಕೆಂದು ನನ್ನ ಪ್ರಯತ್ನವಿಲ್ಲ ನೀವು ನನ್ನೊಡನೆ ಸ್ನೇಹದಿಂದ ನಡೆಯತೊಡಗಿದ ಸಂಗತಿಯು ನಿಮ್ಮ ಬಂಧುಗಳಾದ ಸಿಂಧುರಾಜರಿಗೆ ತಿಳಿದರೆ, ಕರ್ನಾಟಕ-ಮಾಳವರಾಜ್ಯಗಳಲ್ಲಿಯ ವೈರಭಾವವು ನಾಶವಾಗುವ ಸಂಭವವುಂಟು."

ತೈಲಪದೇವನಾಡಿದ ಈ ಮಾತುಗಳು ಮುಂಜರಾಜನ ಸಂತಾಪವನ್ನು ಜಾಗ್ರತ ಪಡಿಸಿದವು. ಆಗ ಅವನು ಸಿಟ್ಟಿನಿಂದ—"ತೈಲಪದೇವರಾಜರೆ, ನನ್ನನ್ನು ಬಂಧನೆಯಲ್ಲಿಟ್ಟಿರುವಿರೆಂದು ಸಿಂಧುರಾಜನು ನಿಮ್ಮೊಡನೆ ಸ್ನೇಹಬಳೆಯಿಸಬೇಕೆ? ಮಾಳವ ಸಾಮ್ರಾಜ್ಯಕ್ಕೆ ಘಟಿಸಿದ ಅನಿರ್ವಚನೀಯ ಅಪಮಾನವನ್ನು ಅವನು ಸಹನ ಮಾಡಬೇಕೆ? ನೀವು ನಿಮ್ಮ ಕುಟಿಲ ನೀತಿಗನುರೋಧವಾಗಿ ಮಾತನಾಡತೊಡಗಿರುವಿರಿ. ಸಿಂಧುರಾಜನಲ್ಲಿಯೂ ಮಾಳವ ರಾಜ್ಯಚಾಲಕರಲ್ಲಿಯೂ ನಿಜವಾದ ಕ್ಷಾತ್ರವೃತ್ತಿಯೂ ಅಭಿಮಾನವೂ ಇದ್ದರೆ ಕರ್ನಾಟಕ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬಂದು, ಮಾನ್ಯಖೇಟವನ್ನು ಉಧ್ವಸ್ತಗೊಳಿಸಿ ತಮ್ಮ ಅಪಮಾನದ ಸೇಡನ್ನು ತೀರಿಸಿಕೊಳ್ಳುವರು."

"ಮುಂಜರಾಜರೆ," ತೈಲಪದೇವನು ಶಾಂತಸ್ವರದಿಂದ—"ನೀವು ಇನ್ನೂ ಶುದ್ಧಮನಸ್ಕರಾಗಿಲ್ಲ. ಮುಂದಾದರೂ ನಿಮ್ಮ ಸ್ವಭಾವಜನ್ಯವಾದ ವರ್ತನದಲ್ಲಿ ಅಭ್ಯಂತರವುಂಟಾದೀತೆಂಬ ನಂಬಿಗೆಯೂ ಹುಟ್ಟುವಂತಿಲ್ಲ. ಏನೂ ಚಿಂತೆಯಿಲ್ಲ. ಅಪಜಯ-ಅಪಮಾನಗಳಿಂದ ಪ್ರಕ್ಷುಬ್ಧಮನಸ್ಕರಾದ ನಿಮಗೆ ಮತ್ತಿಷ್ಟು ತೊಂದರೆ ಕೊಡಬೇಕೆಂದು ನನ್ನ ಇಚ್ಛೆಯಿಲ್ಲ. ನೀವೂ ನಿಮ್ಮ ಪಕ್ಷದ ಜನರೂ ಬೇಕಾದಂತಹ ಸಾಹಸ ಮಾಡಬಹುದು. ಈ ವೇಳೆಯಲ್ಲಿ ನಾನು ನಿಮಗೆ ಸೂಚಿಸುವದೇನಂದರೆ, ನೀವು ಕುಟಿಲ ತಂತ್ರದಿಂದ ಜಾರಿ ಹೋಗುವ ಸಾಹಸದಲ್ಲಿರುವಿರೆಂಬದು ನನಗೆ ಗೊತ್ತಾದರೆ ಮಾತ್ರ ನಿಮ್ಮ ಪರಿಣಾಮವು ಒಳಿತಾಗಲಾರದು. ನಾನು ಅಂತಹ ವೇಳೆಯಲ್ಲಿ ಕರ್ತವ್ಯವೆಂದು ಕಠೋರ ಕರ್ಮವನ್ನಾಚರಿಸಬೇಕಾಗುವದು."

"ಅವಶ್ಯ! ಅವಶ್ಯ!" ಮುಂಜರಾಜನು ಕಠಿಣಸ್ವರದಿಂದ—"ನಾನು ನಿಮ್ಮ

ಬಂಧನೆಯಲ್ಲಿರುವದರಿಂದ ಎಲ್ಲ ಬಗೆಯ ಅಪಮಾನಗಳನ್ನು ಸಹಿಸಬೇಕಾಗಿದೆ. ಈ ವೇಳೆಯಲ್ಲಿ ನನ್ನ ಕೈಯಲ್ಲಿ ಶಸ್ತ್ರವಿದ್ದರೆ........"

"ಮುಂಜರಾಜರೆ," ತೈಲಪದೇವನು ಮಧ್ಯದಲ್ಲಿ ಬಾಯಿಹಾಕಿ—"ನಿರರ್ಥಕ ವಾದ ಮಾತುಗಳನ್ನಾಡಬೇಡಿರಿ, ನಿಮ್ಮ ಕೈಯಲ್ಲಿ ಶಸ್ತ್ರವೂ ಸೈನ್ಯವೂ ಇದ್ದಾಗಲೆ ನೀವು ನಮ್ಮ ಬಂಧನೆಯಲ್ಲಿ ಸಿಲುಕಿರುವಿರಲ್ಲವೆ?"

ತೈಲಪದೇವನ ಮಾತುಗಳನ್ನು ಕೇಳಿ ಮುಂಜರಾಜನು ಮುಖಬಾಗಿಸಿದನು. ಅವನ ಮನಸ್ಸು ಅನೇಕ ವಿಧದ ವಿಚಾರಗಳಿಂದ ಸಂತಾಪ ಔದಾಸೀನ್ಯ ನೊದ ಲಾದ ವಿಕಾರಗಳನ್ನು ಹೊಂದತೊಡಗಿತ್ತು. ಅವನು ಮಾತು ಬೆಳೆಸುವ ಹವ್ಯಾಸಕ್ಕೆ ಹೋಗದೆ ಸ್ವಸ್ಥವಾಗಿ ಕುಳಿತನು. ಆಗ ತೈಲಪದೇವನು:—"ನೀವು ಸೆರೆಯಾಳಾ ಗಿರುವದರಿಂದ ಯಾವದೊಂದು ಕೆಲಸವನ್ನು ಮಾಡಬೇಕಾಗಿರುವದು. ನಾನು ನಿಮಗೆ ಸಶ್ರಮ ಶಿಕ್ಷೆಯನ್ನು ವಿಧಿಸಿರುವೆನು. ನಿಮಗೆ ನಿಯಮಿಸುವ ಕಾರ್ಯವು ಸುವಿದ್ಯಾವಂತರಾದ ನಿಮ್ಮ ಸ್ಥಿತಿಗೆ ಅನುರೂಪವೂ ಪ್ರಿಯವೂ ಆದದ್ದಾಗಿರುವದು. ನೀವು ಪಂಡಿತ ಶಿರೋಮಣಿಗಳಾದ್ದರಿಂದ ವಾಕ್ಪತಿಗಳೆಂಬ ಬಿರುದು ಹೊಂದಿರುವಿ ರಲ್ಲವೆ? ನಿಮ್ಮಿಂದ ರಾಜಮನೆತನದ ಒಬ್ಬ ಕನ್ಯೆಯು ಸಂಗೀತ ವಿದ್ಯೆಯ ಅಭ್ಯಾಸ ಮಾಡಬೇಕೆಂದು ಬಯಸುತ್ತಿರುವಳು. ಅವಳು ಕಾವ್ಯ ವ್ಯಾಕರಣ ಅಲಂಕಾರ ಮೊದಲಾದವುಗಳನ್ನು ಕಲಿತಿರುವಳು; ಆದರೆ ಇನ್ನೂ ಸಂಗೀತಶಾಸ್ತ್ರದಲ್ಲಿ ಅಷ್ಟೊಂದು ಪ್ರಗತಿ ಹೊಂದಿರುವದಿಲ್ಲ. ನೀವು ಅವಳಿಗೆ ಸಂಗೀತ ಶಿಕ್ಷಣವನ್ನು ಕೊಡಿರಿ· ನಿಮ್ಮ ಮೇಲೆ ವಹಿಸಬೇಕೆನ್ನುವ ಕಾರ್ಯವೆಂದರೆ ಇದೇ!"

ತೈಲಪದೇವನ ಮಾತುಗಳು ಮುಂಜರಾಜನಿಗೆ ಮರಣಪ್ರಾಯವಾದ ದುಃಖ ವನ್ನುಂಟು ಮಾಡಿದವು. ಮಾಳವ ಸಾರ್ವಭೌಮನಾಗಿದ್ದ ತಾನು ಸಾಮಾನ್ಯ ಸೆರೆಯಾಳುಗಳಂತೆ ಅನೇಕ ಉಚ್ಚ-ನೀಚ ಕಾರ್ಯಗಳನ್ನು ಮಾಡಬೇಕಾಯಿತೆಂದು ಅವನು ಕ್ಲೇಶಗೊಂಡನು· ದುಃಖಾತಿಶಯದಿಂದ ಅವನ ಮುಖವು ತೇಜೋಹೀನ ವಾಯಿತು. ತೈಲಪದೇವನ ಮಾತುಗಳಿಗೆ ಏನು ಉತ್ತರವೀಯಬೇಕೆಂಬದು ತೋಚದಾಗಲು ಅವನು ಸ್ವಸ್ಥವಾಗಿ ಕುಳಿತನು. ಅನಂತರದಲ್ಲಿ ತೈಲಪದೇವನು: "ನೀವು ಸಂಗೀತ ಕಲೆಯಲ್ಲಿ ನೈಪುಣ್ಯ ಹೊಂದಿರುವಿರಿ. ಹೀಗಿದ್ದು ನಿಮ್ಮ ಐಚ್ಛಿಕ ವಿಷಯವನ್ನು ಕಲಿಸಲಿಕ್ಕೆ ಉದಾಸೀನತೆ ಹೊಂದುವ ಕಾರಣವೇನು? ನೀವು ರಾಜರಿರುವದರಿಂದ ನೀಚ ತರಗತಿಯ ಕಾರ್ಯಗಳಿಗೆ ನಿಮ್ಮನ್ನು ತೊಡಗಿಸ ಲಿಕ್ಕೆ ನನ್ನ ಮನಸ್ಸು ಒಪ್ಪಲೊಲ್ಲದು ನೀವು ರಾಜಮನೆತನದ ಕನ್ಯೆಗೆ ಸಂಗೀತ ಶಿಕ್ಷಣವನ್ನು ಕೊಡಲಿಕ್ಕೆ ಬೇಕು."

ತೈಲಪದೇವನು ಪ್ರಮೋದಮಂದಿರದಿಂದ ತನ್ನ ಅರಮನೆಗೆ ಬಂದು ಭಗಿನಿ ಯಾದ ಕುಸುಮಕುಮಾರಿಯನ್ನೂ ಮಾತೆಯಾದ ಬೊಂಥಾದೇವಿಯನ್ನೂ ಕರೆಯಿ ಸಿದನು. ಅನಂತರದಲ್ಲಿ ಅವನು ತನ್ನ ತಾಯಿಯನ್ನು ಕುರಿತು—"ಕುಸುಮ

ಕುಮಾರಿಗೆ ಸಂಗೀತಶಿಕ್ಷಣ ಕೊಡುವ ಬಗ್ಗೆ ಮುಂಜರಾಜನಿಗೆ ತಿಳಿಸಿರುವೆನು. ಮುಂಜರಾಜನು ಸದ್ಯದ ಸ್ಥಿತಿಯಲ್ಲಿ ಪರಮಾವಧಿ ಔದಾಸೀನ್ಯವನ್ನು ತಾಳಿರುವನು. ಅವನ ಮನಸ್ಸು ಶಾಂತಿ-ಸಮಾಧಾನಗಳನ್ನು ಹೊಂದುವದು ದೂರತೋಪಾಸ್ತವಾಗಿ ರುವದು. ಅಮ್ಮಾ, ನಾನು ನನ್ನ ಕರ್ತವ್ಯವನ್ನು ಕೊನೆಗಾಣಿಸಿದಂತಾಯಿತು. ಇನ್ನು ಮೇಲೆ ನೀವಾಗಲಿ, ಈ ಕುಸುಮಕುಮಾರಿಯಾಗಲಿ ನನ್ನ ಮೇಲೆ ಅಪಶಬ್ದ ಹೊರಿಸುವ ಕಾರಣವು ಉಳಿಯಲಿಲ್ಲ. ಮುಂಜರಾಜನು ಕಾರಾಗೃಹದಲ್ಲಿರುವ ನೆಂದು ನಾನು ಅವನ ಮಾನ-ಮರ್ಯಾದೆಗಳಿಗೆ ಭಂಗತರುವಂತಹ ಒಂದೂ ಕಾರ್ಯ ವನ್ನು ಘಟಿಸಗೊಟ್ಟಿಲ್ಲ. ಅನೇಕ ವಿಧಗಳ ರಾಜವಿಲಾಸಗಳನ್ನನುಭವಿಸಲಿಕ್ಕೆ ಅವ ನಿಗೆ ಅನಿರ್ಬಂಧವಿರುವದು. ಪ್ರಕ್ಷುಬ್ಧ ಮನಸ್ಕನಾದ ಅವನನ್ನು ಶಾಂತಗೊಳಿಸು ವದು ಕುಸುಮಕುಮಾರಿಯ ಕಾರ್ಯವು. ಏಕನಿಷ್ಠ ಸತಿಶಿರೋಮಣಿಯಾದ ಭಗಿ ಣಿಯ ಅಭಿಲಾಷೆಯನ್ನಿಡೇರಿಸುವದಕ್ಕಾಗಿ ನಾನು ಮುಂಜರಾಜನನ್ನು ಉತ್ತಮವಾದ ಸ್ಥಿತಿಯಲ್ಲಿರಿಸಿರುವೆನು."

"ತೈಲಪ, ಮುಂಜರಾಜನ ಮನಸ್ಸು ಪ್ರಕ್ಷುಬ್ಧಸ್ಥಿತಿಯಲ್ಲಿರುವದೆಂಬದಕ್ಕೆ ಆಧಾರಗಳೇನುಂಟು?"

"ಅವನ ಸಂಭಾಷಣಗಳಿಂದ ನಾನು ನಿಜವಾದ ಸ್ಥಿತಿಯನ್ನು ಅರಿತುಕೊಂ ಡೆನು. ಮಾಳವ ರಾಜಕರ್ತರು ಕರ್ನಾಟಕದ ಮೇಲೆ ದಂಡೆತ್ತಿ ಬರಬೇಕೆಂದೂ, ಸಾಮ್ರಾಜ್ಯದ ರಾಜಧಾನಿಯಾದ ಮಾನ್ಯಖೇಟವನ್ನು ಸುಲಿದು ಸೂರೆಮಾಡಿ ತನ್ನ ಬಂಧವಿಮೋಚನೆಗೊಳಿಸಬೇಕೆಂದೂ ಅವನ ಉತ್ಕಟೇಚ್ಛೆಯಿರುವದು. ಇದರಂತೆ ಅವನು ಆಡಿ ತೋರಿಸಿದನು. ಪ್ರಸಂಗ ಸಾಧಿಸಿ ಜಾರಿ ಹೋಗಬೇಕೆಂದು ಅವನ ಯತ್ನವಿದ್ದಂತೆ ತೋರುತ್ತದೆ. ಅವನು ಪ್ರಮೋದಮಂದಿರದಲ್ಲಿ ಎಷ್ಟೇ ಸ್ವೇಚ್ಛೆ ಯಿಂದಿರುತ್ತಿದ್ದರೂ, ಹೊರಗೆ ಹೋಗಲಿಕ್ಕೆ ಅವನಿಗೆ ಸಾಧ್ಯವಿಲ್ಲ. ಪ್ರಮೋದಮಂದಿ ರದ ಸುತ್ತಲೂ ಏಕನಿಷ್ಠರಾದ ಸೈನಿಕರ ಬಿಗಿಯಾದ ಕಾವಲಿರುವದರಿಂದ ಅವನು ಯಾವ ಉಪಾಯದಿಂದಲೂ ಪಾರಾಗಿ ಹೋಗಲಾರನು. ಸ್ವಾಮಿನಿಷ್ಠನಾದ ಹಂಸ ನಾಯಕನನ್ನು ಕಾವಲುಗಾರರ ಮೇಲೆ ನಿಯಮಿಸಿರುವೆನು.'

"ಕುಸುಮಕುಮಾರಿಯು ತನ್ನ ಬುದ್ಧಿ ಬಲದಿಂದ ಮುಂಜರಾಜನ ಮನಸ್ಸಿ ನಲ್ಲಿಯ ವೈರ ಭಾವನೆಗಳನ್ನು ನಾಶ ಮಾಡದ ಇರಲಾರಳು." ಎಂದು ಬೊಂಥಾ ದೇವಿಯು ಕುಸುಮಕುಮಾರಿಯ ಮುಖವನ್ನು ನೋಡುತ್ತ ನುಡಿದಳು.

"ಅವ್ವಾ," ಕುಸುಮಕುಮಾರಿಯು ಕ್ಲೇಶಯುಕ್ತ ವಾಣಿಯಿಂದ-"ಮಾಳವ ಸಾರ್ವಭೌಮರೆನಿಸಿಕೊಂಡವರಿಗೆ ಸೆರೆಮನೆಯಲ್ಲಿ ಕಾಲಹರಣ ಮಾಡುವ ಪ್ರಸಂಗ ಪೊದಗಿತು. ಈ ಅನಿಷ್ಟವಾದ ಘಟನೆಯಿಂದ ಅವರ ಮನಸ್ಸು ಉದಾಸೀನತೆ ಹೊಂದಿದ್ದರಲ್ಲಿ ವಿಸ್ಮಯವೇನು? ಬರಬರುತ್ತ ಅವರ ವೈರಾಗ್ನಿಯು ತಾನಾಗಿ ಶಾಂತ ವಾಗಬಹುದು."

"ಕುಸುಮಕುಮಾರಿ," ತೈಲಪದೇವನು ತನ್ನ ಭಗಿನಿಯನ್ನು ಕುರಿತು:— "ಮುಂಜರಾಜನು ಸಾಮಾನ್ಯಕೋಟಿಯೊಳಗಿನವನಲ್ಲ ಅವನ ಮನಸ್ಸು ನಿಷ್ಕಲಂಕವಾಗುವದೆಂದು ನಾನು ನಂಬಿಲ್ಲ. ನಿನ್ನ ಬುದ್ಧಿಬಲದಿಂದಲೆ ಅವನು ತನ್ನ ದುರ್ಭಾವನೆಗಳನ್ನು ಬಿಡುವ ಆಶೆಯುಂಟು."

"ಅವರು ನಿಮ್ಮೊಡನೆ ಸ್ನೇಹಭಾವದಿಂದ ನಡೆಯ ತೊಡಗಿದ ಮೇಲಾದರೂ ಬಂಧಮುಕ್ತಗೊಳಿಸುವಿರಷ್ಟೆ?"

"ಕುಸುಮಕುಮಾರಿ, ಮುಂದಿನ ಮಾತು ಈಗೇತಕ್ಕೆ? ಪ್ರಸಂಗಬಂದ ಹಾಗೆ ನಡೆಯಲಿಕ್ಕೆ ಬಂದೀತು. ಈಗ ನೀನು ಮುಂಜರಾಜನ ಬಳಿಗೆ ನಿನ್ನ ದಾಸಿಯಾದ ಪ್ರಭಾವತಿಯೊಡನೆ ಹೋಗು. ಯುಕ್ತಿಪ್ರಯುಕ್ತಿಗಳಿಂದ ನೀನು ಅವನ ಮನಸ್ಸನ್ನು ಸಂತುಷ್ಟಗೊಳಿಸು."

ತೈಲಪದೇವನು ಹೀಗೆ ನುಡಿಯಲು ಬೊಂಥಾದೇವಿಯು—"ತೈಲಪ, ಕುಸುಮಕುಮಾರಿಯಲ್ಲಿ ಮುಂಜರಾಜನು ಪ್ರಣಯವುಳ್ಳವನಾಗಿರುವನು. ಸದ್ಯಕ್ಕೆ ಅವನ ಮನಸ್ಸು ಎಷ್ಟೇ ಪ್ರಕ್ಷುಬ್ಧವಾಗಿದ್ದರೂ ಇವಳ ಭೆಟ್ಟಿಯಾದ ಮೇಲೆ ಅದು ವಿಪರ್ಯಾಸ ಹೊಂದದೆ ಇರಲಾರದು" ಎಂದು ನುಡಿದು, ಅವಳು ಕುಸುಮಕುಮಾರಿಯನ್ನು ಕುರಿತು: -"ಕುಸುಮ ನಿಂತೆಯೇಕೆ? ನಿನ್ನ ಪ್ರಿಯಕರನಲ್ಲಿಗೆ ಸಂಗೀತ ವಿದ್ಯಾಭ್ಯಾಸಕ್ಕಾಗಿ ತೆರಳು"

ಕುಸುಮಕುಮಾರಿಯು ತಾಯಿಯ ಹಾಗು ಅಣ್ಣನ ಅಪ್ಪಣೆಯ ಮೇರೆಗೆ ಪ್ರಮೋದಮಂದಿರದ ಉಪವನಕ್ಕೆ ಬಂದಳು. ಅವಳೊಡನೆ ಪ್ರಭಾವತಿಯಾದರೂ ಬಂದಿದ್ದಳು. ಕಾರಾಗ್ರಹದಲ್ಲಿ ಉದಾಸೀನತೆ-ಸಂತಾಪಗಳಿಂದ ಕುದಿಯುತ್ತಿರುವ ಮುಂಜರಾಜನು ತನ್ನ ಉಪೇಕ್ಷೆಯನ್ನೆಲ್ಲಿ ಮಾಡುವನೋ ಎಂದು ಕುಸುಮಕುಮಾರಿಯ ಮನಸ್ಸು ಶಂಕಾಕುಲವಾಗಿತ್ತು. ಆಗ ಅವಳು ತನ್ನ ಸಹಚರಿಯನ್ನು ಕುರಿತು—"ಸಖೀ, ಪ್ರಭಾವತಿ, ಮಹಾರಾಜರ ಮನಸ್ಸು ಈಗ ಅತ್ಯಂತ ಉದ್ವಿಗ್ನಸ್ಥಿತಿಯಲ್ಲಿರುವದು ಅವರು ನನ್ನಲ್ಲ ಅನುರಾಗವುಳ್ಳವರಿರುವರೋ ಇಲ್ಲವೋ ಎಂದು ಮನಸ್ಸು ಸಂದೇಹಗೊಳ್ಳುವದು. ನನ್ನ ಅಣ್ಣಂದಿರು ಅವರನ್ನು ಕಾರಾಗ್ರಹದಲ್ಲಿರಿಸಿ ಮಾನಖಂಡನೆ ಮಾಡಿರುವದರಿಂದ ನನ್ನ ವಿಷಯವಾಗಿಯೂ ಅವರು ಸಂತಪ್ತರಾಗಿರಬಹುದಾಗಿದೆ ಅವರನ್ನು ಕಾಣಬೇಕೆಂದು ನಾನು ಆತುರಳಾಗಿರುವದೇನೋ ನಿಜವು; ಆದರೆ ಮುಂದೆ ಹೆಜ್ಜೆಯಿಡುವ ಧೈರ್ಯವಾಗಲೊಲ್ಲದು. ನೀನು ಹೋಗಿ ಅವರ ಮನಸ್ಥಿತಿಯನ್ನು ಅರಿತುಕೊಂಡು ಬಾ."

"ದೇವಿ," ಪ್ರಭಾವತಿಯು ತನ್ನ ಒಡತಿಯನ್ನು ಕುರಿತು ವಿನಯದಿಂದ— "ನೀವು ಇಲ್ಲದ ಸಂಶಯ ಹಿಡಿಯಬೇಡಿರಿ. ಮುಂಜಮಹಾರಾಜರು ನಿಮ್ಮಲ್ಲಿ ದೃಢವಾದ ಪ್ರಣಯವುಳ್ಳವರಾಗಿರುವಿರೆಂಬವಕ್ಕೆ ಅವರ ಪ್ರಣಯ ಪತ್ರಿಕೆಯೇ ಸಾಕ್ಷಿಯಾಗಿರುವದು. ನೀವು ಅನುಮಾನ ಪಡದೆ ನಿಮ್ಮ ಹೃದಯೇಶ್ವರರನ್ನು

ಕಾಣಿರಿ."

"ಪ್ರಭೆ, ಮೊದಲು ನೀನು ಹೋಗಿ ನನ್ನ ಆಗಮನ ವಾರ್ತೆಯನ್ನರುಹು. ಅನಂತರದಲ್ಲಿ ನಾನು ಬರುವೆನು."

ಪ್ರಭಾವತಿಯು ಪ್ರಮೋದ ಮಂದಿರವನ್ನು ಪ್ರವೇಶಿಸಿ ಮುಂಜರಾಜನಿಗೆ ಭೆಟ್ಟಿಯಾಗಿ:—"ಮಹಾರಾಜರೆ, ಸಂಗೀತ ವಿದ್ಯಾಭ್ಯಾಸಕ್ಕಾಗಿ ನಿಮ್ಮ ಶಿಷ್ಯಳು ಆಗಮಿಸಿರುವಳು ಆಜ್ಞೆಯಾದರೆ ಕರೆತರುವೆನು."

"ಅಂತು ತೈಲಪದೇವನು ತನ್ನ ಆಜ್ಞೆಯನ್ನು ಈಗಾಗಲೆ ಪ್ರಚಾರವಲ್ಲಿ ತಂದು ಬಿಟ್ಟನೇನು? ಒಳಿತಾಯಿತು. ಪರತಂತ್ರನಾದ ನಾನು ನಿಮ್ಮ ಮಹಾರಾಜನು ವಿಧಿಸಿದ ಆಜ್ಞೆಯನ್ನು ಪಾಲಿಸಬೇಕಾಗಿರುವದು. ಸಂಗೀತ ಶಾಸ್ತ್ರವನ್ನು ಕಲಿಯು ಲುತ್ಸುಕಳಾದ ರಾಜಮನೆತನದ ಕನ್ನಿಕೆಯು ಯಾರು?"

"ರಾಜಭಗಿನಿಯಾದ ಕುಸುಮಕುಮಾರಿ ದೇವಿಯು."

"ಏನು? ಕುಸುಮಕುಮಾರಿಯೆ? ಕುಸುಮಕುಮಾರಿಯು ನನ್ನ ಶಿಷ್ಯಳಾಗಲು ಬಂದಿರುವಳೆ? ಅವಳ ಹೊರತು ಸಂಗೀತ ವಿದ್ಯಾಭ್ಯಾಸ ಮಾಡುವವರು ಯಾರೂ ಇಲ್ಲವೇನು?"

"ಮಹಾರಾಜರೆ, ಕುಸುಮಕುಮಾರಿದೇವಿಯು ನಿಮ್ಮ ಶಿಷ್ಯಳಾದರೆ ಏನು ಕೆಡುವದು?"

"ಅವಳ ಮುಖಾವಲೋಕನೆಯಿಂದ ನನ್ನ ಹೃದಯಕ್ಕೆ ಅಸಹ್ಯವಾದ ವೇದನೆ ಯುಂಟಾಗುವದು."

"ನಿಮ್ಮ ಮಾತುಗಳು ವಿಸ್ಮಯಜನಕವಾಗಿರುವವು. ಮಹಾರಾಜರೆ, ಕುಸುಮ ಕುಮಾರಿಯು ನಿಮ್ಮನ್ನು ಪ್ರಣಯಿಸಿಸಿಯುಲ್ಲವೆ? ಅವಳು ನಿಮ್ಮನ್ನು ಹಗಲಿರುಳು ಧ್ಯಾನಿ ಸುತ್ತಿರುವಳು. ಹೀಗಿದ್ದು ನೀವು ಅವಳ ವಿಷಯವಾಗ ಇಷ್ಟೇಕೆ ಕಠೋರರಾಗಿರು ವಿರಿ?"

"ಕುಸುಮಕುಮಾರಿಯು ನನ್ನಲ್ಲಿ ಪ್ರಣಯವುಳ್ಳವಳಿರುವಳೆ? ಅವಳು ನನ್ನನ್ನು ನಿಜವಾಗಿ ಪ್ರೀತಿಸುತ್ತಿರುವಳೆ? ಸುಳ್ಳು; ತೀರಸುಳ್ಳು; ಅವಳು ನನ್ನಲ್ಲಿ ಅನುರಾಗವನ್ನು ತಳೆದಿರುವದು ತೀರ ಸುಳ್ಳು. ಪ್ರಣಯವನ್ನಭಿನಯಿಸುತ್ತ ಅವಳು ನನ್ನನ್ನು ವಂಚಿಸಿದಳು. ಅವಳು ನನ್ನನ್ನು ನಿಜವಾಗಿ ಪ್ರೀತಿಸುತ್ತಿದ್ದರೆ, ನಾನು ಸೆರೆಯಾಳಾಗಿ ಕೊಳೆಯುತ್ತಿರಲಿಲ್ಲ. ಕುಸುಮಕುಮಾರಿಯ ಪ್ರೇಮವು ಮಾಯಾವಿ ಯಾದದ್ದೆಂಬದು ಹಿಂದಿನಿಂದ ನನ್ನ ಅನುಭವಕ್ಕೆ ಬಂತು. ನಾನು ಅವಳಿಗೆ ಸಂಗೀತ ಶಿಕ್ಷಣವನ್ನು ಕೊಡಲಾರೆನು ನೀಚಮನೋವೃತ್ತಿಯ ಆ ಮೋಸಗಾರ್ತಿಯ ಮುಖಾವಲೋಕನೆಗೆ ಸಹ ನನ್ನ ಮನಸ್ಸು ಹೇಸಿಕೊಳ್ಳುತ್ತದೆ."

"ಮಹಾರಾಜರೆ, ನೀವು ನಿರ್ಮಲ ಹೃದಯದ ಕುಸುಮಕುಮಾರಿದೇವಿಯಲ್ಲಿ ಇಲ್ಲದ ದೋಷವನ್ನು ಕಲ್ಪಿಸಬೇಡಿರಿ. ಸಂಗ್ರಾಮದಲ್ಲಿ ಪರಾಭವಗೊಂಡದ್ದ

ಕ್ಕಾಗಿ ನೀವು ಸೆರೆಯಾಳಾದಿರಿ. ನೀವು ಬಿಗಿಯಾದ ಕಾವಲಿನಲ್ಲಿ ಉಳಿಯಲಿಕ್ಕೆ ಕುಸುಮಕುಮಾರಿಯು ಕಾರಣಳಾಗಿಲ್ಲ. ತೈಲಪದೇವ ಮಹಾರಾಜರು ರಾಜಕಾರಣ ವನ್ನು ಸಾಧಿಸಿದ್ದಕ್ಕೆ ಅವಳು ಹೊಣೆಗಾರಳೆಂದು ಕಲ್ಪಿಸಲಾಗದು. ಇಷ್ಟಾಗಿಯೂ ನೀವು ಅವಳ ಮೇಲೆ ದೋಷಾರೋಪಣೆ ಮಾಡಿದರೆ ಒಬ್ಬ ಕುಲಯುವತಿಯ ಆಯುಷ್ಯವನ್ನು ದುಃಖಮಯ ಮಾಡಿದ ಪಾತಕವು ನಿಮ್ಮ ಸೆರಗಿನಲ್ಲಿ ಕಟ್ಟಿಡಲ್ಪಡು ವದು."

"ತೈಲಪದೇವನು ಇನ್ನೂ ರಾಜಕಾರಣವನ್ನು ಸಾಧಿಸಬೇಕಾಗಿದ್ದಂತೆ ತೋರು ವದು. ಅವನು ತನ್ನ ಕಾರ್ಯಸಾಧನೆಗಾಗಿ ನಿನ್ನನ್ನೂ ತನ್ನ ಭಗಿನಿಯನ್ನೂ ಸಹಾಯಕ್ಕಾಗಿ ತೆಗೆದುಕೊಂಡಿರುವನೆಂದು ಭಾಸವಾಗುತ್ತದೆ."

"ಕುಸುಮಕುಮಾರಿಯಂತಹ ಸುಶೀಲ ಯುವತಿಯನ್ನು ಅಲ್ಲದ ಸಲ್ಲದ ಮಾತು ಗಳಿಂದ ಜರಿಯುವ ನಿಮ್ಮ ಯೋಗ್ಯತೆಯು ಹಾಳತದಲ್ಲಿರುವಂತೆ ತೋರುತ್ತದೆ. ಅವಳು ನಿಮ್ಮ ಭಾಗ್ಯೋದಯಕ್ಕೆ ಕಾರಣಳಾಗುವಳೆಂದು ನನ್ನ ಮನಸ್ಸಿಗೆ ತಿಳಿದಿರು ವದು. ಕೆಲವು ದಿನಗಳ ಸಹವಾಸದಿಂದ ನನ್ನ ಮಾತಿನ ಅನುಭವವಾಗುವದು."

"ನೀಚ ಮನೋವೃತ್ತಿಯ ಪರಿಚಾರಿಕೆ!" ಮುಂಜರಾಜನು ಸಂತಪ್ತ ಸ್ವರ ದಿಂದೆ—"ನನ್ನನ್ನು ವಿಷಯ ಜಾಲದಲ್ಲಿ ಕೆಡಹಿ ಸ್ವಸ್ವರೂಪ ವಿಸ್ಮೃತಿಯಾಗುವಂತೆ ಮಾಡಬೇಕೆಂದು ನೀನು ಸಾಹಸ ಮಾಡುತ್ತಿರುವಂತೆ ತೋರುವದು. ನೀನು ಕ್ಷಣ ಸಹ ನಿಲ್ಲದೆ ಹೊರಟು ಹೋಗು. ನಿನ್ನ ಒಡತಿಯು ಕೃತ್ರಿಮ ಪ್ರೇಮದವಳೆಂಬ ದನ್ನು ನಾನು ಚನ್ನಾಗಿ ಮನಗಂಡಿರುವೆನು. ಸುಮ್ಮನೆ ಸಾಹಸ ಮಾಡಿ ದಣಿಯ ಬೇಡ. ಹಿಂದಕ್ಕೆ ಬೌದ್ಧವಿಹಾರದಲ್ಲಿ ನೀನು ನಿನ್ನ ಒಡತಿಯೊಡನೆ ಇದ್ದೆಯಲ್ಲವೆ? ಆಗ ಅವಳು ಪ್ರೇಮಾಭಿನಯಗೊಳಿಸಿದ್ದನ್ನು ನೋಡಿಯೆ ನಾನು ಅವಳ ವಿಷಯ ವಾಗಿ ಮೊದಲಿಗಿಂತ ಹೆಚ್ಚಾಗಿ ಸದ್ಭಾವನೆಯುಳ್ಳವನಾಗಿದ್ದೆನು. ಅವಳು ರೂಪಸಂ ಪನ್ನೆಯಿದ್ದಂತೆ ಗುಣಸಂಪನ್ನೆಯಾಗಿದ್ದರೆ ಸುವರ್ಣಕ್ಕೆ ಸುಗಂಧವು ಕೂಡಿದಂತಾಗು ತ್ತಿತ್ತು. ನಾನು ಅವಳ ಗುಣಪರಿಚಯ ಮಾಡಿಕೊಳ್ಳದೆ ಮೋಸಹೋದೆನು. ಅವಳ ಖ್ಯಾತಿಯು ದೇಶದಲ್ಲಿ ನಿರರ್ಥಕವಾಗಿ ಹಬ್ಬಿರುವದು ಕುಸುಮಕುಮಾರಿಯೆಂದರೆ, ಅವಳೊಬ್ಬ ರಾಜಕಾರ್ಯಸಾಧಿನಿಯು. ನೀನು ನಿನ್ನ ಒಡತಿಯ ಮನಸ್ಸನ್ನು ಸಂತುಷ್ಟಗೊಳಿಸುವದಕ್ಕಾಗಿ ಅವಳ ಗುಣಗಾನ ಮಾಡತೊಡಗಿರುವೆ. ನೀವಿಬ್ಬರೂ ತೈಲಪದೇವನ ರಾಜಕಾರಣವನ್ನು ಈಡೇರಿಸಲಿಕ್ಕೆ ಸಿದ್ಧರಾಗಿರುವಿರಿ."

ಮುಂಜರಾಜನ ಮಾತುಗಳನ್ನು ಕೇಳಿ ದಾಸಿಯಾದ ಪ್ರಭಾವತಿಯು ಸಿಟ್ಟಿ ಗೆದ್ದಳು. ಪೂರ್ಣ ವಿಚಾರ ಮಾಡದೆ ಮನಬಂದಂತೆ ಮಾತಾಡುವ ಮುಂಜರಾಜನು ನಿಜವಾಗಿ ಭ್ರಮಿಷ್ಟನಂತಾಗಿರುವನೆಂದು ಅವಳು ಬಗೆದಳು. ಮುಂಜರಾಜನಲ್ಲಿ ನೆಲೆಗೊಂಡಿದ್ದ ವಿಕಲ್ಪವನ್ನು ಹೇಗೆ ನಿರ್ಮೂಲಗೊಳಿಸಬೇಕೆಂಬದರ ಬಗ್ಗೆ ಅವಳು ನಾನಾಪ್ರಕಾರದಿಂದ ಯೋಚಿಸಿದಳು. ಕೆಲವು ವೇಳೆ ವಿಚಾರ ಮಾಡಿದ ಬಳಿಕ

ಅವಳು ತೀವ್ರಸ್ವರದಿಂದ—"ಮಹಾರಾಜರೆ, ಕುಸುಮಕುಮಾರಿಯು ನಿಮ್ಮ ಅಹಿತ ಚಿಂತನೆ ಮಾಡಿರುವಳೆಂದು ನಿಮ್ಮ ಭಾವನೆಯಾಗಿರುವದು. ಹಾಗೆ ತಿಳಿದುಕೊಳ್ಳಲಿಕ್ಕೆ ನಿಮಗೆ ಸಬಲವಾದ ಆಧಾರಗಳೇನಾದರೂ ದೊರೆತಿರುವವೆ?"

"ಪ್ರತ್ಯಕ್ಷಪ್ರಮಾಣವೇ ಆಧಾರವು."

"ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕು."

"ನಾನು ಅಷ್ಟೊಂದು ಅಜ್ಞಾನಿಯಲ್ಲ."

"ನಿಮ್ಮಲ್ಲಿ ಜ್ಞಾನದ ಲವಲೇಶವಾದರೂ ಇಲ್ಲ."

"ಪರಿಚಾರಿಕೆ, ನೀನು ನಿನ್ನ ಕ್ಷೇತ್ರವನ್ನು ಮೀರಿ ಮಾತನಾಡತೊಡಗಿದೆ. ಪರಮಾರ ವಾಕ್ಪತಿ ಮುಂಜಮಹಾರಾಜರೊಡನೆ ಪ್ರಸಂಗವಿರುವದೆಂಬದನ್ನು ಲಕ್ಷ್ಯದಲ್ಲಿಟ್ಟು ಸುಮ್ಮನೆ ತೆರಳು."

"ನನಗೆ ಎಲ್ಲವೂ ತಿಳಿದಿರುವದು. ನಿಮಗೆ ಮಾತ್ರ ಯಾವದೂ ತಿಳಿದಿಲ್ಲ."

"ಅದೇಕೆ?"

"ಕುಸುಮಕುಮಾರಿದೇವಿಯು ನಿಮ್ಮ ಬಂಧನೆಗೆ ಕಾರಣಳಾಗಿಲ್ಲ. ಅವಳು ನಿಮಗೆ ಆತ್ಮಸಮರ್ಪಣ ಮಾಡಿರುವಳು. ಇಂತಹಳಲ್ಲಿ ದೋಷವನ್ನು ಕಲ್ಪಿಸುವದೆಂದರೆ ಅಜ್ಞತನದ ಪರಮಾವಧಿಯಲ್ಲದೆ ಮತ್ತೇನು?"

"ಪರಿಚಾರಿಕೆ, ನಾನು ನಿನ್ನ ಒಡತಿಯ ಗುಣರೂಪಗಳ ಖ್ಯಾತಿಯನ್ನು ಕೇಳಿ ಮುಗ್ಧನಾಗಿ ಪ್ರಣಯಪತ್ರ ಕಳುಹಿಸಿದೆನು. ಅವಳಿಂದ ಅನುಕೂಲವಾದ ಉತ್ತರವೂ ಬಂದಿತು. ಅವಳು ನನ್ನ ಗುಣಪರೀಕ್ಷೆ ಮಾಡದೆ ಧುಡುಂಪ್ರವೇಶ ಮಾಡಿದ್ದು ಸಂಶಯಾಸ್ಪದವಲ್ಲವೆ? ನನ್ನನ್ನು ಜಾಲದಲ್ಲಿ ಹಾಕಬೇಕೆಂದು ಕುಸುಮಕುಮಾರಿಯು ಮಾಯಾವಿಯಾದ ಪ್ರೇಮದಿಂದ ವರ್ತಿಸಿದಳು. ಹಾಗಿಲ್ಲದಿದ್ದರೆ ನಾನು ಈಪರಿಯ ಬಂಧನದಲ್ಲಿ ಸಿಗುತ್ತಿದ್ದಿಲ್ಲ. ತನ್ನ ಭಗಿನಿಯನ್ನು ಕೊಡಬೇಕೆನ್ನುವ ತೈಲಪದೇವನು ನನ್ನನ್ನು ಇಂತಹ ಅಪಮಾನಕಾರಕ ಸ್ಥಿತಿಯಲ್ಲಿರಿಸುತ್ತಿದ್ದನೆ?"

"ತೈಲಪದೇವ ಮಹಾರಾಜರು ಕಠೋರ ಕರ್ಮಿಗಳಿರುವರು. ರಾಜಕಾರಣವನ್ನು ಸಾಧಿಸುವದಕ್ಕಾಗಿ ಅವರು ನಿಮ್ಮನ್ನು ಈ ರೀತಿಯಾದ ಸ್ಥಿತಿಯಲ್ಲಿರಿಸಿರುವರು. ನೀವು ಇಲ್ಲಿಂದ ಪಾರಾಗಿ ಹೋದರೆ, ಮತ್ತೆ ಕರ್ನಾಟಕ ಸಾಮ್ರಾಜ್ಯದ ಮೇಲೆ ದಾಳಿ ಮಾಡುವಿರೆಂಬ ಭಯದಿಂದ ಮಹಾರಾಜರು ನಿಮ್ಮನ್ನು ಬಿಗಿಯಾದ ಸೆರೆಯಲ್ಲಿರಿಸಿರುವರು. ಅವರ ಈ ಕೃತ್ಯದಲ್ಲಿ ಕುಸುಮಕುಮಾರಿ ದೇವಿಯು ಅಂಗವಿಲ್ಲ. ಅವಳು ಯಾವ ವಿಧದ ರಾಜಕಾರಣವನ್ನೂ ಸಾಧಿಸಬೇಕೆನ್ನುವದಿಲ್ಲ. ಈ ನನ್ನ ಮಾತುಗಳು ಸತ್ಯವಾದವುಗಳಾಗಿರುವವು. ಬೇಕಾದರೆ ಇನ್ನೂ ಮನಗಾಣಿರಿ."

ದಾಸಿಯ ಮಾತುಗಳಿಂದ ಮುಂಜರಾಜನ ಮನಸ್ಸಿನೊಳಗಿನ ಸಂಶಯುವೂ, ಸಂತಾಪವೂ, ಉದ್ವಿಗ್ನತೆಯೂ ಅಲ್ಪ ಮಟ್ಟಿಗೆ ಕಡಿಮೆಯಾದರೂ, ಅವನು ಒಮ್ಮೆಲೆ

ಪೂರ್ಣ ವಿಶ್ವಾಸವಿಟ್ಟು ಕುಸುಮಕುಮಾರಿಗೆ ಸಂದೇಶ ಕಳುಹಿಸುವ ಮನಸ್ಸು ಮಾಡ ಲಿಲ್ಲ. ಆಗ ಅವನು ಸೌಮ್ಯವಾಣಿಯಿಂದ—“ಪರಿಚಾರಿಕೆ, ಉದ್ವಿಗ್ನ ಮನಸ್ಕನಾದ ನಾನು ವಿಚಾರಶೂನ್ಯನಾಗಿರುವದರಿಂದ ಯಾವದನ್ನೂ ನಿಶ್ಚಯಿಸಲಿಕ್ಕೆ ಅಸಮರ್ಥ ನಾಗಿರುವೆನು. ಸದ್ಯಕ್ಕೆ ಕುಸುಮಕುಮಾರಿಯನ್ನು ಕಾಣುವದಕ್ಕೆ ನನ್ನ ಮನಸ್ಸು ಹಿಂಜರಿಯುತ್ತಲಿರುವದು. ಸಂಗೀತ ವಿದ್ಯಾಭ್ಯಾಸಕ್ಕಾಗಿ ರಾಜಮನೆತನದೊಳಗಿನ ಮತ್ತೊಬ್ಬ ಕನ್ನಿಕೆಯು ಇಲ್ಲಿಗೆ ಬರಲೊಲ್ಲಳೇಕೆ ಮನಶ್ಶಾಂತಿಯು ಲಭಿಸಿದ ತರು ವಾಯ ಈ ವಿಷಯಕ್ಕೆ ಮಾತಾಡೋಣ.”

ಮುಂಜರಾಜನ ಮಾತುಗಳಿಂದ ನಿರಾಶೆಗೊಂಡ ದಾಸಿಯ ಮನಸ್ಸಿನಲ್ಲಿ ಆಶೆಯ ಅಂಕುರವು ಮೊಳೆಯಿತು. ಆದರೆ ಮುಂಜರಾಜನ ವಿಕಲ್ಪ ಭಾವನೆಯು ಪೂರಾ ನಾಶವಾಗಲಿಲ್ಲ.

---

## ವಿವಾಹ ಮಹೋತ್ಸವ.

ಪ್ರಭಾವತಿಯು ಪ್ರಮೋದಮಂದಿರದಿಂದ ಹೊರಟು ಉದ್ಯಾನಕ್ಕೆ ಬಂದು ಕುಸುಮಕುಮಾರಿಯನ್ನು ಭೆಟ್ಟಿಯಾದಳು. ಮುಂಜರಾಜನಾಡಿದ ಎಲ್ಲ ಮಾತುಗಳನ್ನು ಒಡತಿಗೆ ಸಾದ್ಯಂತವಾಗಿ ತಿಳಿಸಿದಳು. ಮುಂಜರಾಜನು ತನ್ನ ವಿಷಯವಾಗಿ ವಿಕಲ್ಪಭಾವನೆಗಳುಳ್ಳವನಾಗಿರುವನೆಂಬದು ಗೊತ್ತಾದ ಕೂಡಲೆ ಕುಸುಮಕುಮಾರಿಯ ಮನಸ್ಸು ವ್ಯಾಕುಲವಾಯಿತು ಆಗ ಅವಳು ಔದಾಸೀನ್ಯ ದಿಂದ—“ಪ್ರಭೆ, ನಾನು ಸುಖಬಡಬೇಕೆಂದು ವಿಧಾತನ ಸಂಕೇತವಿಷ್ಟಂತೆ ತೋರುವ ದಿಲ್ಲ. ಇಷ್ಟು ದಿನಗಳ ವರೆಗೆ ಅಣ್ಣಂದಿರ ಮನಸ್ಸು ತಿರುಗಿಸಬೇಕಾದರೆ ಸಾಕು ಸಾಕಾಗಿ ಹೋಯಿತು ಇನ್ನು ಮೇಲೆ ಮಹಾರಾಜರನ್ನು ಒಲಿಸಿಕೊಳ್ಳಲಿಕ್ಕೆ ಯತ್ನಿಸಬೇಕಾಯಿತು. ಅಂತು ಒಂದಿಲ್ಲೊಂದು ವಿಧದ ಪ್ರತಿಕೂಲತೆಗಳೇ ತಲೆ ಯೆತ್ತತೊಡಗಿವೆ. ಇವೆಲ್ಲ ಘಟನೆಗಳನ್ನು ನೋಡಲು ನನ್ನ ಆಯುಷ್ಯವು ಸುಖ ಮಯವಾದೀತೆಂದು ತೋರುವದಿಲ್ಲ. ಹೀಗೆಯೆ ಕ್ಲೇಶದಿಂದ ಕಾಲಕಳೆಯುತ್ತ ಒಂದು ದಿನ ಬಿದ್ದು ಹೋಗುವ ಪ್ರಸಂಗವಿರುತ್ತದೆ. ಸಖಿ, ನಾನು ಕರ್ನಾಟಕ ಸಮ್ರಾಟನ ಭಗಿನಿಯಾಗಿದ್ದರೂ ಸುಖಶಾಂತಿಗಳ ಲವಲೇಶವಾದರೂ ದೊರಕಬಾರ ದೇನು? ದೈವದುರ್ವಿಲಾಸಕ್ಕೆ ಯಾರು ಮಾಡುವದೇನು?”

ನಿಟ್ಟುಸಿರುಬಿಟ್ಟು ಕುಸುಮಕುಮಾರಿಯು ಮಾತನಾಡಲು, ಪ್ರಭಾವತಿಯ ಅಂತಃಕರುಣವು ನೀರಾಯಿತು. ಆಗ ಅವಳು ತನ್ನ ಒಡತಿಯ ಮನಸ್ಸು ಶಾಂತ ಗೊಳಿಸುವದಕ್ಕಾಗಿ—“ದೇವಿ, ಚಿಂತಿಸಬೇಡಿರಿ. ಉದ್ವಿಗ್ನಮನಸ್ಕರಾದ ಮಹಾ ರಾಜರು ಈಗ ಕಠೋರ ಹೃದಯಿಗಳಾಗಿರುವರು. ಬರಬರುತ್ತ ಅವರ ಮನಸ್ಥಿತಿ

ಯಲ್ಲಿ ಸುಧಾರಣೆಯಾಗದಿರಲಾರದು. ನಾನು ಅವರ ಸಂತಾಪವನ್ನು ತಕ್ಕಮಟ್ಟಿಗೆ ಶಾಂತಗೊಳಿಸಿರುವೆನು. ನಿಮ್ಮ ಭೆಟ್ಟಿಯಾದ ಕೂಡಲೆ ಅವರು ನಿಮ್ಮ ವಿಷಯವಾಗಿ ಮೊದಲಿನಂತೆ ಪ್ರಣಯವುಳ್ಳವರಾಗುವದರಲ್ಲಿ ಸಂದೇಹವಿಲ್ಲ. ಒಂದು ವೇಳೆ ನಿಮಗೆ ಅವರು ಮಣಿಯದಿದ್ದರೆ ಬೌದ್ಧ ಯೋಗಿನಿಯರಾದ ಸರ್ವಾರ್ಥಸಿದ್ಧಿಯವರಿಂದ ಮುಂಜರಾಜರ ಚಂಡಿತನವನ್ನು ಬಿಡಿಸಲಿಕ್ಕೆ ಮಾರ್ಗವಿರುವದು.''

"ಸಖಿ, ಯೋಗ್ಯವೇಳೆಯಲ್ಲಿ ನೆನಪುಮಾಡಿದೆ. ನೀನು ಸರ್ವಾರ್ಥಸಿದ್ಧಿಯವರನ್ನು ಕರೆದುಕೊಂಡು ಬಾ. ನಾನು ಮಹಾರಾಜರನ್ನು ಕಾಣುವೆನು.''

ಕುಸುಮಕುಮಾರಿಯು ಪ್ರಭಾವತಿಯನ್ನು ಬೌದ್ಧವಿಹಾರಕ್ಕೆ ಕಳುಹಿಸಿ, ಮುಂಜರಾಜನನ್ನು ಕಾಣುವದಕ್ಕಾಗಿ ಪ್ರಮೋದಮಂದಿರವನ್ನು ಪ್ರವೇಶಿಸಿದಳು. ಆಗ ಮುಂಜರಾಜನು ಮುಖವನ್ನು ಕೆಳಗೆಮಾಡಿ ವಿಚಾರಮಗ್ನನಾಗಿ ಕುಳಿತಿದ್ದನು. ಅವನು ಎದುರಿಗೆ ನಿಂತ ಕುಸುಮಕುಮಾರಿಯನ್ನು ನೋಡಿರಲಿಲ್ಲ. ಎಷ್ಟೋ ವೇಳೆ ಕಳೆದು ಹೋದ ಮೇಲೆ ಕುಸುಮಕುಮಾರಿಯು ಕಾತರಸ್ವರದಿಂದ:—"ಮಹಾರಾಜರೆ!''

ಮುಂಜರಾಜನು ಮುಖವೆತ್ತಿ ನೋಡಿದನು ಜಗತ್ತಿನೊಳಗಿನ ಲಾವಣ್ಯವೆಲ್ಲ ಒಬ್ಬಳಗೂಡಿ ತನ್ನೆದುರಿಗೆ ಮೂರ್ತಿಮಂತವಾಗಿ ನಿಂತುಕೊಂಡಿರುವದೋ ಏನೋ ಎಂದು ಅವನು ದಂಗು ಬಡೆದು ಕುಸುಮಕುಮಾರಿಯನ್ನು ಎವೆಯಿಕ್ಕದೆ ನೋಡುತ್ತ ಕುಳಿತನು. ತನ್ನೆದುರಿಗೆ ನಿಂತವಳು ದೇವಲೋಕದಿಂದಿಳಿದ ಶಾಪಭ್ರಷ್ಟ ದೇವತೆಯೇ ಇರುವಳೆಂದು ಅವನ ಭಾವನೆಯಾಯಿತು. ಕರ್ನಾಟಕ ಸಾಮ್ರಾಜ್ಯದಲ್ಲಿ ಇಂತಹ ಅದ್ವಿತೀಯ ರತ್ನವು ಇರುತ್ತಿದ್ದುದನ್ನು ನೋಡಿ ಅವನಿಗೆ ವಿಸ್ಮಯವೂ ಮತ್ಸರವೂ ಉಂಟಾದವು. ತನ್ನೆದುರಿಗೆ ನಿಂತವಳು ಯಾರಿರಬಹುದೆಂಬ ವಿಚಾರವು ಅವನಲ್ಲಿ ಹುಟ್ಟಿತು. ಕೆಲವು ವೇಳೆ ವಿಚಾರಿಸಿದ ಮೇಲೆ ತನ್ನ ಸಮ್ಮುಖದಲ್ಲಿದ್ದವಳು ರಾಜಭಗಿನಿಯಾದ ಕುಸುಮಕುಮಾರಿಯಿರಬಹುದೆಂದು ಅವನು ತರ್ಕಿಸಿದನು. ಕೂಡಲೆ ಅವನ ಮನಸ್ಸು ವಿಪರೀತಸ್ಥಿತಿಯನ್ನು ಹೊಂದಿತು. ಆಗ ಅವನು—"ನೀನು ಯಾರು?''

"ಮಹಾರಾಜರೆ, ನಾನು ತಮ್ಮ ದಾಸಿಯು.''

"ನಾನು ಮಹಾರಾಜನಲ್ಲ; ಒಬ್ಬ ಸೆರೆಯಾಳಾಗಿರುವೆನು.''

"ನನಗೆ ನೀವು ಮಹಾರಾಜರು. ನನ್ನ ಹೃದಯೇಶ್ವರರು!''

"ನೀನು ರಾಜಭಗಿನಿಯಾದ ಕುಸುಮಕುಮಾರಿಯೇನು?''

"ರಾಜಭಗಿನಿಯೂ ತಮ್ಮ ಸಹಧರ್ಮಚಾರಿಣಿಯೂ ಆದ ಕುಸುಮಕುಮಾರಿಯು ನಾನೇ! ಇಷ್ಟರಲ್ಲಿಯೇ ಮಹಾರಾಜರಿಗೆ ವಿಸ್ಮೃತಿಯಾಯಿತೇನು? ನಾನು ತಮ್ಮ ಪ್ರಣಯಿನಿಯಲ್ಲವೆ? ನಾನು ತಮ್ಮ ವಾಗ್ದತ್ತವಧುವಾಗಿಲ್ಲವೆ?''

"ಕುಸುಮಕುಮಾರಿ, ನೀನು ಈಗ ಇಲ್ಲಿಗೇಕೆ ಬಂದೆ?''

“ತಮ್ಮ ಸೇವೆಗಾಗಿ.”

“ಕಾರಣವಿಲ್ಲ.”

“ಹಾಗೆ ನಿರ್ದಯರಾಗಕೂಡದು.”

“ಕರ್ನಾಟಕವು ಕಠೋರವಿರುವದು.”

“ಹಾಗೆ ಭಾವಿಸಲಾಗದು. ಕನ್ನಡನಾಡು ದಯದ ಬೀಡು.”

“ನೀನು ಈಗ ಬರಬಾರದಾಗಿತ್ತು.”

“ಅದೇಕೆ?”

“ನನ್ನ ಮನಸ್ಸು ಶಾಂತವಿಲ್ಲ”

“ನಾನು ನಿಮ್ಮ ಮನಸ್ಸು ಶಾಂತವಾಗಲಿಕ್ಕೆ ಯತ್ನಿಸುವೆನು”

“ಹೇಗಾದರೂ ಇಲ್ಲಿ ನನ್ನ ಮನಸ್ಸು ಶಾಂತವಾಗಲಾರದು.”

“ಮುಂದಿನ ಯತ್ನವೇನು?”

“ಅದನ್ನು ಈಗ ಹೇಗೆ ಹೇಳಲಿ?”

“ಸಹಧರ್ಮಚಾರಿಣಿಯಾಗಬೇಕೆನ್ನುವವಳು ಪತಿಯ ಕ್ಲೇಶಭಾಗಿನಿಯಾಗಿ ಕಾರ್ಯಸಾಧಿನಿಯಾಗಲಾರಳೆ?”

“ಕುಸುಮಕುಮಾರಿ, ಈಗ ನನ್ನ ಮನಸ್ಸು ವಿರಕ್ತವಾಗಿರುವದು. ಈಗ ನನಗೆ ಇಡೀ ಸೃಷ್ಟಿಯೇ ಶೂನ್ಯವತ್ ಭಾಸಮಾನವಾಗತೊಡಗಿದೆ. ಹೀಗಿದ್ದಮೇಲೆ ನಿನ್ನ ಆಶೆಯು ಹೇಗೆ ಪೂರ್ಣವಾಗಬೇಕು. ಈಗ ನಾನು ಮೊದಲಿನ ಮುಂಜ ರಾಜನಲ್ಲ.”

“ಮಹಾರಾಜರೆ, ತಾವು ವಿರಕ್ತರಾಗಿರಿ, ಅನುರಕ್ತರಾಗಿರಿ. ಬೇಕಾದಸ್ಥಿತಿ ಯಲ್ಲಿದ್ದರೂ ತಮಗನುಕೂಲೆಯಾಗಿ ನಾನು ವರ್ತಿಸುವೆನು. ಈ ದಾಸಿಯನ್ನು ತಮ್ಮ ಚರಣಸನ್ನಿಧಿಯಲ್ಲಿರಿಸಿಕೊಳ್ಳಿರಿ. ತಮ್ಮನ್ನಗಲಿರುವದು ನನಗೆ ಪ್ರಾಣಾಂ-ತಿಕವಾದ ವೇದನೆಯನ್ನುಂಟುಮಾಡುವದು.”

ಕುಸುಮಕುಮಾರಿಯ ನೇತ್ರಗಳು ಜಲಪೂರ್ಣವಾದವು. ಅವಳ ಮನಸ್ಥಿತಿ ಯನ್ನು ನೋಡಿ ಮುಂಜರಾಜನು ಕನಿಕರಗೊಂಡನು. ಅವನ ಮನಸ್ಸು ಮಾತ್ರ ವಿಲಕ್ಷಣವಾಗಿ ಚಾಂಚಲ್ಯಹೊಂದಿತು. ರಾಜಕುಮಾರಿಯನ್ನು ಸ್ವೀಕರಿಸಿದ ಮೇಲೆ ತನ್ನಿಂದ ಯಾವ ಕಾರಸ್ಥಾನವನ್ನು ಮಾಡಲು ಸಾಧ್ಯವಾಗುವದಿಲ್ಲವೆಂದು ಅವನು ಬಗೆದನು. ಹಾಗು ತನ್ನ ಜನರಿಂದ ರಚಿಸಲ್ಪಡುವ ಕಾರಸ್ಥಾನಗಳಾದರೂ ಗುಪ್ತ ವಾಗಿ ಉಳಿಯಲಿಕ್ಕೆ ಕುಸುಮಕುಮಾರಿಯಿಂದ ಅಡ್ಡಿಯಾಗುವದೆಂದು ಅವನ ಭಾವನೆಯಾಯಿತು. ಇಷ್ಟೆಲ್ಲ ವಿಚಾರಗಳು ಮನಸ್ಸಿನಲ್ಲಿ ಹುಟ್ಟಿದ ಕೂಡಲೆ ಅವನ ಹೃದಯವು ಮತ್ತೆ ಕಲ್ಲಾಯಿತು. ಆಗ ಅವನು ತಿರಸ್ಕಾರ ಸಂತಾಪಗಳಿಂದ:—

“ರಾಜಕುಮಾರಿ, ನಾನು ನಿನ್ನ ಹೃದಯವನ್ನು ಚನ್ನಾಗಿ ಅರಿತಿರುವೆನು. ನೀನು ಎಷ್ಟು ರೂಪವತಿಯೋ ಅಷ್ಟೇ ಗುಣವತಿಯಿರುವೆ. ನಿನ್ನಂತಹ ಆದರ್ಶ ಆರ್ಯಾಂ

ಗನೆಯನ್ನು ಸ್ವೀಕರಿಸಲಿಕ್ಕೆ ನನ್ನ ಮನಸ್ಸು ಆತುರತೊಂಡಿರುವದು. ಆದರೆ ಏನು ಮಾಡಲಿ? ನಾನು ಈಗ ರಾಜ್ಯವನ್ನು ಕಳೆದುಕೊಂಡು ಕಾರಾಗೃಹ ಯಾತನೆಯನ್ನನುಭವಿಸುತ್ತಿರುವೆನು. ಸೆರೆಯಾಳಾದ ನನ್ನನ್ನು ವರಿಸಿ ನೀನು ಕಡುದುಃಖಿಯಾಗಬೇಡ.''

“ಮಹಾರಾಜರೆ, ಪತಿಯು ಎಂತಹ ಅವಸ್ಥೆಯಲ್ಲಿದ್ದರೂ ಅವನನ್ನು ಅನುಸರಿಸುವದು ಸತೀಧರ್ಮವಾಗಿರುವದು. ನೀವು ನನ್ನ ವಿಷಯವಾಗಿ ಆಲೋಚಿಸಬೇಡಿರಿ. ಸೌಖ್ಯವು ರಾಜೈಶ್ವರ್ಯಗಳಲ್ಲಿಲ್ಲ; ಸ್ವರ್ಗದಲ್ಲಿಲ್ಲ; ಸತ್ಯಲೋಕ-ವೈಕುಂಠಗಳಲ್ಲಿಲ್ಲ. ಮನಸ್ಸಿಗನುಕೂಲವಾದ ಸ್ಥಿತಿಯೇ ಸೌಖ್ಯವು. ನೀವಿಲ್ಲದ ಸ್ವರ್ಗವು ನನಗೆ ಅಧೋಗತಿಯಂತೆ ಭಾಸವಾಗುವದು. ನಿಮ್ಮೊಡನೆ ನಾನು ಈ ಕಾರಾಗೃಹದಲ್ಲಿಯೆ ಸ್ವರ್ಗತುಲ್ಯವಾದ ಸೌಖ್ಯವನ್ನು ಹೊಂದುವೆನು. ಪ್ರಿಯರೆ, ನೀವು ನನ್ನಲ್ಲಿ ಆಶಾಂಕುರವನ್ನು ಹುಟ್ಟಿಸಿದ್ದು, ಈಗ ನಿರಾಶಗೊಳಿಸಬೇಡಿರಿ.''

“ಕುಸುಮಕುಮಾರಿ, ಹಿಂದಿನ ಪರಿಸ್ಥಿತಿಯು ಸದ್ಯಕ್ಕೆ ಇರುವದಿಲ್ಲ. ಗತಗೋಷ್ಠಿಗಳಬಗ್ಗೆ ಪರಸ್ಪರರು ಯೋಚನೆ ಮಾಡುವ ಕಾರಣವೇನು? ನೀನು ವೃಥಾ ಪ್ರಯತ್ನಿಸಬೇಡ''

“ತಮ್ಮ ಚರಣಸೇವೆ ಮಾಡದೆ ನಾನು ಜೀವಿಸಲಾರೆನು.''

“ನನ್ನ ಸೇವೆಗಾಗಿ ಇತರ ದಾಸಿಯರು ಸಿದ್ಧರಿರುವರು. ಇದಲ್ಲದೆ ಸೆರೆಯಾಳಾದ ನನಗೆ ಅವರ ಅಗತ್ಯವೂ ಇಲ್ಲ.''

“ಹೇಗಿದ್ದರೂ ನಾನು ನಿಮ್ಮನ್ನಗಲಿರಲಾರೆನು.''

“ಅಷ್ಟೊಂದು ಚಂಡಿತನದಿಂದ ಲಾಭ ದೊರೆಯಲಾರದು.''

“ಚಂಡಿತನವಲ್ಲ ಅಧಿಕಾರದಿಂದ ನಿಮ್ಮ ಮೇಲೆ ವರ್ಚಸ್ವವನ್ನು ಪ್ರಸ್ಥಾಪಿಸಲಿಕ್ಕೆ ನಾನು ಸಮರ್ಥಳಿರುವೆನು. ಸೆರೆಯಾಳಾದ ನೀವು ಕರ್ನಾಟಕ ಸಮ್ರಾಟನ ಆಜ್ಞಾಧಾರಕರಾಗಿರತಕ್ಕದ್ದಲ್ಲವೆ? ಅವರು ನಿಮಗೆ ವಿಧಿಸಿದ ಆಜ್ಞೆಯನ್ನು ಇಷ್ಟರಲ್ಲಿಯೆ ಮರೆತಂತೆ ತೋರುವದು. ನೀವು ನನಗೆ ಸಂಗೀತ ವಿದ್ಯಾಭ್ಯಾಸ ಮಾಡಿಸತಕ್ಕದ್ದು. ತೈಲಪದೇವ ಮಹಾರಾಜರ ಆಜ್ಞೆಯ ಮೇರೆಗೆ ನಾನು ಇಲ್ಲಿಗೆ ಬಂದಿರುವೆನು. ನನ್ನನ್ನು ನಿಮ್ಮ ಸನ್ನಿಧಿಯಿಂದ ತಳ್ಳಲಿಕ್ಕೆ ಮಾರ್ಗವಿಲ್ಲವೆಂಬದನ್ನು ಮರೆಯಬೇಡಿರಿ. ನಾಥರೆ! ಸಂತಪ್ತರಾಗ—''

ಕುಸುಮಕುಮಾರಿಯು ಹೀಗೆ ನುಡಿಯುವಷ್ಟರಲ್ಲಿ ಪ್ರಭಾವತಿಯೂ ಬೌದ್ಧ ತಾಪಸಿಯಾದ ಸರ್ವಾರ್ಥಸಿದ್ಧಿಯೂ ಅಲ್ಲಿಗೆ ಬಂದರು ಸರ್ವಾರ್ಥಸಿದ್ಧಿಯ ಅಕಲ್ಪಿತವಾದ ಆಗಮನದಿಂದ ಮುಂಜರಾಜನು ಅಚ್ಚರಿಗೊಂಡನು. ಬಳಿಯಲ್ಲಿ ಕುಸುಮಕುಮಾರಿಯು ದಾಸಿಯಿದ್ದುದರಿಂದ ಅವಳೇ ಬೌದ್ಧತಾಪಸಿಯನ್ನು ಕರೆತಂದಿರುವಳೆಂದು ತಿಳಿದನು. ಸರ್ವಾರ್ಥಸಿದ್ಧಿಯ ಅಂದಿನ ಭೆಟ್ಟಿಯು ಮುಂಜರಾಜನಿಗೆ ಎರಡನೆಯ ಬಾರಿಯದಾಗಿತ್ತು. ಅವನು ಪರಮಾನಂದ ಪರಮಹಂಸನೆಂಬ ಅಭಿಧಾನ

ಹೊಂದಿ ಬೌದ್ಧ ವಿಹಾರದಲ್ಲಿ ಒಮ್ಮೆ ಕಂಡಿದ್ದನು. ಸರ್ವಾರ್ಥಸಿದ್ಧಿಯು ಬಂದ ಕೂಡಲೆ ಮುಂಜರಾಜನು ಅವಳಿಗೆ ಅಭಿವಂದಿಸಿದನು. ಆಗ ಸರ್ವಾರ್ಥಸಿದ್ಧಿಯು "ಆಯುಷ್ಮಾನ್‌ಭವ" ಎಂದು ಆಶೀರ್ವದಿಸಿ—"ಒಮ್ಮೆ ಪರಮಹಂಸ ಮುಂಜರನ್ನು ಕಂಡಿದ್ದೆನು; ಈಗ ಸೆರೆಯಾಳು ಮುಂಜರನ್ನು ನೋಡುತ್ತಿರುವೆನು. ಮಹಾರಾಜ ಮುಂಜರನ್ನು ನೋಡುವ ಭಾಗ್ಯವು ಎಂದು ಬರುವದೋ ಏನೋ!"

"ತಾಪಸಿಯವರೆ, ಅಂತಹ ಯೋಗವು ಮುಂದೆ ಬರಲಿಕ್ಕಿಲ್ಲವೆಂದು ತೋರುವದು."

"ಹಾಗೆ ಬಾವಿಸಬೇಡಿರಿ. ಮನುಷ್ಯನಿಗೆ ಸುಖದುಃಖಗಳು ಸಮವಾಗಿರುತ್ತಿರುತ್ತವೆ. ಭಗವಾನ್ ಬುದ್ಧದೇವನು ಬೇಗನೆ ನಿಮಗೆ ಸುದಿನಗಳನ್ನುಂಟುಮಾಡುವನು."

"ದುಃಖಿತರಿಗೆ ಸುಖಿಗಳು ಹೇಳುವ ಸಾಂತ್ವನಪರಿಭಾಷಣಗಳ ಒಂದು ಮಾದರಿಯಿದು."

"ಮಹಾರಾಜರೆ, ನಿಮ್ಮ ಭಾವನೆಗಳು ಉದಾತ್ತವಾದವುಗಳಿರುವವು. ನೀವು ಯಾವಾಗಲೂ ಸತ್ಪಕ್ಷಪಾತಿಗಳಿರುವಿರಿ. ಭಗವಾನ್ ಶಾಕ್ಯಮುನಿಯಲ್ಲಿಯೂ ಅವನ ಧರ್ಮದಲ್ಲಿಯೂ ನಿಮ್ಮ ಪರಮ ವಿಶ್ವಾಸವಿರುವದು. ನಿಮ್ಮಿಂದ ಸರ್ವಶ್ರೇಷ್ಠವಾದ ಪೂಜ್ಯ ಬೌದ್ಧ ಧರ್ಮವು ಅಭ್ಯುದಯ ಹೊಂದಬೇಕಾಗಿದೆ. ಇಂತಹ ಸದ್ಧರ್ಮ ನಿಷ್ಠೆಯ ಜನರು ಸುದಿನಗಳನ್ನು ಕಾಣದಿದ್ದರೆ ಶಾಕ್ಯಮುನಿಯು ಭಕ್ತಾಭಿಮಾನಿಯಲ್ಲವೆಂದು ಹೇಳಬೇಕಾದೀತು."

ಸರ್ವಾರ್ಥಸಿದ್ಧಿಯು ಹೀಗೆ ನುಡಿದ ಮೇಲೆ ಮುಂಜರಾಜನು ಏನೂ ಮಾತಾಡದೆ ಸ್ವಸ್ಥವಾಗಿ ಕುಳಿತನು. ಅವನ ಅಂತರಂಗವು ವಿಚಾರ ತರಂಗಗಳಿಂದ ಹೊಯ್ದಾಡತೊಡಗಿತ್ತು. ಆಗ ಸರ್ವಾರ್ಥಸಿದ್ಧಿಯು ಮುಂಜರಾಜನನ್ನು ಕುರಿತು: 'ಮಹಾರಾಜರೆ, ನೀವು ರಾಜಕುಮಾರಿಯವರನ್ನು ಉಪೇಕ್ಷಿಸುತ್ತಿರುವಿರೆಂದು ಕೇಳುತ್ತೇನೆ. ಹೀಗೆ ಮಾಡುವದು ನಿಮ್ಮ ಶೀಲಕ್ಕೆ ಶೋಭಿಸುವದಿಲ್ಲ. ನಿಮ್ಮ ಮಾತುಗಳನ್ನು ನಂಬಿ ಪ್ರೇಮವನ್ನರ್ಪಿಸಿದ ಸತಿಸಿರೋಮಣಿಯನ್ನು ವಂಚಿಸುವದು ಧರ್ಮವಲ್ಲ. ಸದಸದ್ವಿವೇಕ ಬುದ್ಧಿಯಿಂದ ವಿಚಾರಿಸಿ ನೋಡಿರಿ. ಬೌದ್ಧವಿಹಾರಕ್ಕೆ ನೀವು ಬಂದಾಗ ಏನು ಹೇಳಿರುವಿರಿ? ನೀವು ಮನಸ್ಸಿನಿಂದ ಕುಸುಮಕುಮಾರಿಯವರನ್ನು ಪ್ರೀತಿಸುತ್ತಿದ್ದರೆ ನಿಮ್ಮ ವರ್ತನದಲ್ಲಿ ಈ ಬಗೆಯ ಸ್ಥಿತ್ಯಂತರವು ತೋರುತ್ತಿದ್ದಿಲ್ಲ. ಕುಲಯುವತಿಯನ್ನು ಮೋಸಗೊಳಿಸುವ ಅಘೋರಕೃತಿಯು ನಿಮ್ಮಂತಹರಿಂದ ಘಟಿಸಬಾರದು. ತೈಲಪದೇವ ಮಹಾರಾಜರಾದರೂ ಇವಳನ್ನು ನಿಮಗೆ ಧಾರೆಯೆರೆದು ಕೊಡಲಿಕ್ಕೆ ಸಿದ್ಧರಾಗಿರುವರು. ಅವರ ಮನಸ್ಸನ್ನು ತಿರುಗಿಸಬೇಕಾದರೆ ರಾಜಕುಮಾರಿಯವರಿಗೆ ಸಾಕುಸಾಕಾಗಿಹೋಯಿತು. ಇಷ್ಟಾಗಿಯೂ ನೀವು ನಿಮ್ಮ ಹೃದಯವನ್ನು ಕಲ್ಲಿಗಿಂತ ಕಲ್ಲುಮಾಡಿದರೆ ಒಬ್ಬ ಸತಿಯ ಆತ್ಮನಾಶ ಮಾಡಿದ

ಪಾತಕವು ನಿಮ್ಮ ನೆರಗಿಗೆ ಕಟ್ಟಲ್ಪಡುವದು. ನೀವು ಧರ್ಮಜ್ಞರಿರುವಿರಿ; ವಿದ್ವಾಂಸರಿರುವಿರಿ. ಸರ್ವವಿಚಾರಗಳನ್ನು ಅರಿತವರಾದ ನಿಮಗೆ ಹೆಚ್ಚಿಗಿನ್ನೇನು ಹೇಳಲಿ?"

ಸರ್ವಾರ್ಥಸಿದ್ಧಿಯ ಮಾತಿನಿಂದ ಮುಂಜರಾಜನಲ್ಲಿ ವಿವೇಕೋದಯವಾಯ್ತು. ರಾಜ್ಯಭ್ರಷ್ಟನಾಗಿ ಕಾರಾಗೃಹದುಃಖವನ್ನನುಭವಿಸತೊಡಗಿದ್ದರಿಂದ ತನ್ನ ಬುದ್ಧಿಭ್ರಂಶವಾದಂತಾಗಿರುವದೆಂದೂ ಆದ್ದರಿಂದಲೆ ಅವಿಚಾರದ ಕೃತಿಗಳು ಘಟಿಸತೊಡಗಿರುವವೆಂದೂ ಅವನು ಬಗೆದನು ಆಗ ಅವನು ಪಶ್ಚಾತ್ತಾಪಯುಕ್ತವಾದ ಸ್ವರದಿಂದಸರ್ವಾರ್ಥಸಿದ್ಧಿಯನ್ನು ಕುರಿತು--"ಬೌದ್ಧತಾಪಸಿಯವರೆ, ತಮ್ಮ ಸದ್ಬೋಧಾಮೃತದಿಂದ ನನ್ನಲ್ಲಿ ಜ್ಞಾನೋದಯವಾಯಿತು. ವಿವೇಕಭ್ರಷ್ಟನಾದ ನನ್ನಿಂದ ಪ್ರಮಾದವು ಘಟಿಸುತ್ತಿತ್ತು. ನಾನು ಕುಸುಮಕುಮಾರಿಯ ಹೃದಯವನ್ನು ಚನ್ನಾಗಿ ಅರಿತಿರುವೆನು. ಸುಹೃದಯಳಾದ ರಾಜಕುಮಾರಿಯನ್ನು ನಾನು ವೃಥಾ ನೋಯಿಸಿದ್ದಕ್ಕಾಗಿ ಮನಸ್ಸು ಕ್ಲೇಶಗೊಂಡಿದೆ. ನಾನು ಇವಳನ್ನು ಪತ್ನಿಯೆಂದು ಸ್ವೀಕರಿಸಲಿಕ್ಕೆ ಸಿದ್ಧನಾಗಿರುವೆನು."

ಮುಂಜರಾಜನ ಅಮೃತೋಪಮವಾದ ಮಾತುಗಳನ್ನು ಕೇಳಿ ಕುಸುಮಕುಮಾರಿಗೆ ಸ್ವರ್ಗೀಯವಾದ ಆನಂದವಾಯಿತು. ಆನಂದಾತಿರೇಕದಿಂದ ಉನ್ಮತ್ತಳಾದ ರಾಜಕುಮಾರಿಯು ಪತಿಯನ್ನು ಆಲಿಂಗಿಸಬೇಕೆಂದು ಮುಂದುವರಿದಳು; ಆದರೆ ಬಳಿಯಲ್ಲಿ ಪ್ರಭಾವತಿಯೂ, ಸರ್ವಾರ್ಥಸಿದ್ಧಿಯೂ ಇದ್ದುದರಿಂದ ಮನೋನಿಗ್ರಹ ಮಾಡಿಕೊಂಡು ಅಲ್ಲಿಯೆ ನಿಂತಳು. ಅನಂತರದಲ್ಲಿ ಅವಳು—"ನಾಥರೆ, ಈ ದೀನ ಅಬಲೆಯು ಇಂದು ದೈವಶಾಲಿನಿಯಾದಳು"

"ಕುಸುಮ, ನಾನು ನಿನ್ನನ್ನು ನೋಯಿಸಿದೆನು. ನನ್ನಿಂದ ಘಟಿಸಿದ ಅಪರಾಧವನ್ನು ಕ್ಷಮಿಸು."

"ಇದರಲ್ಲಿ ಅಪರಾಧವೇನು?" ಕುಸುಮಕುಮಾರಿಯು ಮಂದಹಾಸದಿಂದ ನುಡಿದಳು."

ಅನಂತರದಲ್ಲಿ ಮುಂಜರಾಜನು ಸರ್ವಾರ್ಥಸಿದ್ಧಿಯನ್ನು ಕುರಿತು—"ಈ ರಾಜಕುಮಾರಿಯನ್ನು ವರಿಸುವದರಿಂದ ನನ್ನ ಬಂಧವಿಮೋಚನೆಯಾಗುವದೆಂದು ವಿಶ್ವಾಸವಿಡಲಿಕ್ಕೆ ಮಾರ್ಗವಿಲ್ಲ ನಾನಾದರೂ ಯಾಚನೆ ಮಾಡಿಕೊಂಡಾಗಲಿ, ಕ್ಷಮೆಬೇಡಿಯಾಗಲಿ, ಶಿರಬಾಗಿಯಾಗಲಿ ಬಂಧಮುಕ್ತನಾಗಬೇಕೆಂದು ಇಚ್ಛಿಸುವದಿಲ್ಲ ನನ್ನಲ್ಲಿ ಕರ್ತವ್ಯಪ್ರಭಾವವಿರುತ್ತಿದ್ದರೆ ಹೇಗಾದರೂ ಪಾರಾಗುವೆನು. ನನ್ನ ಅನುಜನಾದ ಸಿಂಧುಲರಾಜನೂ, ಮಂತ್ರಿಯಾದ ರುದ್ರಾದಿತ್ಯನೂ, ಸೇನಾಪತಿಯಾದ ಕೀರ್ತಿಸಿಂಹನೂ ಶೂರರೂ ಸ್ವಾಭಿಮಾನಿಗಳೂ ಆಗಿದ್ದರೆ ನನ್ನನ್ನು ಪಾರಮಾಡುವರು. ನನ್ನ ಹಾಗು ನನ್ನ ಜನರ ಕಾರಸ್ಥಾನಗಳು ಈ ಕುಸುಮಕುಮಾರಿಗಾಗಲಿ ಅವಳ ದಾಸಿಯರಿಗಾಗಲಿ ನಿಮಗಾಗಲಿ ಗೊತ್ತಾಗುವ ಸಂಭವವುಂಟು. ನನಗೆ ನೀವೇ ಸ್ವಕೀಯರು. ನೀವೆಲ್ಲರೂ ನನ್ನ ಹಿತಚಿಂತಕರಾದರೆ ಒಳಿತಾಗುವದು. ಒಂದು

ವೇಳೆ ವಿಶ್ವಾಸಘಾತಕತನದ ಕೃತಿಗಳು ಘಟಿಸಿದರೆ ನನ್ನ ಪ್ರಾಣನಾಶದ ವರೆಗೆ ಪ್ರಸಂಗವೊದಗುವದೆಂದು ಖಂಡಿತವಾಗಿ ಹೇಳುವೆನು. ನೀವು ನನ್ನ ಹಾಗು ನನ್ನ ಜನರ ಕಾರಸ್ಥಾನಗಳನ್ನು ಗುಪ್ತವಾಗಿರಿಸುವವಲ್ಲದೆ, ಪ್ರಸಂಗವಿಶೇಷದಲ್ಲಿ ಕೈಲಾದ ಮಟ್ಟಿಗೆ ನೆರವಾಗುವೆವೆಂದು ಭಾಷೆಕೊಟ್ಟರೆ ಒಳಿತಾಗುವದು."

"ಮುಂಜರಾಜರೆ, ನಿಮಗೆ ಪರಕೀಯರು ಯಾರಿರುವರು? ಕುಸುಮಕುಮಾರಿಯವರಂತು ನಿಮ್ಮ ಸಹಧರ್ಮಚಾರಿಣಿಯರು. ಪ್ರಭಾವತಿಯು ಅವರ ಏಕನಿಷ್ಠ ದಾಸಿಯು. ನಾನಂತು ರಾಜಕುಮಾರಿಯವರ ಹಿತಚಿಂತನೆಗಾಗಿ ಹಗಲಿರುಳು ಭಗವಾನ್ ಶಾಕ್ಯಮುನಿಯನ್ನು ಸ್ಮರಿಸುವವಳು. ನಿಮಗೆ ಸುದಿನಗಳು ದೊರೆಯಬೇಕೆಂಬ ಉತ್ಕಟೇಚ್ಛೆಯುಳ್ಳವಳು. ಹೀಗಿದ್ದಮೇಲೆ ನಿಮ್ಮ ಕಾರಸ್ಥಾನಗಳನ್ನು ಬೈಲಿಗೆಳೆಯುವ ಕತ್ತು ಹರಕರು ಯಾರಿರುವರು? ನೀವು ಮನಸ್ಸಿನಲ್ಲಿ ಯಾವ ವಿಧದ ವಿಕಲ್ಪಭಾವನೆಗಳಿಗೆ ಇಂಬು ಗೊಡಬೇಡಿರಿ."

"ವಿವಾಹವಾದ ಮೇಲೆ ನನ್ನ ಅಣ್ಣಂದಿರು ತಮ್ಮ ಬಂಧವಿಮೋಚನೆ ಮಾಡಬಹುದು." ಎಂದು ಕುಸುಮಕುಮಾರಿಯು ಮುಂಜರಾಜನಿಗೆ ಹೇಳಿದಳು.

"ರಾಜಕುಮಾರಿ," ಮುಂಜರಾಜನು ಸಂತಾಪದಿಂದ:—"ನಿನ್ನ ಅಣ್ಣನು ಕರ್ತವ್ಯ ನಿಷ್ಠುರನಿರುವನು. ಅವನು ಕರ್ತವ್ಯಕ್ಕಾಗಿ ನನ್ನ ಹಾಗು ನಿನ್ನ ಕೊಲೆಗೊಳಿಸಲು ಹಿಂದೆ ಮುಂದೆ ನೋಡುವದಿಲ್ಲ. ಇಂತಹ ಕಠೋರ ಕರ್ಮಿಗಳನ್ನು ನಾನು ಇದು ವರೆಗೆ ಎಲ್ಲಿಯೂ ನೋಡಿಲ್ಲ."

"ಮಹಾರಾಜರು ರಾಷ್ಟ್ರಧರ್ಮನಿರತರೂ ರಾಜಕಾರಣಪಟುಗಳೂ ಇರುವದರಿಂದ ಪ್ರಸಂಗವಶದಲ್ಲಿ ಅವರಿಗೆ ಎಂತಹ ಕಟುಕರ್ತವ್ಯಗಳನ್ನಾದರೂ ಮಾಡುವ ಪ್ರಸಂಗವೊದಗುವದು. ಹಿಂದಕ್ಕೆ ಪಾಂಚಾಲದೇವನನ್ನು ಅವರು ಒಳ್ಳೆಯ ನಿಷ್ಠುರತನದಿಂದ ಕೊಲೆಮಾಡಿಸಿದರು. ರಾಜಧರ್ಮವೇ ಅಂತಹದಿರುವದು. ನೀವಾದರೂ ಪ್ರಸಂಗವಶಾತ್ ನಿಷ್ಠುರಕರ್ಮಾಚರಣೆ ಮಾಡುವವರೇ." ಎಂದು ಸರ್ವಾರ್ಥಸಿದ್ಧಿಯು ನುಡಿದು—"ಅನುಷ್ಠಾನದ ವೇಳೆಯಾಯಿತು. ಧರ್ಮಘೋಷರು ನನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರಬಹುದು. ನಾನು ಬರುತ್ತೇನೆ."

ಮುಂಜರಾಜನ ಹಾಗು ಕುಸುಮಕುಮಾರಿಯ ಅಪ್ಪಣೆ ಪಡೆದು ಸರ್ವಾರ್ಥಸಿದ್ಧಿಯು ಬೌದ್ಧವಿಹಾರಕ್ಕೆ ಹೊರಟಳು. ಅನಂತರವಲ್ಲಿ ಕುಸುಮಕುಮಾರಿಯು ಮುಂಜರಾಜನನ್ನು ಕುರಿತು:—"ನಾಳೆನಿಂದ ಅಧ್ಯಯನಕ್ಕೆ ಪ್ರಾರಂಭವೆ?"

"ಇಂದಿನಿಂದಲೆ ಪ್ರಾರಂಭವಾದಂತಾಯಿತಲ್ಲ?" ಮುಂಜರಾಜನು ನಗುತ್ತ ನಗುತ್ತ—"ನನ್ನ ಸನ್ನಿಧಿಯಿಂದ ನಿನ್ನನ್ನು ತಳ್ಳಲಿಕ್ಕೆ ಮಾರ್ಗವಿಲ್ಲದಾದ ಮೇಲೆ ಶಿಕ್ಷಣಕ್ಕೆ ಪ್ರಾರಂಭವಾಯಿತೆಂದು ಹೇಳಲಿಕ್ಕೆ ಅಡ್ಡಿಯೇನು? ಈ ಪರಮಾರ ಮಹಾರಾಜನು ವಿದ್ವತ್ತೆಯಲ್ಲಿ ಅಗ್ರಗಣ್ಯನಾದ್ದರಿಂದ ವಾಕ್ಪತಿಯೆಂಬ ಪದವಿಯನ್ನು ಹೊಂದಿರುವನು. ಅವನು ತನ್ನ ಅರ್ಧಾಂಗಿಯನ್ನು ವಿದುಷಿಯನ್ನಾಗಿ ಮಾಡ

ದಿರುವನೆ?''

"ಆಗಬಹುದು." ಎಂದು ನಸುನಗುತ್ತ ಕುಸುಮಕುಮಾರಿಯು ನುಡಿದು, ಪ್ರಭಾವತಿಯೊಡನೆ ತನ್ನ ಮಂದಿರಕ್ಕೆ ಬಂದಳು. ಅಷ್ಟು ಹೊತ್ತಿಗೆ ಮಹಾರಾಜ್ಞೀ ಜಾಕಲದೇವಿಯು ಅಲ್ಲಿಗೆ ಬಂದಿದ್ದಳು. ಆಗ ಅವಳು ಕುಸುಮಕುಮಾರಿಯನ್ನು ಕುರಿತು—"ಕುಸುಮಕುಮಾರಿದೇವಿ, ಪ್ರಮೋದಮಂದಿರವು ನಿಮ್ಮನ್ನು ಗಟ್ಟಿಯಾಗಿ ಹಿಡಿದಿತ್ತೇನು? ನಾನು ಇಲ್ಲಿಗೆ ಬಂದು ಎರಡು ಗಳಿಗೆಗಳಾದವು. ನಿಮ್ಮ ದಾರೀ ನೋಡಿ ಬೇಸತ್ತೆನು."

"ಮಹಾರಾಜ್ಞಿಯವರೆ, ಅಷ್ಟೇಕೆ ದಾರೀ ನೋಡಿದಿರಿ? ನಾನು ಪ್ರಮೋದ ಮಂದಿರಕ್ಕೆ ಹೋಗಿ ಬಹಳ ವೇಳೆಯಾಗಿಲ್ಲ."

"ನಿಮಗೆ ವೇಳೆಯಾದದ್ದು ತಿಳಿದಿರಲಿಕ್ಕಿಲ್ಲ. ಹೇಗೆ ತಿಳಿಯಬೇಕು? ಅದಿರಲಿ; ವರವೋ, ಶಾಪವೊ?" ಎಂದು ಕುಸುಮಕುಮಾರಿಗೆ ಜಾಕಲದೇವಿಯು ಪ್ರಶ್ನಮಾಡಿ ಅವಳ ಉತ್ತರ ನಿರೀಕ್ಷಣೆ ಮಾಡತೊಡಗಿದಳು. ಕುಸುಮಕುಮಾರಿಯು ಮುಖ ಬಾಗಿ ಕುಳಿತುಕೊಂಡುಬಿಟ್ಟಳು. ಅವಳಿಂದ ಮಾತುಗಳೇ ಹೊರಡಲಿಲ್ಲ. ಆಗ ಜಾಕಲದೇವಿಯು—"ನಿಮ್ಮ ಮುಖದ ಮೇಲೆ ವಿಜಯದ ಪತಾಕೆಯು ಉತ್ಥಾಣ ಮಾಡುತ್ತಿರುವದು. ನೀವು ಜಯಶಾಲಿನಿಯಾಗಿರುವಿರೆಂದು ನಾನು ಖಂಡಿತವಾಗಿ ತಿಳಿದೆನು." ಎಂದು ನುಡಿದು, ಪ್ರಭಾವತಿಯನ್ನು ಕುರಿತು:—"ಪ್ರಭೆ, ನನ್ನ ತರ್ಕವು ನಿಜವಷ್ಟೆ?"

"ಮಹಾರಾಜ್ಞಿಯವರೆ, ಮದುವೆಯ ಹೋಳಿಗೆಗಾಗಿ ಈ ದಾಸಿಯು ಹಾರೈಸಿ ಕೊಂಡು ಕುಳಿತಿರುವಳು."

"ಬೇಗನೆ ಮದುವೆಯನ್ನು ಹಮ್ಮಬೇಕೆಂದು ಹಂಸನಾಯಕನಿಗೆ ತಿಳಿಸು ವೆನು." ಕುಸುಮಕುಮಾರಿಯು ನಗುತ್ತ ನುಡಿದಳು. ಆಗ ಪ್ರಭಾವತಿಯು— "ದೇವಿ, ಸ್ವಂತದ ಮದುವೆಯಲ್ಲಿ ಪಕ್ವಾನ್ನಗಳ ರುಚಿ ತಿಳಿಯುವದಿಲ್ಲ. ಪರಕೀಯರ-ಅದರಲ್ಲಿ ನಿಮ್ಮಂತಹ ದೊಡ್ಡವರ-ಮದುವೆಯ ಊಟವು ಬಲು ಸೊಗಸು."

"ಆಗಲಿ. ಇಬ್ಬರ ಮದುವೆಗಳೂ ಒಮ್ಮೆಲೆ ನೆರವೇರಬಹುದು." ಎಂದು ಜಾಕಲದೇವಿಯು ನುಡಿದು—"ರಾಜಕುಮಾರಿಯವರೆ, ಮಹಾರಾಜರು ಸುವಾರ್ತೆ ಯನ್ನು ಕೇಳುವದಕ್ಕಾಗಿ ಆತುರಗೊಂಡು ಕುಳಿತಿರುವರು. ಅತ್ತೆಯವರಾದರೂ ಶುಭವನ್ನು ಕೇಳುವ ಕುತೂಹಲವುಳ್ಳವರಾಗಿರುವರು. ನೀವು ಅರಮನೆಗೆ ಬರು ವಿರಾ?"

"ಅತ್ತಿಗೆಯವರೆ, ನನ್ನ ಮುಖದಿಂದ ಹೊರಟ ಮಾತುಗಳಲ್ಲಿ ಅಷ್ಟೊಂದು ಸ್ವಾರಸ್ಯವಿರುವದೇನು? ನೀವು ಹೇಳುವ ಮಾತಿನಲ್ಲಿ ಅಣ್ಣಂದಿರ ಹಾಗು ಅಮ್ಮನವರ ವಿಶ್ವಾಸವು ಹುಟ್ಟದಂತಿದ್ದರೆ ನಾನೇ ಬರುವೆನು."

ಜಾಕಲದೇವಿಯೊಡನೆ ಕುಸುಮಕುಮಾರಿಯು ಅರಮನೆಗೆ ಹೋಗಲಿಲ್ಲ.

ಅವಳು ಪ್ರಭಾವತಿಯನ್ನು ಸಂಗಡ ಕರೆದೊಯ್ದಳು.

ಮುಂಜರಾಜನು ಕುಸುಮಕುಮಾರಿಯನ್ನು ವರಿಸಲೊಪ್ಪಿದ ಸಂಗತಿಯನ್ನು ಕೇಳಿ ಮಹಾರಾಜನಿಗೂ ರಾಜಪರಿವಾರಕ್ಕೂ ಮಹದಾನಂದವಾಯಿತು.

ವಿವಾಹ ಮೂರ್ತವು ನಿರ್ಧರಿಸಲ್ಪಟ್ಟಿತು. ಮಾನ್ಯಖೇಟ ರಾಜಧಾನಿಯೂ ಅರಮನೆಯೂ ಪ್ರಮೋದಮಂದಿರವೂ ಶೃಂಗರಿಸಲ್ಪಟ್ಟವು. ವಿವಾಹವು ಪ್ರಮೋದ ಮಂದಿರದಲ್ಲಿಯೆ ಅತ್ಯಂತ ವಿಜೃಂಭಣೆಯಿಂದ ನೆರವೇರಿತು.

ಭಟಭಿಕ್ಷುಗಳು ದಕ್ಷಿಣೆ ಮಿಷ್ಟಾನ್ನ ಭೋಜನಗಳಿಂದ ಸಂತುಷ್ಟರಾದರು. ನಾನಾದೇಶಗಳಿಂದ ವಿದ್ವಾಂಸರು ಬಂದಿದ್ದರು. ಅವರಿಗೆ ತಕ್ಕ ಸಂಭಾವನೆಗಳು ಕೊಡಲ್ಪಟ್ಟವು. ಕರ್ನಾಟಕ ಸಮ್ರಾಟನ ಮನೆಯ ವಿವಾಹದ ವೈಭವವನ್ನು ಬಣ್ಣಿಸುವದು ಸಾಧ್ಯವೆ?

---

## ಗುಪ್ತ ಕಾರಸ್ಥಾನ.

ಮಾಳವ ಕೇಸರಿಯಾದ ಮುಂಜರಾಜನು ಮಾನ್ಯಖೇಟದಲ್ಲಿ ಕಾರಾಗೃಹ ವಾಸಿಯಾದ ಬಳಿಕ ಅವನ ಬಂಧುವಾದ ಸಿಂಧುರಾಜನು † ಮಾಳವ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡನು. ಸಿಂಧುರಾಜನು ತನ್ನ ಅಣ್ಣನಂತೆ ಶೂರನೂ ಸಾಹಸಿಯೂ ರಾಜಕಾರಣಪಟುವೂ ಆಗಿದ್ದನು. ಅವನು 'ನವಸಾಹಸಾಂಕ' ಎಂಬ ಬಿರುದನ್ನು ಧರಿಸಿದ್ದನು. ಮುಂಜರಾಜನು ದಂಡಯಾತ್ರೆಗೆ ತೆರಳಿದಾಗ ಸಿಂಧುರಾಜನೇ ರಾಜ್ಯಭಾರವನ್ನು ವಹಿಸುತ್ತಿದ್ದನು. ಮುಂಜರಾಜನು ಸೆರೆಮನೆಯಿಂದ ಪಾರಾಗಿ ಬರುವದು ಅಸಾಧ್ಯವೆಂದು ಮಾಳವ ರಾಜಪರಿವಾರಕ್ಕೆ ತಿಳಿದದ್ದರಿಂದ ಅವರು ಸಿಂಧುರಾಜನಿಗೆ ಪಟ್ಟಾಭಿಷೇಕ ಮಾಡಿಸಬೇಕೆಂದು ಯತ್ನಿಸಿದ್ದರು. ಅಣ್ಣನು ಜೀವಂತವಿರುವಾಗ ರಾಜ್ಯಾಭಿಷೇಕ ಮಾಡಿಸಿಕೊಳ್ಳುವದು ಅಯೋಗ್ಯವೆಂದು ತಿಳಿದು

---

† ಮುಂಜರಾಜನು ಸಿಂಧುವಿನಿಗಿಂತ ಚಿಕ್ಕವನೆಂದೂ, ಅವನು ಸಿಂಧುರಾಜನ ತರುವಾಯ ಅವನ ಮಗನಾದ ಭೋಜರಾಜನನ್ನು ಕೊಲೆಮಾಡಿಸಲುದ್ಯುಕ್ತನಾದನೆಂದೂ ಭೋಜಪ್ರಬಂಧ ಮೇರುತುಂಗಾಚಾರ್ಯನ ಪ್ರಬಂಧಚಿಂತಾಮಣಿ, ರಾಜಶೇಖರಸೂರಿಯ ಪ್ರಬಂಧಕೋಶ ಮೊದಲಾದ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿದೆ. ಈ ಸಂಗತಿಯು ನಿರಾಧಾರವಾದದ್ದಿರುದದು. ಮುಂಜರಾಜನ ತರುವಾಯ ಅವನ ಬಂದುವಾದ ಸಿಂಧುರಾಜನು ಪಟ್ಟಾಭಿಷಿಕ್ತನಾದನೆಂದೂ ಅವನ ತರುವಾಯ ಭೋಜರಾಜನು ರಾಜ್ಯಾಧಿಕಾರಿಯಾದನೆಂದೂ 'ನವಸಾಹಸಾಂಕರಾಯ ಚರಿತ ಕಾವ್ಯ' ಹಾಗು 'ಎಪಿಗ್ರಾಫಿಯಾ ಇಂಡಿಕಾ' ಪ್ಪಾ ಪುಟ ೧೮೩-೨೮ರ ವರೆಗೆ ಪರಮಾರವಂಶೀಯ ಭೋಜರಾಜನ ತರುವಾಯ ಮೂರನೆಯವನಾದ ನರವರ್ಮದೇವನು ಕಟ್ಟಿಸಿದ ಮಂದಿರದ ಪ್ರಶಸ್ತಿಯು ಪ್ರಸಿದ್ಧವಾಗಿರುವದು. ಅದರೊಳಗಿನ ೨೬ ಮತ್ತು ೩೯ನೆಯ ಶ್ಲೋಕಗಳನ್ನು ನೋಡಿದರೆ ಮೇಲಿನ ಗ್ರಂಥಗಳ ವಿಧಾನವು ನಿರಾಧಾರವಾದದ್ದೆಂದು ಸಿದ್ಧವಾಗುವದು.

ಸಿಂಧುರಾಜನು ಅವರ ಮಾತಿಗೆ ಒಪ್ಪದೆ, ರಾಜಪ್ರತಿನಿಧಿಯಾಗಿ ರಾಜ್ಯಕಾರ್ಯವನ್ನು ಸಾಗಿಸಿದನು. ಮುಂಜರಾಜನ ಮುಕ್ತತೆಯಾಗುವದು ಅಸಾಧ್ಯವೆಂದು ಸಿಂಧುರಾಜನು ತಿಳಿದುಕೊಂಡಿದ್ದರೂ, ಯುಕ್ತಿಪ್ರಯುಕ್ತಿಗಳಿಂದ ಆ ಕಾರ್ಯವನ್ನು ಸಾಧಿಸುವದಕ್ಕಾಗಿ ಯತ್ನಿಸತೊಡಗಿದ್ದನು. ಅವನು ತನ್ನ ಮಂತ್ರಿಗಳಾದ ರುದ್ರಾದಿತ್ಯನ ಹಾಗು ರಮಾಂಗದನ ಆಲೋಚನೆಯಂತೆ ನಡೆಯುತ್ತಿದ್ದನು. ಈ ಮಂತ್ರಿಗಳು ಧೂರ್ತರಿದ್ದುದರಿಂದ ಮುಂಜರಾಜನ ಬಂಧವಿಮೋಚನೆಯ ಕಾರ್ಯದಲ್ಲಿ ಯೋಗ್ಯವಾದ ನೆರವು ದೊರೆಯುವದೆಂದು ಸಿಂಧುರಾಜನ ವಿಶ್ವಾಸವಿತ್ತು.

ರಮಾಂಗದನಿಗಿಂತ ರುದ್ರಾದಿತ್ಯನು ಹೆಚ್ಚಿನ ರಾಜಕಾರಣಪಟುವೂ ಕರ್ತವ್ಯನಿಷ್ಠನೂ ಆಗಿದ್ದನು. ಯುಕ್ತಿಪ್ರಯುಕ್ತಿಗಳಿಂದ ಮುಂಜರಾಜನನ್ನು ಬಂಧನೆಯಿಂದ ಪಾರಮಾಡಬೇಕೆಂದು ಅವನು ಕಾರಸ್ಥಾನ ನಡೆಯಿಸಿದ್ದನು. ಕರ್ನಾಟಕದ ಮೇಲೆ ದಂಡೆತ್ತಿ ಹೋಗಕೂಡದೆಂದು ಬಹುಪರಿಯಾಗಿ ಬೇಡಿಕೊಂಡರೂ, ಅವಿಚಾರಿಯಾದ ಮುಂಜರಾಜನು ತನ್ನ ಮಾತುಗಳನ್ನು ಉಪೇಕ್ಷಿಸಿ ಗಂಡಾಂತರಕ್ಕೊಳಗಾದನೆಂದು ಅವನು ಬಹಳೇ ವ್ಯಸನಬಡುತ್ತಿದ್ದನು. ಗತಗೋಷ್ಟಿಯ ಬಗ್ಗೆ ಮನಸ್ಸಿಗೆ ಹಚ್ಚಿಕೊಂಡು ಕೈಕಾಲುಗೆಟ್ಟು ಕುಳಿತುಕೊಳ್ಳುವ ಹೇಡಿಗಳ ಮಾಲಿಕೆಯೊಳಗಿನವನು ರುದ್ರಾದಿತ್ಯನಿರಲಿಲ್ಲ. ಅವನು ಅತ್ಯಂತ ಕರ್ತವ್ಯರತನು. ಸರ್ವಾರ್ಥಸಿದ್ಧಿ ಧರ್ಮಘೋಷರೂ ಮುಂಜರಾಜನಿಗೆ ಅನುಕೂಲರಿದ್ದ ಸಂಗತಿಯನ್ನು ಅವನು ತಿಳಿದಿದ್ದನು. ಮಾನ್ಯಖೇಟದ ವರ್ತಮಾನವನ್ನು ತಿಳಿದುಕೊಂಡು ಬರುವದಕ್ಕಾಗಿ ರುದ್ರಾದಿತ್ಯನು ಶಂಭುವೆಂಬ ಗುಪ್ತಚರನನ್ನು ಅಲ್ಲಿಗೆ ಕಳುಹಿಸಿದ್ದನು. ಶಂಭುವು ಬೌದ್ಧವಿಹಾರಕ್ಕೆ ಹೋಗಿ ಧರ್ಮಘೋಷವನ್ನೂ ಸರ್ವಾರ್ಥಸಿದ್ಧಿಯನ್ನೂ ಕಂಡು, ಮುಂಜರಾಜನ ವಿಷಯದ ಎಲ್ಲ ಸಂಗತಿಗಳನ್ನು ತಿಳಿದುಕೊಂಡು ಮರಳಿ ಧಾರಾನಗರಿಗೆ ಬಂದನು. ಮುಂಜರಾಜನು ಕುಸುಮಕುಮಾರಿಯೊಡನೆ ವಿವಾಹವಾಗಿ ತಲ್ಲೀನತೆ ಹೊಂದಿರುವನೆಂದೂ, ಅವನಿಗೆ ಧಾರಾನಗರಿಯ ನೆನಪುಸಹ ಉಳಿಯದಂತಾಗಿರುವದೆಂದೂ ಶಂಭುವು ಸುದ್ದಿ ತಂದನು. ಈ ಸಂಗತಿಯನ್ನು ಕೇಳಿ ರುದ್ರಾದಿತ್ಯನು ಅತಿಯಾಗಿ ಕ್ಲೇಶಗೊಂಡನು. ಹೇಗಾದರೂ ಮಾಡಿ ಮುಂಜರಾಜನನ್ನು ಸೆರೆಮನೆಯಿಂದ ಪಾರಮಾಡದಿದ್ದರೆ ಮಾಳವೇಯರ ಗೌರವವು ಉಳಿಯುವದಿಲ್ಲನೆಂದು ಅವನು ಭಾವಿಸಿದನು. ಕೂಡಲೆ ಅವನು ಸಿಂಧುರಾಜನಿಂದ ಕೆಲವು ಸೈನಿಕರನ್ನು ತೆಗೆದುಕೊಂಡು ಉಪಮಂತ್ರಿಯಾದ ಧನಪತಿಯನ್ನೂ ಗುಪ್ತಚರನಾದ ಶಂಭುವನ್ನು ಸಂಗಡ ಕರೆದುಕೊಂಡು ಮಾನ್ಯಖೇಟದ ದಾರಿ ಹಿಡಿದನು. ರುದ್ರಾದಿತ್ಯನೂ ಅವನ ಸೈನಿಕರೂ ಸಂತವೇಷದಿಂದ ಮಾರ್ಗಕ್ರಮಣ ಮಾಡತೊಡಗಿದ್ದರು. ಮಾಳವದ ಸೀಮಾಂತರವನ್ನು ದಾಟಿದ ಕೂಡಲೆ ಅವರು ಬೇರೆ-ಬೇರೆ ದಾರಿಗಳಿಂದ ಮಾನ್ಯಖೇಟಕ್ಕೆ ತೆರಳಿದರು.

ರುದ್ರಾದಿತ್ಯನು ಶಂಭು ಹಾಗು ಕೆಲವು ಅನುಚರರು ಮೊದಲಾದವರೊಡನೆ

ಮಾನ್ಯಖೇಟದಲ್ಲಿದ್ದ ಬೌದ್ಧವಿಹಾರಕ್ಕೆ ಬಂದರು. ಆಗ ರುದ್ರಾದಿತ್ಯನು ತನ್ನ ಆಗ ಮನದ ಕಾರಣವನ್ನು ಸರ್ವಾರ್ಥಸಿದ್ಧಿ ಧರ್ಮಘೋಷರಿಗೆ ತಿಳಿಸಿದನು. ಯಾವ ವಿಧದ ಕಾರಸ್ಥಾನದಿಂದ ಮುಂಜರಾಜನನ್ನು ಪಾರಮಾಡಲಿಕ್ಕೆ ಸಾಧ್ಯವಾಗುವದೆಂಬದರ ಬಗ್ಗೆ ಎಲ್ಲರೂ ಬಹಳ ಹೇಳಿಯ ವರೆಗೆ ವಿಚಾರಿಸಿದರು. ಕೆಲವು ವೇಳೆ ವಾದವಿವಾದ ನಡೆದ ಮೇಲೆ ರುದ್ರಾದಿತ್ಯನು—“ಧರ್ಮಘೋಷರೆ, ಮುಂಜಮಹಾರಾಜರನ್ನು ಬಂಧವಿಮೋಚನೆಗೊಳಿಸಲಿಕ್ಕೆ ಎರಡು ಮಾರ್ಗಗಳಿರುವವು. ಕಾವಲುಗಾರನಾದ ಹಂಸನಾಯಕನನ್ನು ಒಡೆದುಕೊಂಡರೆ ಕಾರ್ಯವು ಸುಲಭಸಾಧ್ಯವಾಗುವದು. ಅದಾಗದಿದ್ದರೆ ನೆಲಮಾರ್ಗ ಮಾಡಿಸಿ ಕಾರ್ಯಸಾಧನೆ ಮಾಡಿಕೊಳ್ಳುವದು ಎರಡನೆಯ ಉಪಾಯವಾಗಿರುವದು ”

ರುದ್ರಾದಿತ್ಯನ ಮಾತುಗಳನ್ನು ಕೇಳಿ ಧರ್ಮಘೋಷನೂ ಸರ್ವಾರ್ಥಸಿದ್ಧಿಯೂ ವಿಸ್ಮಿತರಾದರು. ಮಂತ್ರಿಯು ಹೇಳಿದ ಎರಡೂ ಯತ್ನಗಳು ಅದ್ಭುತವಾದವುಗಳಿದ್ದವು. ಇಂತಹ ಭಯಂಕರವಾದ ಕಾರಸ್ಥಾನದಲ್ಲಿ ತೊಡಗಿದರೆ ತಮ್ಮ ಮೇಲೆ ರಾಜಕ್ಷೋಭೆಯಾಗುವದೆಂದು ಅವರು ಭಯಚಕಿತರಾದರು. ಆಗ ಧರ್ಮಘೋಷನು—“ಮಂತ್ರಿಗಳೆ, ನೀವು ಹೇಳಿದ ಎರಡೂ ಉಪಾಯಗಳು ಬಹಳೇ ಭಯಂಕರವಾದವುಗಳಾಗಿರುವವು. ಕಾವಲುಗಾರರನ್ನು ಒಡೆದುಕೊಳ್ಳುವದು ಇಲ್ಲವೆ ನೆಲಮಾರ್ಗ ಮಾಡುವದು ರಾಜಕೀಯ ದೃಷ್ಟಿಯಿಂದ ದೊಡ್ಡ ಅಪರಾಧಗಳಾಗಿರುವವು. ಇಂತಹ ರಾಜಕಾರಣದಲ್ಲಿ ನಾವು ತೊಡಗಿಕೊಂಡಿರುವದು ಮಹಾರಾಜರಿಗೆ ತಿಳಿದರೆ ನಮ್ಮ ಗತಿಯೇನಾದೀತೆಂಬದನ್ನು ವಿಚಾರಿಸಿರಿ. ಶುದ್ಧವಾದ ಸೌಗತಧರ್ಮದಲ್ಲಿ, ಮುಂಜರಾಜರ ಪ್ರೇಮವಿದ್ದುದರಿಂದಲೂ ಅವರು ಆ ಧರ್ಮದ ಅಭ್ಯುದಯಕ್ಕಾಗಿ ಯತ್ನಿಸುವರೆಂಬ ಚಿಹ್ನವು ತೋರಿದ್ದರಿಂದಲೂ ನಮ್ಮ ಶೀಲಕ್ಕೆ ಬಾಧಬಾರದಂತಹ ಸಹಾಯ ಮಾಡುವ ಮನಸು ಮಾಡಿದ್ದೆವು, ಆದರೆ ಸದ್ಯದ ಪ್ರಸಂಗವು ನಮ್ಮ ಕಲ್ಪನೆಗಿಂತ ಹೆಚ್ಚಿನ ರಾಜಕಾರಸ್ಥಾನವಿದ್ದುರುವದರಿಂದ ಈ ಕಾರ್ಯದಲ್ಲಿ ತೊಡಗುವದು ಅನಿಷ್ಟವೆಂದು ತೋರಲಾರಂಭಿಸಿದೆ.”

“ಧರ್ಮಘೋಷರೆ, ಇದಾವ ದೊಡ್ಡ ಕಾರ್ಯವೆಂದು ಇಷ್ಟು ಅಂಜುವಿರಿ? ನಿಮ್ಮ ಕೂದಲು ಕೊಂಕದಂತೆ ನಾನು ಕಾರಸ್ಥಾನ ರಚಿಸುವೆನು. ಸಾಧುಗಳಾದ ನಿಮ್ಮ ಮೇಲೆ ಗಂಡಾಂತರ ಬರುವಂತೆ ಮಾಡಿದರೆ ನನ್ನ ಕೀರ್ತಿಗೆ ಕಲಂಕವಾದೀತು. ”

ರುದ್ರಾದಿತ್ಯನ ಈ ಮಾತುಗಳಿಂದ ಧರ್ಮಘೋಷನ ಮನಸ್ಸಿಗೆ ಅಲ್ಪಸ್ವಲ್ಪ ಸಮಾಧಾನವುಂಟಾಯಿತು. ಆದರೆ ಬೌದ್ಧತಾಪಸಿಯಾದ ಸರ್ವಾರ್ಥಸಿದ್ಧಿಯು ಮಾತ್ರ ಅವನ ಮಾತಿಗೆ ಒಪ್ಪಲಿಲ್ಲ. ಆಗ ಅವಳು—“ಮಂತ್ರಿಗಳೆ, ನಾನು ಕುಸುಮಕುಮಾರಿಯ ವಿಷಯವಾಗಿ ಬಹಳೇ ಮಮತೆಯುಳ್ಳವಳಿರುವದರಿಂದ ಮುಂಜಮಹಾರಾಜರು ಬಂಧನೆಯಿಂದ ಪಾರಾಗಬೇಕೆಂದು ಇಚ್ಛಿಸುತ್ತಿರುವನು. ಮೇಲಾಗಿ

ಬೌದ್ಧ ಧರ್ಮದ ಅಭ್ಯುದಯಕ್ಕಾಗಿ ಮುಂಜರಾಜರು ಯತ್ನಿಸುವ ಬಗ್ಗೆ ಅಭಿವಚನವನ್ನಿತ್ತಿರುವರು. ಹೀಗಿದ್ದ ಮೇಲೆ ಅವರ ಮುಕ್ತತೆಗಾಗಿ ಸಹಾಯ ಮಾಡದೆ ಸ್ವಸ್ಥವಾಗಿ ಕುಳಿತುಕೊಳ್ಳುವೆವೆ? ಆದರೆ ನೀವು ಹೇಳುತ್ತಿರುವ ಉಪಾಯವು ಮಾತ್ರ ಬಹಳೇ ಭಯಂಕರವಾದದ್ದಾಗಿರುವದು. ನೀವು ನಮ್ಮ ಮೇಲೆ ಗಂಡಾಂತರ ಬೊದಗದಂತೆ ಯತ್ನಿಸುವೆವೆಂದು ಹೇಳುತ್ತಿರುವಿರಿ, ಆದರೆ ಪ್ರಸಂಗಗಳು ಹೇಳಿ-ಕೇಳಿ ಬರುವದಿಲ್ಲ. ಕಾವಲುಗಾರರ ಒಡೆಯನಾದ ಹಂಸನಾಯಕನೂ, ಗುಪ್ತಚರರ ಅಧಿಪತಿಯಾದ ದುರ್ಗನಾಥನೂ ಅತ್ಯಂತ ಸ್ವಾಮಿನಿಷ್ಠರಿರುವರು. ರಾಜಕಾರಸ್ಥಾನದಲ್ಲಿ ಅವರು ನೈಪುಣ್ಯವನ್ನು ಹೊಂದಿದವರಾಗಿರುವರು. ಅಂದ ಮೇಲೆ ನಿಮ್ಮ ಹಂಚಿಕೆಯು ಕೊನೆಗಾಣುವದೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ನಿಮ್ಮ ಕಾರಸ್ಥಾನವು ಬೈಲಿಗೆ ಬಿದ್ದರೆ ಸರ್ವಸಂಗ ಪರಿತ್ಯಾಗ ಮಾಡಿದ ನಾವು ರಾಜಕ್ರೋಧೆಗೆ ಗುರಿಯಾಗಬೇಕಾಗುವದು. ನೀವು ನಮ್ಮ ಸಂಬಂಧವಿಲ್ಲದಹಾಗೆ ಇದ್ದು ಬೇಕಾದ ಕಾರಸ್ಥಾನ ರಚಿಸಿರಿ. ನಿಮ್ಮ ವ್ಯೂಹದಲ್ಲಿ ಭಾಗತೆಗೆದುಕೊಳ್ಳಲಿಕ್ಕೆ ನಮಗೆ ಭಯವಾಗುತ್ತಲಿರುವದು."

"ಬುದ್ಧೋಪಾಸಿಕೆ," ರುದ್ರಾದಿತ್ಯನು ವಿನಯದಿಂದ—"ನೀವು ಹೀಗೆ ನಡುನೀರಲ್ಲಿ ಕೈಬಿಟ್ಟರೆ ನಮ್ಮ ಗತಿಯೇನು? ಬೌದ್ಧಧರ್ಮದ ಉದ್ಧಾರಕ್ಕಾಗಿ ಯತ್ನಿಸುವ ಮುಂಜಮಹಾರಾಜರು ಸೆರೆಮನೆಯಲ್ಲಿ ಕೊಳೆಯಬೇಕೆಂದು ನಿಮ್ಮ ಇಚ್ಛೆಯಿದ್ದರೆ ಅದಕ್ಕೆ ಉಪಾಯವಿಲ್ಲ. ಭಗವಾನ್ ಶಾಕ್ಯಸಿಂಹನನ್ನು ಸ್ಮರಿಸಿ ನಾನು ಹೇಳುವದೇನಂದರೆ, ನಾನು ನಡೆಯಿಸಬೇಕೆಂದಿರುವ ಕಾರಸ್ಥಾನದಲ್ಲಿ ನಿಮಗೆ ಕೇಡುಂಟಾಗದಂತೆ ನಾನು ತತ್ಪರನಾಗಿರುವೆನು. ಬೌದ್ಧಧರ್ಮಾನುಯಾಯಿಯಾಗಬೇಕೆನ್ನುವ ಮುಂಜಮಹಾರಾಜರು ಸೆರೆಯಲ್ಲಿಯೇ ನವೆಯಬೇಕೆಂದು ನಿಮ್ಮ ಇಚ್ಛೆಯಿದ್ದರೆ ನೀವು ನಮ್ಮ ಕಾರಸ್ಥಾನದಲ್ಲಿ ಭಾಗತೆಗೆದುಕೊಳ್ಳಬೇಡಿರಿ. ಧರ್ಮಾಭ್ಯುದಯದಕ್ಕಾಗಿ ನೀವು ಸ್ವಾರ್ಥತ್ಯಾಗ ಮಾಡದಿದ್ದರೆ ಭಗವಾನ್ ಶಾಕ್ಯದೇವನ ಅನುಗ್ರಹಕ್ಕೆ ಹೇಗೆ ಪಾತ್ರರಾಗುವಿರಿ?"

ರುದ್ರಾದಿತ್ಯನು ಹೀಗೆ ಮಾತಾಡಿದ ಕೂಡಲೆ ಧರ್ಮಘೋಷನ ಮನಸ್ಸು ವಿಪರ್ಯಾಸಹೊಂದಿತು. ಧರ್ಮಾಭ್ಯುದಯಕ್ಕಾಗಿ ಯತ್ನಿಸುವ ಮುಂಜರಾಜನನ್ನು ಮುಕ್ತಗೊಳಿಸುವ ಕಾರಸ್ಥಾನದಲ್ಲಿ ಭಾಗತೆಗೆದುಕೊಳ್ಳುವದು ತಮ್ಮ ಕರ್ತವ್ಯವೆಂದು ಅವನು ಬಗೆದನು. ಆಗ ಅವನು ಸರ್ವಾರ್ಥಸಿದ್ಧಿಯನ್ನು ಕುರಿತು—ತಾಪಸಿಯವರೆ, ಬುದ್ಧೋಪಾಸಕರ ಬಂಧವಿಮೋಚನೆಗಾಗಿ ಯತ್ನಿಸಿದರೆ ಪಾಪ ಬರುವದಿಲ್ಲ. ಮುಂಜಮಹಾರಾಜರ ಮುಕ್ತತೆಗಾಗಿ ಯತ್ನಿಸುವದಕ್ಕೆ ನಾವು ಸ್ವಾರ್ಥತ್ಯಾಗವನ್ನಷ್ಟೇ ಏಕೆ? ಆತ್ಮತ್ಯಾಗವನ್ನಾದರೂ ಮಾಡಲಿಕ್ಕೆ ಬೇಕು" ಎಂದು ನುಡಿದು, ಅವನು ರುದ್ರಾದಿತ್ಯನನ್ನು ಕುರಿತು—"ಮಹಾಮಂತ್ರಿಗಳೆ, ನೀವು ನಡೆಯಿಸಬೇಕೆಂದಿರುವ ಕಾರಸ್ಥಾನದಲ್ಲಿ ನಾವು ನಮ್ಮ ಶಕ್ತಿಮೀರಿ ಸಹಾಯ ಮಾಡುವೆವು.

ಯಾವ ಉಪಾಯವು ಸುಲಭವಾದದ್ದೆಂಬದನ್ನು ನಿರ್ಣಯಿಸುವ ಭಾರವು ನಿಮ್ಮ ಮೇಲಿರುವದು. ಹಂಸನಾಯಕನನ್ನಾಗಲಿ, ಅವನ ಸೇವಕನನ್ನಾಗಲಿ ಒಡೆದು ಕೊಳ್ಳುವದು ಅಸಂಭಾವ್ಯವಿರುವದು. ನೆಲಮಾರ್ಗದ ಉಪಾಯದಿಂದ ಕಾರ್ಯ ಸಾಧನೆ ಮಾಡಿಕೊಳ್ಳುವದು ವಿಹಿತವೆಂದು ನನ್ನ ಅಭಿಪ್ರಾಯವುಂಟು."

"ಧರ್ಮಘೋಷರೆ, ರಾಜಕಾರಣ ಪಟುಗಳಿಗೆ ಯಾವ ಉಪಾಯಗಳಾದರೂ ದೊರೆಯುತ್ತವೆ. ನಿಮ್ಮ ಮನಸ್ಸು ಈಗ ನಿಶ್ಶಂಕವಾದದ್ದರಿಂದ ಅನುಕೂಲವಾದ ಅಭಿಪ್ರಾಯವಿತ್ತಿರಿ; ಆದರೆ ಸರ್ವಾರ್ಥಸಿದ್ಧಿಯವರ ಮನಸ್ಸು ಇನ್ನೂ ನಿರ್ವಿಕಲ್ಪ ವಾದಂತೆ ತೋರುವದಿಲ್ಲ" ಎಂದು ರುದ್ರಾದಿತ್ಯನು ನುಡಿದನು.

"ರುದ್ರಾದಿತ್ಯರೆ," ಸರ್ವಾರ್ಥಸಿದ್ಧಿಯು:—"ಸ್ತ್ರೀಯರಿಗೆ ರಾಜಕಾರಣದಲ್ಲಿ ಹೇಗೆ ಗೊತ್ತಾಗಬೇಕು? ಸರ್ವಸಂಗಪರಿತ್ಯಾಗಮಾಡಿದ ನಮ್ಮ ಮೇಲೆ ರಾಜನು ಕ್ಷೋಭೆಗೊಳ್ಳಬಾರದೆಂಬ ಉದ್ದೇಶದಿಂದ ನನ್ನ ಅಭಿಪ್ರಾಯ ತಿಳಿಸಿದೆನು."

"ಮುಂಜರಾಜರ ಬಂಧವಿಮೋಚನೆಯಾದರೆ ಬೌದ್ಧಧರ್ಮದ ಅಭ್ಯುದಯ ಕ್ಕಾಗಿ ಅವರು ಪ್ರಯತ್ನಿಸುವದು ನಿಶ್ಚಯವು. ನೀವು ನನ್ನ ಮಾತಿನಲ್ಲಿ ವಿಶ್ವಾಸ ವಿಟ್ಟು ಸಹಾಯಮಾಡಿರಿ. ನಿಜವಾಗಿ ವಿಚಾರಿಸಿದರೆ ಇಡೀ ಹಿಂದುಸ್ತಾನದಲ್ಲಿ ಬೌದ್ಧ ಧರ್ಮಾನುಯಾಯಿಗಳ ಸಂಖ್ಯೆಯು ಬೆರಳಿನಿಂದ ಎಣಿಸುವಷ್ಟು ಮಾತ್ರ ಇರುವದು. ಪರಮ ಪೂಜ್ಯವೂ ಪವಿತ್ರವೂ ಆದ ಧರ್ಮದ ಅಭ್ಯುದಯಕ್ಕಾಗಿ ಯತ್ನಿಸುವ ಮಾಳವಸಿಂಹನನ್ನು ಪಾರಮಾಡುವದು ನಿಮ್ಮ ಕರ್ತವ್ಯವಲ್ಲವೆ? ನೀವು ಈ ಕರ್ತವ್ಯಮಾಡುವಾಗ ಎಂತಹ ಪ್ರಸಂಗವೊದಗಿದರೂ ಅದಕ್ಕೆ ಅಂಜಬಾರದು."

"ಮುಂಜರಾಜರು ಬೌದ್ಧಧರ್ಮದ ಏಳ್ಗೆಗಾಗಿ ಯತ್ನಿಸುವರೆಂದು ನನಗೆ ನಂಬಿಗೆಯಾಗಿರುವದು. ಇಡೀ ಭರತವರ್ಷದಲ್ಲಿ ಸೌಗತ ಧರ್ಮವು ನಾಶವಾಗಿ ಹೋಗಿರುವದೆಂದರೂ ನಡೆಯುವಂತಿದೆ. ನಾನು ಕೆಲವು ದಿನಗಳ ಹಿಂದೆ ಬೋಧಿ ವೃಕ್ಷದ ದರ್ಶನ ತೆಗೆದುಕೊಳ್ಳುವದಕ್ಕಾಗಿ ಹೋಗಿದ್ದೆನು. ಆಗ ನನಗೆ ಮಾರ್ಗದಲ್ಲಿ ಎಷ್ಟೋ ವಿಹಾರಗಳು ಕಂಡವು. ಅವುಗಳಲ್ಲಿ ಒಬ್ಬನಾದರೂ ಬೌದ್ಧ ಭಿಕ್ಷುವು ಕಣ್ಣಿಗೆ ಬೀಳಲಿಲ್ಲ. ಬೋಧಿವೃಕ್ಷದ ಸ್ಥಾನದಲ್ಲಾದರೂ ಅಷ್ಟಕ್ಕಷ್ಟೇ ಜನರು ಭೆಟ್ಟಿ ಯಾದರು. ಬುದ್ಧಗಯೆಯ ಅವಸ್ಥೆಯಾದರೂ ಹೀಗೆಯೆ! ಎಲ್ಲ ಕಡೆಯಲ್ಲಿ ಅಂಧ ಕಾರವು ವ್ಯಾಪಿಸಿರುವದು. ಈಗ ಕೆಲವು ಸ್ಥಳಗಳಲ್ಲಿ ಜೈನರ ಸುಳಿದಾಟವು ಮಾತ್ರ ದೃಗ್ಗೋಚರವಾಗತೊಡಗಿದೆ. 'ಕಾಲಾಯ ತಸ್ಮೈ ನಮಃ'; ಆದರೂ ನಾವು ಯತ್ನಿಸ ಲಿಕ್ಕೆ ಬೇಕು. ಇಡೀ ಹಿಂದುಸ್ಥಾನದಲ್ಲಿಯ ಬೌದ್ಧ ಧರ್ಮಾನುಯಾಯಿಗಳು ನಿಶ್ಶೇಷವಾಗಿ ಹೋಗುತ್ತಿದ್ದರೂ ನಮ್ಮಂತಹರು ಸುಮ್ಮನೆ ಕುಳಿತರೆ ಬುದ್ಧದೇವನ ಧರ್ಮದ ವಿಷಯವಾಗಿ ಲಂಪಟನ ಮಾಡಿದಂತಾಗುವದು." ಎಂದು ಧರ್ಮಘೋ ಷನು ನುಡಿದ ಕೂಡಲೆ ಸರ್ವಾರ್ಥಸಿದ್ಧಿಯು—"ಬೌದ್ಧ ಧರ್ಮವು ಇಡೀ ಜಗತ್ತಿ ನಲ್ಲಿ ನಾಮಶೇಷವಾಗುವದೋ ಏನೋ!" ಎಂದಳು.

“ಶಾಂತಂ ಪಾಪಂ ಹೀಗೆ ಮಾತಾಡಬೇಡಿರಿ. ಹಿಂದುಸ್ತಾನದಲ್ಲಿ ಬೌದ್ಧ ಧರ್ಮವು ನಾಶವಾದದ್ದಕ್ಕಾಗಿ ನೀವು ಹೀಗೆ ಕಲ್ಪಿಸಬೇಡಿರಿ. ಚೀನ, ಜಪಾನ, ಸಿಂಹಲ, ನೇಪಾಳ ಮೊದಲಾದ ದೇಶಗಳಲ್ಲಿ ಭಗವಾನ್ ಶಾಕ್ಯಮುನಿಯ ಉಪಾಸಕರು ಹೇರಳವಾಗಿರುವರು.”

ಧರ್ಮಘೋಷನು ಹೀಗೆ ನುಡಿದ ಕೂಡಲೆ ರುದ್ರಾದಿತ್ಯನು ಗಾಂಭೀರ್ಯದಿಂದ “ಬೌದ್ಧ ಭಿಕ್ಷುಗಳೇ, ಹಿಂದುಸ್ತಾನದಲ್ಲಿ ಬೌದ್ಧಧರ್ಮದ ಸ್ಥಿತಿಯು ಅತ್ಯಂತ ಚಿಂತಾ ಜನಕವಾಗಿರುವಾಗ ಅದರ ಅಭ್ಯುದಯಕ್ಕಾಗಿ ಉಪಾಯ ಮಾಡದಿದ್ದರೆ ಹೇಗೆ? ಒಬ್ಬೊಬ್ಬರ ಪ್ರಯತ್ನದಿಂದ ಕಾರ್ಯಗಳಾಗುತ್ತಿರುವವು. ಪ್ರತ್ಯಕ್ಷ ಭಗವಾನ್ ಬುದ್ಧಮುನಿಯು ಕುಳಿತುಕೊಂಡು ಉಪದೇಶ ಮಾಡುತ್ತಿರುವಾಗ ಅವನ ಧರ್ಮದ ಪ್ರಸಾರವು ಅಷ್ಟೊಂದು ಚನ್ನಾಗಿ ಆಗಲಿಲ್ಲ. ಮುಂದೆ ಅಶೋಕ ಚಕ್ರವರ್ತಿಯ ಕಾಲದಲ್ಲಿ ಅದು ಪೂರ್ಣವಾಗಿ ಅಭ್ಯುದಯ ಹೊಂದಿತು. ಮುಂಜಮಹಾರಾಜರ ಕಾಲದಲ್ಲಿ ಆ ಧರ್ಮವು ಪುನರುದ್ಧಾರವಾಗಬೇಕೆಂದು ಭಗವದಿಚ್ಛೆಯಿರಬಾರದೇಕೆ?”

“ನಿಮ್ಮ ಮಾತು ನಿಜವು. ಅಂತೆಯೆ ನಾವು ನಿಮಗೆ ಬೇಕಾದಂತಹ ಸಹಾಯವನ್ನು ಶಕ್ತ್ಯನುಸಾರವಾಗಿ ಮಾಡಲಿಕ್ಕೆ ಸಿದ್ಧರಾಗಿರುವೆವು. ನೆಲಮಾರ್ಗ ಮಾಡಿ ಮುಂಜರಾಜರನ್ನು ಬಂಧಮುಕ್ತಮಾಡಬೇಕೆಂದು ನಿಮ್ಮ ಅಭಿಪ್ರಾಯವಿರುವದು. ಈ ಉಪಾಯವನ್ನು ಬಿಟ್ಟರೆ ಬೇರೆ ಉಪಾಯವು ದೊರೆಯುವದಿಲ್ಲವೆಂದು ನನಗಾದರೂ ತಿಳಿದಿರುವದು. ಆದರೆ ನೆಲಮಾರ್ಗದ ಕಾರ್ಯವು ಗುಪ್ತವಿರಲು ಒಳ್ಳೇ ಕಠಿಣವಾಗಿರುವದು. ಈ ಕಾರ್ಯಕ್ಕೆ ಕೆಲಸಗಾರರು ಒಳ್ಳೆಯ ನಂಬಿಗೆಯವರಿರಬೇಕಾಗುವದು. ನೆಲಮಾರ್ಗದಿಂದ ಹೊರಡುವ ಕಲ್ಲು-ಮಣ್ಣುಗಳ ರಾಶಿಯು ಪರ್ವತಪ್ರಾಯವಾಗಿ ಬೀಳುವದು. ಇಷ್ಟೆಲ್ಲ ಕೆಲಸವು ರಹಸ್ಯವಾಗಿ ಉಳಿಯುವ ಬಗೆ ಹೇಗೆ?”

“ಧರ್ಮಘೋಷರೆ, ನೀವು ಈ ವಿಷಯವಾಗಿ ಚಿಂತಿಸಬೇಡಿರಿ. ಕೆಲಸಗಾರರೆಲ್ಲರೂ ಮಾಳವೆಯರು; ಅತ್ಯಂತ ಸ್ವಾಮಿನಿಷ್ಠರು; ಕರ್ತವ್ಯದಕ್ಷರು. ಪ್ರಾಣ ಹೋದರೂ ಅವರು ವಿಶ್ವಾಸಘಾತಮಾಡಲಾರರು. ಈ ಬೌದ್ಧವಿಹಾರದ ಉತ್ತರಕ್ಕಿರುವ ಮರಡಿಯ ಕೆಳಗಿನ ಕೊಳ್ಳದಲ್ಲಿ ನೆಲಮಾರ್ಗದ ದ್ವಾರ ಮಾಡಬೇಕು. ನೆಲಮಾರ್ಗದೊಳಗಿನ ಕಲ್ಲು ಮಣ್ಣುಗಳನ್ನು ಕೊಳ್ಳದಲ್ಲಿ ಹರವಿಸಿಬಿಟ್ಟರೆ ಯಾರಿಗೂ ಅದರ ಸುದ್ದಿಯೇ ಗೊತ್ತಾಗುವದಿಲ್ಲ. ಆದಷ್ಟು ರಾತ್ರಿಯವೇಳೆಯಲ್ಲಿ ಕೆಲಸವನ್ನು ಮಾಡಿಸಬೇಕು. ಹಗಲು ಎಲ್ಲ ಕೆಲಸಗಾರರನ್ನು ಅಲ್ಲಲ್ಲಿ ಗುಪ್ತಸ್ಥಳಗಳಿಗೆ ಕಳಿಸಬೇಕು. ಹೀಗೆ ಮಾಡಿದರೆ ಕಾರ್ಯವು ಸುಯಂತ್ರಿತವಾಗಿ ಸಾಗುವದು.”

ಧರ್ಮಘೋಷ-ರುದ್ರಾದಿತ್ಯರು ಈ ಮೇರೆಗೆ ಕಾರಸ್ಥಾನಗಳನ್ನು ರಚಿಸಿದಮೇಲೆ ಸರ್ವಾರ್ಥಸಿದ್ಧಿಯ ಮನಸ್ಸಿನಲ್ಲಿ ಮತ್ತೊಂದು ವಿಚಾರವು ಹುಟ್ಟಿತು. ಮುಂಜರಾಜನು ಇತ್ತೀಚೆಗೆ ಅತ್ಯಂತ ವಿಷಯಾಸಕ್ತನಾಗಿ ಸ್ವಸ್ವರೂಪ ವಿಸ್ಮೃತಿಹೊಂದಿರುವದರಿಂದ ಅವನು ರಾಜಧಾನಿಯನ್ನು ತ್ಯಾಗಮಾಡಲಿಕ್ಕೆ ಸಮ್ಮತಿಸಲಿಕ್ಕಿಲ್ಲವೆಂದು

ಅವಳು ರುದ್ರಾದಿತ್ಯನಿಗೆ ತಿಳಿಸಿದಳು. ಅನಂತರದಲ್ಲಿ ರುದ್ರಾದಿತ್ಯನು ಮುಂಜರಾಜನ ಮನಸ್ಸನ್ನು ತಿರುಗಿಸುವದಕ್ಕಾಗಿ ಸಾಹಸ ಮಾಡಬೇಕೆಂದು ನಿರ್ಧರಿಸಿದನು. ಕುಸುಮ ಕುಮಾರಿಯಾದರೂ ಕಾರಸ್ಥಾನದಲ್ಲಿ ಭಾಗತೆಗೆದುಕೊಂಡು, ಪತಿಯೊಡನೆ ಧಾರಾನಗರಿಗೆ ಹೊರಡಬಹುದೆಂದು ಎಲ್ಲರು ತರ್ಕಿಸಿದರು. ಗುಪ್ತರೀತಿಯಿಂದ ಕಾರಾಗೃಹವನ್ನು ಪ್ರವೇಶಿಸಿ ಮುಂಜರಾಜನ ಹಾಗು ಕುಸುಮಕುಮಾರಿಯ ಮನಸ್ಸು ತಿರುಗಿಸಬೇಕೆಂದು ರುದ್ರಾದಿತ್ಯನು ನಿರ್ಧರಿಸಿದನು. ಬೌದ್ಧಬಿಕ್ಷುವಿನ ವೇಷಧರಿಸಿದರೆ ಸರ್ವಾರ್ಥಸಿದ್ಧಿಯೊಡನೆ ಕಾರಾಗೃಹದಲ್ಲಿ ಪ್ರವೇಶಿಸಲಿಕ್ಕೆ ನಿರಾತಂಕವಾಗುವದೆಂದು ಅವನು ತಿಳಿದುಕೊಂಡು ತನ್ನ ಅಭಿಪ್ರಾಯವನ್ನು ಧರ್ಮಘೋಷನಿಗೆ ತಿಳಿಸಿದನು.

"ರುದ್ರಾದಿತ್ಯರೆ, ಬೌದ್ಧ ಧರ್ಮದ ಅಭುದಯಕ್ಕಾಗಿ ಪ್ರಯತ್ನಿಸಬೇಕೆನ್ನುವ ಮುಂಜರಾಜರ ಮುಕ್ತತೆಗಾಗಿ ನಾವು ಬೇಕಾದಂತಹ ಸಹಾಯ ಮಾಡಲಿಕ್ಕೆ ಸಿದ್ಧರಾಗಿರುವೆವು. ಬಹಳ ಕಾಲದಹಿಂದೆ ಒಬ್ಬ ಧನಾಢ್ಯ ಬುದ್ಧೋಪಾಸಕನು ಧರ್ಮವೃದ್ಧಿಯಕಾರ್ಯದಲ್ಲಿ ಉಪಯೋಗಿಸಬೇಕೆಂದು ಹೇರಳವಾಗಿ ದ್ರವ್ಯದಾನ ಮಾಡಿರುವನು. ಆ ಧನವು ವಿಹಾರದಲ್ಲಿಯ ನೆಲಮನೆಯಲ್ಲಿರುವದು. ನಿಮಗೆ ಧನದ ಕೊರತೆಯಾದರೆ ನೆಲಮನೆಯೊಳಗಿನ ದ್ರವ್ಯವನ್ನು ನಿಮ್ಮ ಕಾರ್ಯಕ್ಕೆ ಉಪಯೋಗಮಾಡಿಕೊಳ್ಳಿರಿ ನೀವು ಅದರ ಉಪಯೋಗ ಮಾಡಿಕೊಂಡರೆ ನಮಗೆ ಬಹಳ ಆನಂದವಾಗುವದು. ಧರ್ಮಕಾರ್ಯಕ್ಕಾಗಿ ಇದುವರೆಗೆ ಮೀಸಲಾಗಿದ್ದ ಹಣದ ವಿನಿಯೋಗವು ಆ ಕಾರ್ಯಕ್ಕೆ ಆಗತೊಡಗಿದರೆ ನಮಗೆ ಆನಂದವಾಗದೇನು ಮಾಡೀತು?"

ಧರ್ಮಘೋಷನ ಮಾತುಗಳನ್ನು ಕೇಳಿ ರುದ್ರಾದಿತ್ಯನಿಗೆ ಹೇಳಕೂಡದಷ್ಟು ಆನಂದವಾಯಿತು. ಆಗ ಅವನು —"ಬೌದ್ಧತಾಪಸಿಗಳೆ, ನಿಮ್ಮ ಧರ್ಮಬುದ್ಧಿಯು ಅವರ್ಣನೀಯವಿರುವದು. ನೀವು ನಮಗೆ ಅನೇಕ ಬಗೆಯಿಂದ ಸಹಾಯ ಮಾಡಲುದ್ಯುಕ್ತರಾದದ್ದನ್ನು ನೋಡಿ ಅನಿವಾರವಾಗಿ ಆನಂದವಾಯಿತು. ನಮಗೆ ದ್ರವ್ಯದ ಆವಶ್ಯಕತೆಯುಂಟಾದರೆ ನಿಮ್ಮಲ್ಲಿದ್ದ ನಿಧಿಯನ್ನು ತೆಗೆದುಕೊಳ್ಳುವೆವು. ಬಹಳ ಮಾಡಿ ನಮಗೆ ನಿಮ್ಮ ದ್ರವ್ಯದ ಆವಶ್ಯಕತೆಯುಂಟಾಗುವಂತಿಲ್ಲ. ನೀವು ನಮಗೆ ದ್ರವ್ಯಸಹಾಯ ಮಾಡುವದೂ ಬೇಡ; ಕೈಮುಟ್ಟಿ ಕೆಲಸ ಮಾಡುವದೂ ಬೇಡ. ನಮ್ಮ ಕಾರಸ್ಥಾನವನ್ನು ಗುಪ್ತವಾಗಿರಿಸಿದರೆ ಅದೊಂದು ದೊಡ್ಡ ಸಹಾಯ ಮಾಡಿದಂತಾಗುವದು. ಪ್ರಸಂಗವೊದಗಿದರೆ ನನ್ನನ್ನು ಒಮ್ಮೆ ಕಾರಾಗೃಹದಲ್ಲಿ ಪ್ರವೇಶಮಾಡಿಸಿರಿ."

ಮುಂದೆ ಸ್ವಲ್ಪ ವೇಳೆಯವರೆಗೆ ಕಾರಸ್ಥಾನದ ವಿಷಯವಾಗಿ ಮಾತಾಡಿಕೊಂಡರು. ಅಷ್ಟರಲ್ಲಿ ಧನಪತಿಯು ಕೆಲವು ಸೈನಿಕರೊಡನೆ ಬೌದ್ಧ ಭಿಕ್ಷುಗಳ ವೇಷದಿಂದ ವಿಹಾರಕ್ಕೆ ಬಂದನು. ರುದ್ರಾದಿತ್ಯನು ಅವನಿಗೆ ತಾನು ರಚಿಸಿದ

ಕಾರಸ್ಥಾನವನ್ನು ತಿಳಿಸಿ, ನೆಲಮಾರ್ಗದ ಕೆಲಸವನ್ನು ಅವನ ಕಡೆಗೆ ಒಪ್ಪಿಸಿದನು. ಹಗಲು ಕೆಲವು ಜನರು ವಿಹಾರದಲ್ಲಿಯೂ ಕೆಲವು ಜನರು ಕೊಳ್ಳ ಅರಣ್ಯ ಮೊದಲಾದ ಸ್ಥಳಗಳಲ್ಲಿಯೂ ಗುಪ್ತವಾಗಿರಬೇಕೆಂದು ಅವನು ಎಲ್ಲ ಜನರಿಗೆ ಹೇಳಿದನು. ಇನ್ನೂ ಕೆಲವು ಸೈನಿಕರು ಹಿಂದೆ ಉಳಿದಿದ್ದರು. ದಿನಾಲು ಹತ್ತು ಹತ್ತು ಜನರಂತೆ ವಿಹಾರಕ್ಕೆ ಬರಬೇಕೆಂದು ಧನಪತಿಯು ಅವರಿಗೆ ಹೇಳಿದನು. ಒಮ್ಮೆಲೆ ಬಹಳ ಜನರು ಬಂದರೆ ಜನರಿಗೆ ಸಂಶಯವುಂಟಾದೀತೆಂದು ಈ ಮೇರೆಗೆ ವ್ಯವಸ್ಥೆಯು ಮಾಡಲ್ಪಟ್ಟಿತ್ತು.

ಧನಪತಿಯು ಕೆಲಸಗಾರರನ್ನು ನೆಲಮಾರ್ಗ ಮಾಡಲಿಕ್ಕೆ ಹಚ್ಚಿದನು. ಇತ್ತ ರುದ್ರಾದಿತ್ಯನು ದಿನಾಲು ಸರ್ವಾರ್ಥಸಿದ್ಧಿಯನ್ನು ಕಾರಾಗೃಹಕ್ಕೆ ಕಳುಹಿಸಿ ಮುಂಜರಾಜನಿಗೂ ಕುಸುಮಕುಮಾರಿಗೂ ಬೋಧಿಸಿ, ಅವರ ಮನಸ್ಸನ್ನು ತಿರುಗಿಸುವ ಕಾರ್ಯ ನಡೆಯಿಸಿದ್ದನು. ಒಂದು ದಿನ ಅವನು ಬೌದ್ಧ ಭಿಕ್ಷುವಿನ ವೇಷದಿಂದ ಕಾರಾಗೃಹಕ್ಕೆ ಹೋಗಿ ಮುಂಜರಾಜನನ್ನು ಕಂಡು, ಅವನಿಗೆ ತಾನು ಮಾಡಿದ ಕಾರಸ್ಥಾನವನ್ನೆಲ್ಲ ಹೇಳಿದನು. ಮುಂಜರಾಜನೂ ಕುಸುಮಕುಮಾರಿಯೂ ನೆಲಮಾರ್ಗದಿಂದ ಹೊರಟು ಬರುವೆವೆಂದು ಅವನಿಗೆ ಆಶ್ವಾಸನೆ ಕೊಟ್ಟರು.

ಮಾನ್ಯಖೇಟ ರಾಜಧಾನಿಯಲ್ಲಿ ಈ ಅದ್ಭುತ ಕಾರಸ್ಥಾನವು ನಡೆದಿದ್ದರೂ ಅದರ ಗಂಧವಾರ್ತೆಯು ತೈಲಪದೇವನಿಗಾಗಲಿ, ಅವನ ಸ್ವಾಮಿನಿಷ್ಠರಾದ ಮಂತ್ರಿ, ಸೇನಾನಾಯಕ, ಗುಪ್ತಚರರ ಅಧಿಪತಿ, ಕಾವಲುಗಾರರ ನಾಯಕ ಮೊದಲಾದ ಜನರಿಗಾಗಲಿ ಇದ್ದಿಲ್ಲ. ಏಕನಿಷ್ಠ ಸೇವಕನಾದ ಹಂಸನಾಯಕ, ಹಾಗು ಗುಪ್ತಚರರ ಅಧಿಪತಿಯಾದ ದುರ್ಗಾನಾಥ ಇವರ ಮುತ್ಸದ್ದಿತನದಿಂದ ರುದ್ರಾದಿತ್ಯನ ಕಾರಸ್ಥಾನವು ಹೇಗೆ ವ್ಯರ್ಥವಾಯಿತೆಂಬದನ್ನು ಮುಂದೆ ಕಾಣಬಹುದು

---

## ರಹಸ್ಯಸ್ಫೋಟ

ಬೌದ್ಧವಿಹಾರದಲ್ಲಿ ನಡೆದ ಕಾರಸ್ಥಾನದ ಗಂಧವಾರ್ತೆಯು ತೈಲಪದೇವನಿಗಾಗಲಿ ಅವನ ರಾಜಕಾರಣ ಚತುರ ಅಧಿಕಾರಿ ಪರಿವಾರಕ್ಕಾಗಲಿ ಹತ್ತಿರಲಿಲ್ಲ. ನೆಲಮಾರ್ಗವು ಕಾರಾಗೃಹವನ್ನು ಸಮೀಪಿಸಿತ್ತು. ಅದು ಮುಂಜರಾಜನನ್ನು ಸೆರೆಯಿಟ್ಟ ಸ್ಥಳವನ್ನು ಮುಟ್ಟುವದಕ್ಕೆ ಎರಡು ದಿನಗಳು ಬೇಕಾಗಿದ್ದವು. ನೆಲಮಾರ್ಗದಂತಹ ಅದ್ಭುತವಾದ ಕಾರ್ಯವು ಸದ್ದಿಲ್ಲದೆ ನಡೆದ ಸಂಗತಿಯು ವಿಸ್ಮಯಜನಕವಾದದ್ದು. ರುದ್ರಾದಿತ್ಯನು ಅದ್ವಿತೀಯ ಕಾರಸ್ಥಾನಿಯಾದ್ದರಿಂದ ತಾನು ನಡೆಯಿಸಿದ ಪ್ರಚಂಡಕಾರ್ಯವು ಅತ್ಯಂತ ರಹಸ್ಯವಾಗಿ ಉಳಿಯುವಂತೆ ಜಾಗ್ರತೆಗೊಂಡಿದ್ದನು.

ಗುಪ್ತಚರರ ಅಧಿಕಾರಿಯಾದ ದುರ್ಗಾನಾಥನು ಮಾನ್ಯಖೇಟದ ಬಳಿಯ

ಅರಣ್ಯದಲ್ಲಿ ಇಬ್ಬರು ಬೌದ್ಧಭಿಕ್ಷುಗಳು ಮುಂಜರಾಜನ ವಿಷಯವಾಗಿ ಸಂಭಾಷಣೆ ನಡೆಯಿಸಿರುವದನ್ನು ನೋಡಿದನು. ದುರ್ಗಾನಾಥನನ್ನು ಆ ಭಿಕ್ಷುಗಳು ನೋಡ ದ್ದರಿಂದ ಇನ್ನೆರಡು ದಿನಗಳಲ್ಲಿ ಮುಂಜರಾಜನ ಮುಕ್ತತೆಯಾಗುವದೆಂಬಾಶಯದ ಮಾತುಗಳನ್ನು ಆಡುತ್ತ ಕುಳಿತಿದ್ದರು. ಯಾವರೀತಿಯಿಂದ ಮುಂಜರಾಜನ ಬಿಡುಗಡೆಯಾಗುವದಿರುವದೆಂಬದು ಮಾತ್ರ ಅವರಿಂದ ತಿಳಿಯಲಿಲ್ಲ. ಕಾರಾಗೃಹ ದಲ್ಲಿದ್ದ ಮುಂಜುರಾಜನ ಮುಕ್ತತೆಗಾಗಿ ಕಾರಸ್ಥಾನವು ನಡೆದಿರುವದೆಂದು ದುರ್ಗಾ ನಾಥನಿಗೆ ಗೊತ್ತಾಯಿತು. ಕೂಡಲೆ ಅವನು ಈ ಸಂಗತಿಯನ್ನು ಶೋಧಿಸುವದ ಕ್ಕಾಗಿ ಬಹಳವಾಗಿ ಯತ್ನಿಸಿದನು. ಬೌದ್ಧವಿಹಾರದ ಗುಪ್ತಶೋಧನೆ ಮಾಡಿದನು. ಆದರೆ ಅವನಿಗೆ ಸಂಶಯದ ಸಾಧನಗಳೊಂದೂ ದೊರೆಯಲಿಲ್ಲ ಆಗ ಅವನ ಮನ ಸ್ಸಿನಲ್ಲಿ ತಟ್ಟನೆ ಒಂದು ವಿಚಾರವು ಹುಟ್ಟಿತು. ಕೂಡಲೆ ಅವನು ಕಾವಲುಗಾರರ ಮುಖ್ಯಸ್ಥನಾದ ಹಂಸನಾಯಕನ ಬಳಿಗೆ ಬಂದನು.

"ಹಂಸನಾಯಕರೆ, ಕಾರಾಗೃಹದಲ್ಲಿ ಭಯಂಕರವಾದ ಗುಪ್ತಕಾರಸ್ಥಾನವು ನಡೆದಿದ್ದರೂ ನಿಮಗೆ ಅದರ ಸುದ್ದಿಯೇ ಇಲ್ಲದ್ದು ನೋಡಿ ಸೋಜಿಗವಾಗಿದೆ. ಸ್ವಾಮಿನಿಷ್ಠರೂ ಕರ್ತವ್ಯದಕ್ಷರೂ ಚತುರರೂ ಆದ ನೀವು ಇಷ್ಟೇಕೆ ಎಚ್ಚರಗೆಡಿತನ ಮಾಡಿರುವಿರಿ?"

ಹಂಸನಾಯಕನು ನಾಮಾಂಕಿತ ಸ್ವಾಮಿನಿಷ್ಠನಾಗಿದ್ದನು. ಕರ್ತವ್ಯಪಾಲನೆ ಯಲ್ಲಂತು ಅವನಂತಹ ಜನರು ಚಾಲುಕ್ಯಸಾಮ್ರಾಜ್ಯದಲ್ಲಿ ಅತ್ಯಲ್ಪರಾಗಿದ್ದರು. ದುರ್ಗಾನಾಥನ ಆಕ್ಷೇಪಣೆಯಿಂದ ಅವನು ಪುಟ್ಟಿಬಿದ್ದನು ತನ್ನಿಂದ ಎಚ್ಚರಗೇಡಿ ತನದ ಕೆಲಸವೇನು ಘಟಿಸಿರಬಹುದೆಂದು ಅವನು ಬಹುಪರಿಯಾಗಿ ಯೋಚಿಸಿದನು. ಆಗ ದುರ್ಗಾನಾಥನು—"ನಿಮ್ಮ ಕಾವಲಿನಲ್ಲಿದ್ದ ಮುಂಜರಾಜನ ಬಂಧವಿಮೋಚ ನೆಯ ಅದ್ಭುತವಾದ ಕಾರಸ್ಥಾನವು ನಡೆದ ವಿಶ್ವಸನೀಯ ಸಂಗತಿಯು ನನಗೆ ತಿಳಿದದೆ."

ಈ ಸಂಗತಿಯನ್ನು ಕೇಳಿದ ಮೇಲಂತು ಹಂಸನಾಯಕನು ಬಹಳೇ ದಿಗಿಲು ಗೊಂಡನು. ಆಗ ಅವನು—"ದುರ್ಗಾನಾಥರೆ, ನೀವು ಇದೇನು ಹೇಳುತ್ತಿರುವಿರಿ? ನನ್ನ ಕಾವಲಿನಲ್ಲಿದ್ದ ಮುಂಜರಾಜನು ಪಾರಾಗುವನೆ? ಛೇ! ತೀರ ಅಸಂಭವವು. ನನ್ನ ಆಜ್ಞೆಯಿಲ್ಲದೆ ನೊಣ-ನೊರಜುಗಳು ಸಹ ಹೊರಗಿಂದ ಒಳಗೂ ಒಳಗಿಂದ ಹೊರಗೂ ಹೋಗಲಾರವು."

"ಇದು ನಿಮ್ಮ ದೊಡ್ಡಸ್ತಿಕೆಯನ್ನೂ ಆತ್ಮಪೌರುಷವನ್ನೂ ಪ್ರಕಟಗೊಳಿಸು ವಂತಹ ಭಾಷಣವು. ನೀವು ನೊಣ-ನೊರಜುಗಳ ಕಡೆಗೆ ಲಕ್ಷ್ಯಗೊಟ್ಟು ಆನೆ ಯನ್ನು ದುರ್ಲಕ್ಷಿಸಿರುವಿರಿ."

"ದುರ್ಗಾನಾಥರೆ, ನಡೆದ ಸಂಗತಿಯಾದರೂ ಏನು?"

ದುರ್ಗಾನಾಥನು ಅರಣ್ಯದಲ್ಲಿ ನಡೆದ ಮಾತುಕಥೆಗಳ ಸಂಗತಿಯನ್ನು ಹೇಸ

ನಾಯಕನಿಗೆ ತಿಳಿಸಿದನು. ಅನಂತರದಲ್ಲಿ ಹಂಸನಾಯಕನು ವಿನಯದಿಂದ— "ಮಹಾನುಭಾವರೆ, ನೀವು ಈ ಕಾರಸ್ಥಾನವನ್ನು ಬೈಲಿಗೆಳೆಯುವದಕ್ಕಾಗಿ ಸಾಹಸ ಮಾಡಬೇಕು ಹಾಗೆ ಮಾಡದಿದ್ದರೆ ಸಾಮ್ರಾಜ್ಯದ್ರೋಹ ಮಾಡಿದ ಪಾಪವು ನನಗೆ ತಗಲುವದು. ಕಾರಸ್ಥಾನದ ಗಂಧವಾರ್ತೆಯು ನನಗೆ ತಿಳಿಯದಿರುವದೆಂದರೆ ವಿಸ್ಮಯಕಾರಕವಿರುವದು. ಕಾರಾಗೃಹದಲ್ಲಿ ನನ್ನ ಸಹಧರ್ಮಚಾರಿಣಿಯು ಕುಸುಮಕುಮಾರಿದೇವಿಯವರ ದಾಸಿಯಾಗಿರುವಳು ದೇವಿಯವರು ನನ್ನ ಪತ್ನಿಯಲ್ಲಿ ವಿಶ್ವಾಸವುಳ್ಳವರಿರುವರು. ಅಲ್ಲಿ ಯಾವವಾದರೂ ಕಾರಸ್ಥಾನಗಳು ನಡೆದಿದ್ದರೆ ಅವು ದೇವಿಯವರ ಮುಖಾಂತರವಾಗಿ ನನ್ನ ಪತ್ನಿಯಾದ ಪ್ರಭಾವತಿಗೆ ತಿಳಿಯತ್ತಿದ್ದವು. ಅವಳಿಗೆ ಕಾರಸ್ಥಾನಗಳು ಗೊತ್ತಾಗಿದ್ದರೆ ನನ್ನೆದುರಿಗೆ ಎಂದೂ ಬಚ್ಚಿಡುತ್ತಿದ್ದಿಲ್ಲ. ನನ್ನ ಪ್ರೇಮದ ಪುತ್ಥಳಿಯಾದ ಪ್ರಭಾವತಿಯು ಅತ್ಯಂತ ಗುಣವತಿಯು. ಸತೀಧರ್ಮವನ್ನು ಬಲ್ಲವಳು. ಇಂಥವಳು ನನ್ನ ಮುಂದೆ ನಿಜಸ್ಥಿತಿಯನ್ನು ತಿಳಿಸದಿರುವಳೆ? ಅಲ್ಲಿ ನಡೆದ ಕಾರಸ್ಥಾನಗಳು ನನ್ನ ಪತ್ನಿಗೂ ಗೊತ್ತಾಗಿರಲಿಕ್ಕಿಲ್ಲವೇನು?"

"ಓಹೋ! ಗೊತ್ತಾಗಿರದೇನುಮಾಡಿಯಾವು? ನಿಮ್ಮ ಸತಿಯು ನಿಮ್ಮಂತೆ ಸ್ವಾಮಿನಿಷ್ಠಳಿರುವಳು. ನೀವು ಹೇಗೆ ತೈಲಪದೇವ ಮಹಾರಾಜರಲ್ಲಿ ಭಕ್ತಿಯನ್ನಿಟ್ಟಿರುವಿರೋ, ಅದರಂತೆ ಅವಳು ಕುಸುಮಕುಮಾರಿದೇವಿಯವರಲ್ಲಿ ಭಕ್ತಿಯುಳ್ಳವಳಿರುವಳು. ಅವಳಿಗೆ ಕಾರಸ್ಥಾನವು ತಿಳಿದಿದ್ದರೂ ನಿಮ್ಮ ಮುಂದೆ ಹೇಳಲಾರಳು."

"ಮುಂದೆ ಉಪಾಯವೇನು?"

"ನೀವು ಮೋಸಗಾರಿಕೆಯಿಂದ ಪತ್ನಿಯನ್ನು ಒಲಿಸಿಕೊಂಡು ಅಲ್ಲಿ ನಡೆದ ಕಾರಸ್ಥಾನಗಳನ್ನು ತಿಳಿದುಕೊಳ್ಳಬೇಕು ತೈಲಪದೇವಮಹಾರಾಜರ ನಿಂದೆಯನ್ನೂ ಮುಂಜರಾಜನ ವರ್ಣನೆಯನ್ನೂ ಮಾಡಿ, ಮುಂಜರಾಜನನ್ನು ಕಾರಾಗೃಹದಿಂದ ಪಾರಮಾಡಲಿಕ್ಕೆ ಹಂಚಿಕೆ ತೆಗೆಯುವೆನೆಂದು ನೀವು ಅವಳಿಗೆ ಹೇಳಬೇಕು. ಮುಂಜರಾಜನು ಸೆರೆಯಿಂದ ಪಾರಾದರೆ ಸಾಮ್ರಾಜ್ಯದ ಅಭ್ಯುದಯಕ್ಕೆ ವಿಘ್ನವಾಗುವದರಿಂದ ನೀವು ಸ್ವಾರ್ಥತ್ಯಾಗಮಾಡಿ ಕಾರ್ಯಸಾಧನೆ ಮಾಡಿಕೊಳ್ಳಲಿಕ್ಕೆ ಬೇಕು."

"ಸ್ವಾರ್ಥತ್ಯಾಗವೇನು ಮಾಡಬೇಕಾಗಿದೆ?"

"ಪ್ರಸಂಗದಲ್ಲಿ ನಿಮ್ಮ ಹಾಗು ನಿಮ್ಮ ಪತ್ನಿಯ ಪ್ರೇಮವು ವಿರಸವಾಗುವ ಸಂಭವವಿದೆ."

"ಪರವಿಲ್ಲ. ಸ್ವರಾಜ್ಯದ ಹಿತಕ್ಕಾಗಿ ನಾನು ಬೇಕಾದಂತಹ ಸ್ವಾರ್ಥತ್ಯಾಗ ಮಾಡಲಿಕ್ಕೆ ಸಿದ್ಧನಿರುವೆನು. ನೀವು ಕಾರಸ್ಥಾನದ ವಾರ್ತೆಯನ್ನು ಮಹಾರಾಜರ ಕಿವಿಯ ಮೇಲೆ ಹಾಕುವಿರೇನು?"

"ಈಗಲೆ ಬೇಡ. ನಾವು ನಮ್ಮ ಮನಸ್ಸಿಗೆ ನಂಬಿಗೆಯಾದಹೊರತು ಯಾರ ಮುಂದೆಯೂ ಈ ಸಂಗತಿಯನ್ನು ಹೇಳುವಂತಿಲ್ಲ. ನಾನು ನಾಳೆ ನಿಮಗೆ ಭೆಟ್ಟಿಯಾ

ಗುವೆನು. ನೀವು ನಿಮ್ಮ ಪತ್ನಿಯನ್ನು ಸವಿಮಾತಿನಿಂದ ಒಲಿಸಿಕ್ಕೊಂಡು ಕಾರಸ್ಥಾನದ ರಹಸ್ಯವನ್ನು ಅರಿತುಕೊಳ್ಳಿರಿ."

ದುರ್ಗಾನಾಥನು ಹೋದ ಮೇಲೆ ಹಂಸನಾಯಕನು ತನ್ನ ಮನೆಯನ್ನು ಸೇರಿದನು. ಅವನು ಪ್ರಭಾವತಿಯನ್ನು ಒಲಿಸಿಕೊಳ್ಳುವದಕ್ಕೆ ಅನೇಕ ವಿಧದ ಆಲೋಚನೆ ಮಾಡಹತ್ತಿದನು. ಪ್ರಭಾವತಿಯು ಇನ್ನೂ ರಾಣೀವಾಸದಿಂದ ಬಂದಿರಲಿಲ್ಲ. ಅವನು ಪತ್ನಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತನು. ಅಷ್ಟರಲ್ಲಿ ಪ್ರಭಾವತಿಯು ಮನೆಗೆ ಬಂದಳು. ಕೂಡಲೆ ಹಂಸನಾಯಕನು ಅವಳನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿಕೊಂಡು ವ್ಯಾಕುಲದಿಂದ—"ಪ್ರಭೆ, ನಾನು ಎಷ್ಟು ದಕ್ಷತೆಯಿಂದ ಕೆಲಸಮಾಡಿದರೂ ಕಡೆಗೆ ರಾಜನ ವಕ್ರದೃಷ್ಟಿಗೆ ಗುರಿಯಾದೆನು. ಇತ್ತೀಚೆಗೆ ನಮ್ಮ ಮಹಾರಾಜನ ಬುದ್ಧಿಯು ಕೆಟ್ಟು ಹೋಗಿರುವದು. ಅವನು ನನ್ನನ್ನು ಕೆಳಗಿನ ತರಗತಿಯ ಕಾರ್ಯಕ್ಕೆ ಹಚ್ಚಿದನು. ನನ್ನ ದುರ್ದೈವಕ್ಕೆ ಏನು ಮಾಡುವದು? ನನ್ನ ಮನಸ್ಸು ಅಪಮಾನದಿಂದ ಕಲ್ಪನಾತೀತವಾಗಿ ತಲ್ಲಣಗೊಳ್ಳುತ್ತಿರುವದು. ಸಾಧಿಸಿದರೆ ಈ ರಾಜ್ಯವನ್ನು ಬಿಟ್ಟು ಬೇರೆ ರಾಜ್ಯದಲ್ಲಿ ಸೇವೆ ಮಾಡಿಕೊಂಡಿರಬೇಕೆಂದು ಮಾಡಿರುವೆನು"

ಪತಿಯ ಮಾತುಗಳನ್ನು ಕೇಳಿ ಪ್ರಭಾವತಿಗೆ ವ್ಯಸನವಾಯಿತು. ಆಗ ಅವಳು ನಿಟ್ಟುಸಿರುಬಿಟ್ಟು—"ಮಹಾರಾಜರ ಬುದ್ಧಿಯು ಕೆಟ್ಟು ಹೋಗಿರುವದೆಂದು ನಿಸ್ಸಂದೇಹವಾಗಿ ಹೇಳಬಹುದು ಮುಂಜಮಹಾರಾಜರನ್ನು ಕಾರಾಗೃಹದಲ್ಲಿರಿಸಿರುವದನ್ನು ನೋಡಿದರೆ ಅವರ ಕಠೋರಹೃದಯದ ಪಡಿಕಟ್ಟು ತಾನಾಗಿ ಗೊತ್ತಾಗುತ್ತದೆ. ಒಡಹುಟ್ಟಿದವಳನ್ನು ಕೊಟ್ಟಮೇಲಾದರೂ ಅವರು ಸದಸದ್ವಿವೇಕ ಬುದ್ಧಿಯುಳ್ಳವರಾಗುವರೆಂದು ನಂಬಿದ್ದೆನು. ಆದರೆ ಅವರು ತಮ್ಮ ಕಾಯಕವನ್ನು ಬಿಡಲಿಲ್ಲ. ಮುಂಜರಾಜರು ಘನವಿದ್ವಾಂಸರೂ, ಗುಣಗ್ರಾಹಿಗಳೂ, ಶೂರರೂ, ಸಾಹಸಿಗಳೂ ಇರುವರು. ಅಂತಹರ ಸೇವೆಮಾಡಹತ್ತಿದರೆ ಏಕನಿಷ್ಠ ಸೇವಕನು ಅಭ್ಯುದಯ ಹೊಂದುವನು."

"ಎಲ್ಲವೂ ನಿಜವು. ಅಂತಹ ಮಹಾತ್ಮರಿಗೆ ಈಗಿನ ಕಾಲದಲ್ಲಿ ಸೌಖ್ಯವಿರುವದಿಲ್ಲ. ಏನೋ ಕಾಲಗತಿಯಿಂದ ಅವರು ಬಂಧಮುಕ್ತರಾದರೆಂದರೆ ನಾನಂತು ಅವರ ಸೇವೆಯಲ್ಲಿರಬೇಕೆಂದು ನಿಶ್ಚಯಿಸಿರುವೆನು. ಪರಮಾತ್ಮನು ಅಂತಹ ಸಂಧಿಗಳನ್ನು ಬೇಗನೆ ಒದಗಿಸಿಕೊಟ್ಟರೆ ಒಳಿತಾಗುವದು. ನಮ್ಮ ಮಹಾರಾಜನು ಐಶ್ವರ್ಯಾಂಧನಿರುವನು. ಅವನಿಗೆ ನಿಜವಾದ ಸ್ವಾಮಿನಿಷ್ಠರ ಪರೀಕ್ಷೆಯಿಲ್ಲ. ಇಂದು ಮಂತ್ರಿಯಾಗಿದ್ದವನು ನಾಳೆ ದ್ವಾರಪಾಲಕನಾಗಬಹುದು; ದ್ವಾರಪಾಲಕನು ಮಂತ್ರಿಯಾಗಬಹುದು. ಈ ಬಗೆಯ ಹಗಲುವಾಡಿಯಿಂದ ದೇಶಕ್ಕೆ ಹಿತವಾಗುವದೆ?"

"ನಾಥರೆ, ಇಷ್ಟು ದಿನಗಳವರೆಗೆ ಮಹಾರಾಜರು ಎಂತಹರಿರುವರೆಂಬದರ ಕಲ್ಪನೆಯು ನಿಮಗಿದ್ದಿಲ್ಲ. ಮಾಳವದ ಮಹಾರಾಜರೂ ಮಹಾರಾಣಿಯವರೂ

ಮಾತ್ರ ಸದ್ಗುಣಿಗಳೂ ಗುಣಗ್ರಾಹಿಗಳೂ ಇರುವರು. ಅವರು ತಮ್ಮ ಕೈಕೆಳಗಿನ ಪರಿಚಾರಕರ ಗುಣಗಳನ್ನು ಅರಿತುಕೊಂಡು ಯೋಗ್ಯತೆಗೆ ಸರಿಯಾದ ಗೌರವ ಕೊಡುವರು."

"ಎಲ್ಲವೂ ನಿಜವು; ಆದರೆ ಮಾಡುವದೇನು? ಅವರು ಈಗ ಬಂಧನೆಯಲ್ಲಿ ಸಿಲುಕಿರುವದರಿಂದ ನಮ್ಮಂತಹರಿಗೆ ಏನು ನೆರವು ಮಾಡುವಂತಿರುವರು?"

"ಪ್ರಿಯಕರಾ, ಅವರು ಬಂಧವಿಮೋಚನೆ ಹೊಂದಿ ತಮ್ಮ ರಾಷ್ಟ್ರಕ್ಕೆ ಹೋದ ಮೇಲೆ ನೀವು ಅವರ ರಾಜ್ಯದಲ್ಲಿ ಸೇವೆ ಮಾಡಿಕೊಂಡಿರಲಿಕ್ಕೆ ಒಪ್ಪುವಿರಾ?"

"ಅವಶ್ಯ, ಅವಶ್ಯ! ಕುರುಡನು ಬೇಡುವದೇನು? ಪ್ರಿಯೆ, ನಾನು ಇದಕ್ಕಿಂತ ಮುಂಚಿತವಾಗಿ ಜಾಣನಾಗಿದ್ದರೆ ಇಷ್ಟು ಹೊತ್ತಿಗೆ ಮುಂಜರಾಜರನ್ನು ಮಾಳವಕ್ಕೆ ತಲುಪಿಸುತ್ತಿದ್ದೆನು. ಆಗ ನನಗೆ ಈ ಬುದ್ಧಿಯು ಹುಟ್ಟಲಿಲ್ಲ. ನಾನು ಬೆಳ್ಳಗಿದ್ದದ್ದನ್ನೆಲ್ಲ ಹಾಲೆಂದು ನಂಬಿ ಕೆಟ್ಟೆನು."

ಹಂಸನಾಯಕನು ನಿಟ್ಟುಸಿರುಗರೆದನು. ಅವನ ಮನಸ್ಥಿತಿಯನ್ನು ನೋಡಿ ಪ್ರಭಾವತಿಗೆ ಆನಂದವಾಯಿತು. ಆಗ ಅವಳು—"ನಾಥರೆ, ನೀವು ಎಷ್ಟು ಬಗೆಯ ಪ್ರಯತ್ನದಿಂದ ಮುಂಜರಾಜರನ್ನು ಕಾಯುತ್ತಿದ್ದರೂ, ವೇಳೆಯೊದಗಿದ ಕೂಡಲೆ ಅವರು ಬಂಧ ಮುಕ್ತರಾಗುವರು."

"ಪ್ರಭೆ!—"

"ಮತ್ತೇನು ನಾಥಾ?"

"ಇದೇನು ಆನಂದದ ವಾರ್ತೆಯನ್ನು ಹೇಳಿದೆ?"

ಪ್ರಭಾವತಿಯು ತನ್ನ ಪ್ರಿಯಕರನ ಕಿವಿಯಲ್ಲಿ ಕಾರಸ್ಥಾನದ ಎಲ್ಲ ಸಂಗತಿಗಳನ್ನು ತಿಳಿಸಿ—"ನಾಳೆ ಮಧ್ಯರಾತ್ರಿಗೆ ಕಾರಸ್ಥಾನವೆಲ್ಲವೂ ಪೂರೈಸಲ್ಪಡುವದು."

"ಆನಂದ! ಆನಂದ!!"

"ನಾಥರೆ, ನಾವು ನಾಳೆಗೆ ಅವರೊಡನೆ ಪ್ರಯಾಣಮಾಡೋಣವೆ?"

"ಓಹೋ! ಇನ್ನು ಮೇಲೆ ಅನುಮಾನವೇಕೆ?"

ರಾಜಕಾರಸ್ಥಾನದ ವಿಷಯವಾಗಿ ಆ ದಂಪತಿಗಳು ಕೆಲವು ಹೊತ್ತು ಮಾತುಕಥೆಗಳನ್ನಾಡುತ್ತ ಕುಳಿತಿದ್ದರು. ಹಂಸನಾಯಕನು ತನ್ನ ಚಾತುರ್ಯದಿಂದ ಸಾಧುಭಾವದ ಪತ್ನಿಯಿಂದ ರಹಸ್ಯವನ್ನೆಲ್ಲ ಅರಿತುಕೊಂಡನು.

ಮಾರನೆಯದಿನ ಬೆಳಿಗ್ಗೆ ಹಂಸನಾಯಕನು ದುರ್ಗಾನಾಥನಿಗೆ ಕಾರಸ್ಥಾನದ ಸಂಗತಿಗಳನ್ನು ತಿಳಿಸಿದನು. ತನ್ನಂತಹ ನಾಮಾಂಕಿತ ಗುಪ್ತರಹಸ್ಯ ಶೋಧಕನನ್ನು ಮಣ್ಣು ಮುಕ್ಕಿಸಿದ ಮಾಳವ ಮಹಾಮಂತ್ರಿ ರುದ್ರಾದಿತ್ಯನ ಬುದ್ಧಿಚಾತುರ್ಯವನ್ನು ದುರ್ಗಾನಾಥನು ಬಹಳವಾಗಿ ಕೊಂಡಾಡಿದನು. ಅನಂತರದಲ್ಲಿ ಅವನು ಹಂಸನಾಯಕನನ್ನು ಕುರಿತು—

"ನಾನು ಈಗಲೆ ಮಹಾರಾಜರ ಬಳಿಗೆ ಹೋಗಿ ಅವರಿಗೆ ಗುಪ್ತಕಾರಸ್ಥಾನದ ಎಲ್ಲ ಸಂಗತಿಗಳನ್ನು ಹೇಳುವೆನು. ನೀವು ಮಾತ್ರ ಈ ರಹಸ್ಯವನ್ನು ಗುಪ್ತವಾಗಿರಿಸಿರಿ" ಎಂದು ನುಡಿದು, ದುರ್ಗಾನಾಥನು ಅರಮನೆಯ ಕಡೆಗೆ ತೆರಳಿದನು.

ಮಧ್ಯರಾತ್ರಿಯ ಸಮಯವಾಗಿತ್ತು. ಮಾನ್ಯಖೇಟ ರಾಜಧಾನಿಯಲ್ಲಿ ಎಲ್ಲ ಕಡೆಯಲ್ಲಿ ಶಾಂತತಾ ಸಾಮ್ರಾಜ್ಯವು ಪ್ರಸ್ಥಾಪಿತವಾಗಿತ್ತು. ಪ್ರಮೋದಮಂದಿರದಲ್ಲಿ ಮುಂಜರಾಜನು ತನ್ನ ಪ್ರಿಯಪತ್ನಿಯಾದ ಕುಸುಮಕುಮಾರಿಯೊಡನೆ ಮಾ-ತಾಡುತ್ತ ಕುಳಿತಿದ್ದನು. ಅಷ್ಟರಲ್ಲಿ ಅವರು ಕುಳಿತ ಸ್ಥಳದ ಸಮೀಪದಲ್ಲಿದ್ದ ಗೋಡೆಯಲ್ಲಿ ಮನುಷ್ಯರು ಪ್ರವೇಸಿಸುವಷ್ಟು ದೊಡ್ಡ ಕಿಂಡಿಯು ಬಿತ್ತು. "ಮಹಾರಾಜರೆ! ಬೇಗ ಬನ್ನಿರಿ!" ಎಂಬ ಶಬ್ದವಾದರೂ ಆ ಕಿಂಡಿಯಿಂದ ಹೊರಬಿತ್ತು. ಕೂಡಲೆ ಮುಂಜರಾಜನು—"ಪ್ರಿಯೆ, ಬೇಗ ಹೊರಡು!"

"ಮಹಾರಾಜರೆ, ಗೋಡೆಯೊಳಗಿನ ಕಿಂಡಿಯಿಂದ ಹೊರಗೆ ಹೋದರೆ ಕಾವಲುಗಾರರು ನಮ್ಮನ್ನು ನೋಡಲಿಕ್ಕಿಲ್ಲವೆ?"

"ಪ್ರಿಯೆ, ನೀನು ಈ ವೇಳೆಯಲ್ಲಿ ಇಲ್ಲದ ಆಲೋಚನೆ ಮಾಡಬೇಡ. ಆ ಕಿಂಡಿಯು ನೆಲದೊಳಗಿಂದ ಬಂದಿರುವದು" ಎಂದು ಮುಂಜರಾಜನು ನುಡಿದು ದಾಸಿಯಾದ ಪ್ರಭಾವತಿಯನ್ನು ಕುರಿತು—"ಹಂಸನಾಯಕನು ಇನ್ನೂ ಬರಲಿಲ್ಲವಲ್ಲ? ಬೇಗನೆ ಕರೆದುಕೊಂಡು ಬಾ. ಅವನು ಇಲ್ಲಿಯೆ ಪಟಾಂಗಣದ ಬಾಗಿಲ ಬಳಿಯಲ್ಲಿರಬಹುದು."

"ಪ್ರಭಾವತಿ, ಬೇಗ ಬಾ" ಎಂದು ಕುಸುಮಕುಮಾರಿಯು ಪ್ರಭಾವತಿಗೆ ಹೇಳಿದಳು. ಅರಸು ಅರಸಿಯರ ಆಜ್ಞೆಯ ಮೇರೆಗೆ ಪ್ರಭಾವತಿಯು ಹೊರಗೆ ಹೋಗುವಷ್ಟರಲ್ಲಿ ಹಂಸನಾಯಕನು ಎದುರಿಗೆ ಬಂದನು. ಕೂಡಲೆ ಇಬ್ಬರೂ ಕುಸುಮಕುಮಾರಿ-ಮುಂಜರಾಜರಿದ್ದ ಸ್ಥಳಕ್ಕೆ ಬಂದರು ಆಗ ಮುಂಜರಾಜನು: "ಹಂಸನಾಯಕ, ಇಷ್ಟೇಕೆ ತಡಮಾಡಿದೆ?"

"ಮಹಾರಾಜರೆ, ನನ್ನಿಂದ ತಡವಾಗಿಲ್ಲ. ಈಗ ಮಧ್ಯರಾತ್ರಿಯಾಗುತ್ತ ಬಂದಿದೆ. ಇನ್ನು ತಡವೇಕೆ? ಹೊರಬೀಳಿರಿ."

ಮುಂಜರಾಜನು ಕುಳಿತ ಸ್ಥಳದಿಂದೆದ್ದನು. ಅನಂತರದಲ್ಲಿ ಎಲ್ಲರೂ ಅವನನ್ನು ಹಿಂಬಾಲಿಸಿದರು. ಅಷ್ಟರಲ್ಲಿ—"ಘಾತುಕ ಮಂಜರಾಜಾ! ಭ್ರಾತೃದ್ರೋಹಿ ದೇಶದ್ರೋಹಿ ಕುಸುಮಕುಮಾರಿ!" ಎಂಬ ಸ್ವರವು ಕೇಳಬಂತು. ಪರಕ್ಷಣದಲ್ಲಿ ಕರ್ನಾಟಕ ಸಮ್ರಾಟನಾದ ತೈಲಪದೇವನು ಅಲ್ಲಿ ಪ್ರವೇಶಿಸಿದನು. ಅವನ ಹಿಂದೆ ಕೆಲವು ಸಶಸ್ತ್ರ ಸೈನಿಕರೂ ದುರ್ಗಾನಾಥನೂ ಬಂದಿದ್ದರು.

ತೈಲಪದೇವನ ಆಕಸ್ಮಿಕ ಆಗಮನದಿಂದ ಕುಸುಮಕುಮಾರಿಯೂ ಮುಂಜರಾಜನೂ ಬೆಚ್ಚಿಬಿದ್ದರು. ಪ್ರಭಾವತಿಯು ಹೆದರಿದ ಹರಿಣೆಯಂತೆ ಕಕ್ಕಾವಿಕ್ಕಿಯಾಗಿ ನೋಡತೊಡಗಿದಳು. ಅಷ್ಟರಲ್ಲಿ ಸೈನಿಕರು ತೈಲಪದೇವನ ಆಜ್ಞೆಯಮೇರೆಗೆ

ಮುಂಜರಾಜನನ್ನು ಚತುರ್ಭುಜನನ್ನಾಗಿ ಮಾಡಿದರು. ಆಗಲೇ "ಘಾತ! ಘಾತ!!" ಎಂಬ ಸ್ವರವು ಕಿಂಡಿಯೊಳಗಿಂದ ಕೇಳಿತು. ಸೈನಿಕರು ಕೈಯಲ್ಲಿ ಪಂಜು ತೆಗೆದು ಕೊಂಡು ಕಿಂಡಿಯಲ್ಲಿ ನೋಡಲು ಅಲ್ಲಿ ಯಾರೂ ಇದ್ದಿಲ್ಲ!

ಯುದ್ಧದಲ್ಲಿ ಪರಾಭವಗೊಂಡ ಮುಂಜರಾಜನ ಜೀವಕ್ಕೆ ಅಪಾಯ ಮಾಡದೆ ಬೇಕಾದಂತಹ ರಾಜವಿಲಾಸಗಳನ್ನೊದಗಿಸಿಕೊಟ್ಟು, ತನ್ನ ಒಡಹುಟ್ಟಿದವಳನ್ನು ಧಾರೆಯೆರೆದು ಕೊಟ್ಟಿದ್ದರೂ, ಅವನು ಮೋಸಗಾರಿಕೆಯಿಂದ ಜಾರಿಹೋಗಲೆತ್ನಿಸಿದ್ದನ್ನು ನೋಡಿ ತೈಲಪದೇವನಿಗೆ ಪರಮಾವಧಿಯಾದ ಸಂತಾಪವಾಯಿತು. ಆಗ ಅವನು ಕ್ರೋಧದಿಂದ—"ನಿರ್ಲಜ್ಜ ಮುಂಜರಾಜಾ, ನಾನು ನಿನ್ನೊಡನೆ ಎಷ್ಟು ಸರಳವಾಗಿ ನಡೆದರೂ, ನೀನು ಕಪಟಾಚರಣೆಯನ್ನು ಕಡೆಗೂ ಬಿಡಲಿಲ್ಲ. ನಾನು ನಿನಗೆ ತೋರಿಸಿದ ದಯಾಳುತನದ ಪ್ರತಿಫಲವನ್ನು ಚನ್ನಾಗಿ ಕೊಟ್ಟೆ. ನೀನು ದೊಡ್ಡ ವಿದ್ವಾಂಸನಿರುವೆ; ಶೂರನಿರುವೆ; ಸಾಹಸಿಯಿರುವೆ. ಇದೇ ಕಾರಣದಿಂದ ನಾನು ನಿನಗೆ ಭಗಿನೀದಾನಮಾಡಿದೆನು. ನೀನು ಎಲ್ಲ ವಿಧದ ಸ್ನೇಹಸಂಬಂಧ ಮರೆತು ನಿನ್ನ ಕಾಯಕವನ್ನು ನಡೆಯಿಸಿದೆ. ಧಾರಾನಗರಿಯಲ್ಲಿ ದಂಡಯಾತ್ರೆಯ ಸಿದ್ಧತೆಯು ನಡೆದಿರುವದೆಂದು ಕೇಳುತ್ತೇನೆ. ಅಲ್ಲಿಯ ಪ್ರಚಂಡವಾದ ಸೈನ್ಯಕ್ಕೆ ನಿನ್ನಂತಹ ಸೇನಾಪತಿಯ ಆವಶ್ಯಕತೆಯಿದ್ದದ್ದರಿಂದ ನಿನ್ನ ಮಂತ್ರಿಯಾದ ರುದ್ರಾದಿತ್ಯನು ಅದ್ಭುತವಾದ ಕಾರಸ್ಥಾನರಚಿಸಿದನು. ನೀನು ಕರ್ನಾಟಕ ಸಾಮ್ರಾಜ್ಯವನ್ನು ಉಧ್ವಸ್ತಗೊಳಿಸಬೇಕೆಂಬ ದೃಢನಿಶ್ಚಯವುಳ್ಳವನಾಗಿಯೇ ಇಲ್ಲಿಂದ ಹೊರಟಿದ್ದೆಯಲ್ಲವೆ? ಕರ್ನಾಟಕದ ಸಾರ್ವಭೌಮನೊಡನೆ ಕಾದಿ ಜಯಸಂಪಾದನೆ ಹೊಂದುವ ಆಶೆಯುಳ್ಳವನು ಇಡೀ ಮಾಳವದಲ್ಲಿ ನಿನ್ನ ಹೊರತು ಮತ್ತಾರೂ ಇಲ್ಲ. ನಿನ್ನಂತಹ ದೀರ್ಘಾಕಾಂಕ್ಷೆಯ ಶತ್ರುವನ್ನು ನಾಶಗೊಳಿಸುವದು ನನ್ನ ಕರ್ತವ್ಯವಾಗಿರುವದು. ನಾನು ಈ ವಿಷಯದಲ್ಲಿ ಮುಂಚಿತವಾಗಿ ನಿನಗೆ ಹೇಳಿರುವೆನು."

"ತೈಲಪಾ, ಕೆಲಸವು ಕೆಟ್ಟು ಹೋಗಿರುವದು. ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಕರ್ನಾಟಕ ಸಾಮ್ರಾಜ್ಯದ ಪುಣ್ಯವು ಬಲವತ್ತರವಿರುವದರಿಂದಲೆ ನಮ್ಮ ಕಾರಸ್ಥಾನವು ವ್ಯರ್ಥವಾಯಿತು. ನನ್ನನ್ನು ನಾಶಗೊಳಿಸುವೆಯೆಂಬ ಭಯದಿಂದ ನಿನಗೆ ಕೈಜೋಡಿಸಿ ಬೇಡಿಕೊಳ್ಳಲಾರೆನು. ನನ್ನ ಕೊಲೆಯು ಶೂರ ಮಾಳವೇಯರ ಕ್ಷಾತ್ರ ತೇಜವನ್ನು ಮತ್ತಿಷ್ಟು ಪ್ರಖರಪಡಿಸದೆ ಇರಲಿಕ್ಕಿಲ್ಲ"

"ಮಾಳವೇಯರಲ್ಲಿ ಪೌರುಷವಿದ್ದರೆ ನೀನು ಇಷ್ಟು ದಿನಗಳ ವರೆಗೆ ಸೆರೆಯಲ್ಲಿ ಕೊಳೆಯುತ್ತ ಬೀಳುತ್ತಿರಲಿಲ್ಲ ರುದ್ರಾದಿತ್ಯನ ಹೇಸಿ ಕಾರಸ್ಥಾನದಲ್ಲಿ ಸೇರಿ ನೀನು ಕಳ್ಳನಂತೆ ಓಡಿ ಹೋಗುತ್ತಿರಲಿಲ್ಲ. ಮುಂಜಾ, ನಿನ್ನ ಆಯುಷ್ಯವು ಮುಗಿಯಿತೆಂದು ತಿಳಿದುಕೊ."

ತೈಲಪದೇವನ ಗರ್ಜನೆಯಿಂದ ಕುಸುಮಕುಮಾರಿಯ ಹೃದಯವು ಭಯ ವಿಹ್ವಲವಾಯಿತು. ಅವಳು ದೀನಸ್ವರದಿಂದ—"ಅಣ್ಣಾ, ನನಗೆ ಸೌಭಾಗ್ಯ ದಾನ

ಮಾಡಿರಿ. ನಾನು ನಿಮ್ಮ ಭಗಿನಿಯಲ್ಲವೆ? ನೀವು ಮಾಳವ ಸಾರ್ವಭೌಮರ ಜೀವಕ್ಕೆ ಅಪಾಯ ಮಾಡಿದರೆ ನನ್ನ ಸೌಭಾಗ್ಯವನ್ನೇ ನಾಶಮಾಡಿದಂತಾಗುವದಿಲ್ಲವೆ?"

"ದುಷ್ಟೆ!" ತೈಲಪದೇವನು ಕಠೋರಧ್ವನಿಯಿಂದ—"ನೀನು ವಿಶ್ವಾಸ ಘಾತಕಿಯಾದದ್ದರಿಂದ ಮುಂಜನ ಕಾರಸ್ಥಾನವು ನಡೆಯಲಿಕ್ಕೆ ಮಾರ್ಗವಾಯಿತು. ನೀನು ದೇಶದ್ರೋಹಿಯು! ಬಂಧು ಘಾತಕಿಯು! ಚಾಂಡಾಲಿನಿಯು! ನಿನ್ನ ಸೌಭಾಗ್ಯವನ್ನು ಸೂರೆ ಮಾಡುವದರಲ್ಲಿಯೆ ನನ್ನ ಆತ್ಮಶಾಂತಿಯಿರುತ್ತದೆ. ರಾಕ್ಷಸಿಯೆ, ನಾನು ನಿನ್ನ ಇಚ್ಛೆಯನ್ನು ನೆರವೇರಿಸುವದಕ್ಕಾಗಿ ವೈರಿಯೊಡನೆ ಶರೀರಸಂಬಂಧ ಮಾಡಿದೆನು. ಮೈತ್ರಿಯು ನೆಲೆಗೊಳ್ಳಬೇಕೆಂದು ಶಕ್ತಿಮೀರಿ ಯತ್ನಿಸಿದೆನು. ನಾನು ಹಾವಿಗೆ ಹಾಲೆರೆದೆನೆಂಬದು ಇಂದು ತಿಳಿಯಿತು. ದುರಾಕಾಂಕ್ಷಿಯಾದ ಈ ಮುಂಜನಿಗೆ ಜೀವದಾನ ಕೊಡುವದಿಲ್ಲ ಇದೇ ನನ್ನ ನಿಶ್ಚಯವು"

"ಅಣ್ಣಾ, ನಾನಾದರೂ ನಿಮ್ಮ ನಿಶ್ಚಯವನ್ನೇಕೆ ತಿರುಗಿಸಲಿ. ನನ್ನ ನಾಥರು ಮರಣಕ್ಕೆ ಅಂಜುವಂತಹ ಹೇಡಿಗಳಲ್ಲ. ನನ್ನ ವಿನಂತಿಯೇನಂದರೆ, ಮೊದಲು ನನ್ನನ್ನು ಸಂಹರಿಸಿ, ಅನಂತರದಲ್ಲಿ ನಿಮ್ಮ ಮನಸ್ಸಿಗೆ ತಿಳಿದಹಾಗೆ ಮಾಡಿರಿ."

"ರಾಕ್ಷಸಿ, ನಾನು ನಿನ್ನ ಯಾವ ವಿನಂತಿಯನ್ನು ಮನ್ನಿಸುವದಿಲ್ಲ. ಈ ಮದಾಂಧ ಮುಂಜನು ನನ್ನೊಡನೆ ಸ್ನೇಹದಿಂದಿರುವನೆಂಬದರ ವಿಶ್ವಾಸವಾಗಿದ್ದರೆ, ನಾನು ಇವನನ್ನು ಸುರಕ್ಷಿತವಾಗಿ ಧಾರಾನಗರಿಗೆ ಕಳುಹಿಸುತ್ತಿದ್ದೆನು; ನೀನು ನಿನ್ನ ಪತಿಯೊಡನೆ ಸೌಖ್ಯದಿಂದ ಕಾಲಹರಣ ಮಾಡುತ್ತಿದ್ದೆ. ನಿನ್ನ ಹಾಗು ಮುಂಜರಾಜನ ದುರ್ದೈವಕ್ಕೆ ಯಾರೇನುಮಾಡಬೇಕಾಗಿದೆ? 'ಬುದ್ಧಿಃ ಕರ್ಮಾನುಸಾರಿಣೀ' ಎಂಬ ಮಾತಿನ ಅನುಭವವಾದಂತಾಯಿತು."

"ತೈಲಪಾ, ನೀನು ಇಷ್ಟೇಕೆ ವಾದ-ವಿವಾದ ನಡೆಯಿಸಿರುವೆ? ನೀನು ನನಗೆ ಯಾವ ವಿಧದ ಶಾಸನವನ್ನು ವಿಧಿಸಬೇಕೆನ್ನುವೆ? ನೀನು ನನಗೆ ಮರಣದಂಡನೆಯನ್ನು ವಿಧಿಸುವೆಯಾ? ನಾನು ಅದಕ್ಕೆ ಸಿದ್ಧನಾಗಿರುವೆನು." ಎಂದು ಮುಂಜರಾಜನು ನುಡಿದು ಕುಸುಮಕುಮಾರಿಯನ್ನು ಕುರಿತು—"ಪ್ರಿಯೆ, ನೀನು ಈ ಪಾಷಾಣಹೃದಯಿಗೆ ಇಷ್ಟೇಕೆ ಬೇಡಿಕೊಳ್ಳುವೆ? ನನ್ನ ಮರಣಾನಂತರದಲ್ಲಿ ತೈಲಪನ ಸೇಡು ತೀರಿಸಿಕೊಳ್ಳುವದಕ್ಕಾಗಿ ಪ್ರಯತ್ನ ಮಾಡುವಂತೆ ನನ್ನ ಅನುಜ ಸಿಂಧುರಾಜನಿಗೂ ಅವನ ಪುತ್ರನಾದ ಕುಮಾರ ಭೋಜರಾಜನಿಗೂ ಉಪದೇಶಿಸು."

ಕುಸುಮ ಕುಮಾರಿಯ ನೇತ್ರಗಳು ಸಜಲವಾದವು. ಅವಳು ಗದ್ಗದ ಕಂಠದಿಂದ—"ನಾಥರೆ, ನಿಮ್ಮ ಚಿರಂತನವಾದ ವಿಯೋಗವನ್ನು ನಾನು ಹೇಗೆ ಸಹಿಸಲಿ?" ಎಂದು ನುಡಿದವಳೆ ಭೂಮಿಗೆ ಬಿದ್ದು ಮೂರ್ಛಿತಳಾದಳು. ದಾಸಿಯರ ಶೈತ್ಯೋಪಚಾರದಿಂದ ಅವಳು ಎಚ್ಚತ್ತು, ಒದಗಿದ ದುರಂತರವನ್ನು ನೆನಿಸಿ ಪ್ರಲಾಪಿಸತೊಡಗಿದಳು. ತೈಲಪದೇವನು ಅವಳನ್ನು ಬಂಧನೆಯಲ್ಲಿರಿಸುವದಕ್ಕೆ ಸೇವಕ

ರಿಗೆ ಆಜ್ಞಾಪಿಸಿ, ಮುಂಜರಾಜನನ್ನು ಸೆರೆಮನೆಯಲ್ಲಿ ಹಾಕಬೇಕೆಂದು ಹಂಸನಾಯಕನಿಗೆ ಹೇಳಿದನು.

ರುದ್ರಾದಿತ್ಯನು ಬೌದ್ಧಭಿಕ್ಷುಗಳನ್ನು ಕಪಟಾಚರಣೆಯಿಂದ ತನ್ನ ಕಡೆಗೆ ಒಡೆದುಕೊಂಡ ಸಂಗತಿಯು ಹಂಸನಾಯಕನ ಮುಖಾಂತರವಾಗಿ ತೈಲಪದೇವನಿಗೆ ತಿಳಿಯಿತು. ಕೂಡಲೆ ಅವನು ವಿಹಾರವನ್ನು ಶೋಧಿಸುವದಕ್ಕಾಗಿ ಸೈನಿಕರನ್ನು ಕಳುಹಿದನು. ಸೈನಿಕರು ವಿಹಾರವನ್ನೂ ಮರಡಿಯೊಳಗಿನ ಗುಹೆ ಕೊಳ್ಳ ಮೊದಲಾದವುಗಳನ್ನೂ ಶೋಧಿಸಿದರು. ಅಲ್ಲಿ ಸರ್ವಾರ್ಥಸಿದ್ಧಿ ಧರ್ಮಘೋಷರ ಹೊರತು ಒಂದು ಪಿಳ್ಳೆಯಾದರೂ ಕಾಣಲಿಲ್ಲ

ಮಾರನೆಯ ದಿನ ಬೌದ್ಧತಾಪಸತಾಪಸಿಯರು ತೈಲಪದೇವನನ್ನು ಕಂಡು ಧರ್ಮದ ಹುಚ್ಚಿಗೆ ಬಿದ್ದು ತಮ್ಮಿಂದ ಪ್ರಮಾದವು ಘಟಿಸಿತೆಂದು ಹೇಳಿದರು. ತನ್ನ ಕಾರಸ್ಥಾನವು ವ್ಯರ್ಥವಾಯಿತೆಂಬದು ತಿಳಿದ ಕೂಡಲೆ ರುದ್ರಾದಿತ್ಯನು ತನ್ನ ಸಂಗಡಿಗರೊಡನೆ ಪಲಾಯನ ಮಾಡಿದ ಸಂಗತಿಯನ್ನಾದರೂ ಅವರು ಹೇಳಿದರು.

ಕುಸುಮಕುಮಾರಿಯು ದಾಸಿಯಾದ ಪ್ರಭಾವತಿಯನ್ನು ಕಾರಸ್ಥಾನದಲ್ಲಿ ಸೇರಿಸಿಕೊಂಡದ್ದರಿಂದಲೂ, ಪ್ರಭಾವತಿಯು ಸಾಧುಭಾವವನಳಿದ್ದುದರಿಂದ ಪತಿಯ ಕಪಟಜಾಲದಲ್ಲಿ ಸಿಲುಕಿದ್ದರಿಂದಲೂ ರಹಸ್ಯಸ್ಫೋಟವಾಗಿ ಮುಂಜರಾಜನ ಜೀವದ ಮೇಲೆ ಪ್ರಸಂಗವೊದಗಿತು.



# ಚಾಲುಕ್ಯರ ಅಭ್ಯುದಯ.

ಪರಮಾರ ಮುಂಜರಾಜನು ಮಹಾ ಬಲಿಷ್ಠನಿದ್ದುದರಿಂದ ಅವನು ತನ್ನ ಸ್ವಾಧೀನದಲ್ಲಿರಬೇಕೆಂದು ತೈಲಪದೇವನ ಇಚ್ಛೆಯಿತ್ತು. ಮುಂಜರಾಜನಿಗೆ ತೈಲಪದೇವನು ತನ್ನ ಭಗಿನಿಯನ್ನು ಕೊಟ್ಟು ಬಹಳೇ ಮನ್ನಣೆ ಕೊಡುತ್ತಲಿದ್ದನು. ಆದರೆ ಪಾರತಂತ್ರ್ಯದಲ್ಲಿ ಕೊಳೆಯುವದು ಸ್ವಾಭಿಮಾನಿಯಾದ ಮುಂಜರಾಜನಿಗೆ ಅಸಹ್ಯವಾಯಿತು. ಅವನು ರುದ್ರಾದಿತ್ಯನ ಆಲೋಚನೆಯಂತೆ ನೆಲಮಾರ್ಗದಿಂದ ಪಾರಾಗಲು ಹವಣಿಸತೊಡಗಿದನು. ಆದರೆ ಅವನ ಸಾಹಸವು ಹೇಗೆ ವ್ಯರ್ಥವಾಯಿತೆಂಬದು ವಾಚಕ ಮಹಾಶಯರಿಗೆ ಗೊತ್ತಾಗಿರುವದು.

ತೈಲಪದೇವನ ಹೃದಯವು ಕುಸುಮಕ್ಕಿಂತ ಮೃದುವಾಗಿದ್ದರೂ, ಪ್ರಸಂಗ ವಿಶೇಷದಲ್ಲಿ ಅದು ವಜ್ರಕ್ಕಿಂತ ಕಠೋರವಾಗುತ್ತಿತ್ತು. ಕರ್ನಾಟಕ ಸಾಮ್ರಾಜ್ಯದಲ್ಲಿ ಶಾಂತತೆಯುಂಟಾಗಿ ಅದು ಸ್ಥಿರವಾಗಿ ಸ್ವಾತಂತ್ರ್ಯವನ್ನನುಭವಿಸಬೇಕೆಂಬ ಉದ್ದೇಶದಿಂದ ಅವನು ಮುಂಜರಾಜನೊಡನೆ ಸ್ನೇಹಸಂಬಂಧ ಬೆಳೆಯಿಸಿದನು. ಮುಂಜರಾಜನ ಮನಸ್ಸಿನೊಳಗಿನ ದುಷ್ಟ ಸ್ವಾರ್ಥೀ ವಿಚಾರಗಳು ನಾಶಹೊಂದಬೇಕೆಂದು ಅವನು ಬಹಳ ಸಾಹಸ ಮಾಡಿದನು. ಏನು ಮಾಡಿದರೂ ಮುಂಜರಾಜನ ಗುಣವು ಸ್ಥಿತ್ಯಂತರ ಹೊಂದುವದಿಲ್ಲೆಂಬದು ತೈಲಪದೇವನಿಗೆ ನಂಬಿಗೆಯಾಯಿತು. ಮುಂಜರಾಜನು ಕರ್ನಾಟಕದ ಅಸ್ವಸ್ಥ್ಯಕಾರಿಯಾಗಿದ್ದನು. ಅವನ ತಮ್ಮನಾದ ಸಿಂಧುರಾಜನು ದಂಡಯಾತ್ರೆಯ ಪ್ರಚಂಡವಾದ ಸಿದ್ಧತೆ ಮಾಡಿಕೊಂಡಿದ್ದನು. ಮಾಳವೇಯರಿಗೆ ಮುಂಜರಾಜನಂತಹ ಪ್ರತಾಪಶಾಲಿಯ ಸಹಾಯವು ಬೇಕಾಗಿತ್ತು. ಮುಂಜರಾಜನು ಕಾರಾಗೃಹದಲ್ಲಿದ್ದುದರಿಂದ ಮಾಳವೇಯರು ಇಷ್ಟುದಿನ ಕೈಕಟ್ಟಿದ್ದರು. ಅವನು ಬಿಡುಗಡೆ ಹೊಂದಿದ ಕೂಡಲೆ ಮಾಳವ ಸೇನಾಸಾಗರವು ಕರ್ನಾಟಕದ ಮೇಲೆ ಸಾಗಿಬರುವದೆಂಬದು ತೈಲಪದೇವನಿಗೆ ತಿಳಿಯಿತು. ಮಾಳವ ಸೇನಾಸಮುದ್ರಕ್ಕೆ ಮುಂಜರಾಜನಂತಹ ಬಲಾಢ್ಯನ ಆಧಿಪತ್ಯವು ದೊರೆತರೆ ಕರ್ನಾಟಕದಲ್ಲಿ ಕೋಲಾಹಲವೆಬ್ಬಿಸುವದೆಂದು ತೈಲಪದೇವನು ಮನವರಿಕೆ ಮಾಡಿಕೊಂಡಿದ್ದನು. ಮುಂಜರಾಜನನ್ನು ಜೀವಂತವಾಗಿ ಉಳಿಸಿದರೆ ಅನಿಷ್ಟವಾಗುವದೆಂಬ ತಿಳುವಳಿಕೆಯಿಂದ ತೈಲಪದೇವನು ಅವನನ್ನು ಕೊಲ್ಲಿಸಬೇಕೆಂದು ನಿರ್ಧರಿಸಿದನು.

ಮುಂಜರಾಜನನ್ನು ಕೊಲ್ಲಿಸದೆ ಬಿಗಿಯಾದ ಸೆರೆಯಲ್ಲಿರಿಸಿ ಬಿಡಬೇಕೆಂದು ಅವನ ಮಂತ್ರಿಗಳಾದ ರಾಮನಾಥ ಮುದ್ದಣರೂ ಸೇನಾಪತಿಗಳಾದ ಸಿದ್ಧಸೇನ ಚಾವುಂಡರಾಯರೂ ಬಹುಪರಿಯಾಗಿ ಹೇಳಿದರು. ಅವನ ತಾಯಿಯಾದ ಬೊಂಥಾದೇವಿಯು ಅವನಿಗೆ ಅನೇಕ ಬಗೆಯಿಂದ ಉಪದೇಶಿಸಿದಳು. ಕುಸುಮ ಕುಮಾರಿಯು ತನಗೆ ಮಾಂಗಲ್ಯದಾನ ಮಾಡಬೇಕೆಂದು ಪ್ರಾರ್ಥಿಸಿದಳು. ಆದರೆ ಸ್ವರಾ

ಜ್ಯರಕ್ಷಣೆಗಾಗಿ ಕಠೋರ ಕರ್ತವ್ಯಯಾಗಿದ್ದ ತೈಲಪದೇವನು. ತನ್ನ ನಿರ್ಧಾರವನ್ನು ಬಿಡಲಿಲ್ಲ. ಅವನು ಓಲಗವನ್ನು ನೆರೆಯಿಸಿ ತಾನು ಕಟುಕರ್ತವ್ಯವನ್ನಾಚರಿಸಬೇಕಾದ ಕಾರಣವನ್ನು ಎಲ್ಲಜನರಿಗೆ ತಿಳಿಸಬೇಕೆಂದು ಗೊತ್ತುಮಾಡಿದನು.

ತೈಲಪದೇವನು ಸಿಂಹಾಸನದ ಮೇಲೆ ಮಂಡಿಸಿದ್ದನು ಮಂತ್ರಿಸಾಮಂತರೂ ಸೇನಾಪತಿ ಸರದಾರರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡಿದ್ದರು. ಸೆರೆಯಾಳಾದ ಮುಂಜರಾಜನು ಸಿಂಹಾಸನದ ಸಮ್ಮುಖದಲ್ಲಿ ಸ್ವಲ್ಪು ಅಂತರದ ಮೇಲೆ ಬಿಚ್ಚುಗತ್ತಿಯ ಕಾವಲಿನಲ್ಲಿ ನಿಂತುಕೊಂಡಿದ್ದನು. ಆಗ ತೈಲಪದೇವನು ಸಭಿಕರನ್ನು ಕುರಿತು—"ನಾವು ಮುಂಜರಾಜನೊಡನೆ ಸ್ನೇಹ ಬಳೆಯಿಸಬೇಕೆಂದು ಅನೇಕ ಪ್ರಕಾರವಾಗಿ ಯತ್ನಿಸಿದೆವು. ಇವನು ನಮ್ಮ ಕಡುಹಗೆಯಾಗಿದ್ದರೂ ನಮ್ಮ ಭಗಿನಿಯಾದ ಕುಸುಮ ಕುಮಾರಿದೇವಿಯನ್ನು ಧಾರೆಯೆರೆದು ಕೊಟ್ಟೆವು. ಇವನಿಗೆ ಅನೇಕ ಪ್ರಕಾರದ ರಾಜವಿಲಾಸಗಳನ್ನೊದಗಿಸಿ ಕೊಟ್ಟೆವು. ಹಾಗು ಬಹುಮಾನದಿಂದ ಇವನನ್ನು ನಡೆಯಿಸಿಕೊಂಡೆವು. ವೈರಿಯು ಸೆರೆಸಿಕ್ಕಿರುವನೆಂದು ಅವನ ಕೊಲೆಮಾಡಬಾರದೆಂದು ನಾವು ನಿರ್ಧರಿಸಿದೆವು ಇಷ್ಟು ಬಗೆಯಾಗಿ ದೊಡ್ಡ ಮನಸ್ಸು ಮಾಡಿದರೂ ಮಾಳವೆಯರ ದುರಾಕಾಂಕ್ಷೆಯು ಕಡಿಮೆಯಾಗಲಿಲ್ಲ. ಅವರು ಸೈನ್ಯದ ಸಿದ್ಧತೆ ಮಾಡಿಕೊಂಡು ಕುಳಿತಿರುವರು ಸಿಂಧುರಾಜನಾಗಲಿ ಅವನ ಸೇನಾಪತಿಗಳಾಗಲಿ ನಮ್ಮ ಮೇಲೆ ದಂಡೆತ್ತಿ ಬರುವದಕ್ಕೆ ಎಡೆಯಿಲ್ಲದವರಾಗಿರುವರು. ಆದ್ದರಿಂದ ಅವರು ಈ ಮುಂಜರಾಜನ ನೆರವನ್ನಪೇಕ್ಷಿಸುತ್ತಿರುವರು. ಅದಕ್ಕಾಗಿ ಕಾರಸ್ಥಾನಿಯಾದ ರುದ್ರಾದಿತ್ಯನು ಅದ್ಭುತ ಸಾಹಸಮಾಡಿ ಮುಂಜರಾಜನನ್ನು ಪಾರಮಾಡಲಿಕ್ಕೆ ಯತ್ನಿಸಿದನು. ಅವನ ಯತ್ನವು ಏಕನಿಷ್ಠರೂ ಕರ್ತವ್ಯದಕ್ಷರೂ ಆದ ನನ್ನ ಸೇವಕರಿಂದ ನಿಷ್ಫಲವಾಯಿತು. ಸ್ವಂದ್ರ ಸ್ವಭಾವದವನಾದ ಮುಂಜರಾಜನಿಗೆ ದಯೆ ತೋರಿಸಿದರೆ ನಾವೇ ಯುದ್ಧದ ಗೊಂದಲವನ್ನುಪಸ್ಥಿತ ಮಾಡಿದಂತಾಗುವದು. ನಾವು ಇವನನ್ನು ನಾಶಗೊಳಿಸಿ ಪ್ರಾಜ್ಯವನ್ನೂ ದ್ವೇಷವನ್ನೂ ಸಮೂಲವಾಗಿ ನಾಶಗೊಳಿಸಬೇಕೆಂದು ಯೋಚಿರುವೆವು. ಇವನ ಅಂತನಾದ ಮೇಲೆ ಸಿಂಧುರಾಜನಾಗಲಿ ಅವನ ಅಧಿಕಾರಿಗಳಾಗಲಿ ನಮ್ಮ ಮೇಲೆ ದಂಡೆತ್ತಿ ಬರಲಿಕ್ಕಿಲ್ಲ. ಒಂದುವೇಳೆ ಬಂದರೂ ನಮಗೆ ಅವರ ಪರಿವೆಯಿಲ್ಲ. ಮುಂಜರಾಜನನ್ನು ಮನೆಮನೆಗೆ ಭಿಕ್ಷೆ ಬೇಡಹಚ್ಚಿ ಕೊಲೆಮಾಡಬೇಕೆಂದು ನನ್ನ ಕಟ್ಟಪ್ಪಣೆಯಿರುವದು"

ಮುದ್ದಣ ಮಂತ್ರಿಯೂ ರಾಮನಾಥನೂ ತೈಲಪದೇವನ ಮನಸ್ಸು ತಿರುಗಿಸಲಿಕ್ಕೆ ಬಹಳವಾಗಿ ಯತ್ನಿಸಿದರು. ಕುಸುಮ ಕುಮಾರಿಯ ಕಡೆಗೆ ಲಕ್ಷ್ಯಗೊಟ್ಟಾದರೂ ಮುಂಜರಾಜನನ್ನು ಜೀವಂತವಾಗಿ ಉಳಿಸಬೇಕೆಂದು ಬೇಡಿಕೊಂಡರು. ಆದರೆ ದೃಢನಿಶ್ಚಯಿಯಾದ ತೈಲಪದೇವನು ತನ್ನ ನಿಶ್ಚಯವನ್ನು ಬಿಡಲಿಲ್ಲ.

ಮುಂಜರಾಜನಿಗೆ ದೇಹಾಂತ ಶಾಸನವನ್ನು ವಿಧಿಸಬೇಕೆಂದು ತೀರ್ಮಾನವಾಯಿತು. ಬಿಚ್ಚುಗತ್ತಿಯಕಾವಲಿನಲ್ಲಿ ಅವನು ದಿನಾಲು ಮನೆಮನೆಗೆ ಭಿಕ್ಷೆಬೇಡ

ಲಿಕ್ಕೆ ಹೋಗಬೇಕಾಗುತ್ತಿತ್ತು. ಕೊಲೆಯ ದಿವಸ ಇವನನ್ನು ಊರಲ್ಲಿ ಮೆರೆಯಿಸಿ ವಧಸ್ಥಾನಕ್ಕೆ ಕರೆದೊಯ್ದರು. ಕಡೆಗೆ ಮಾಳವ ಸಾರ್ವಭೌಮನಾದ ಪರಮಾರ ವಾಕ್ಪತಿ ಮುಂಜರಾಜನ ಕೊಲೆಯಾಯಿತು!

+ + + + + +

ದ್ವೇಷದಿಂದ ದ್ವೇಷವು ಬೆಳೆಯುತ್ತದಲ್ಲದೆ, ಎಂದೂ ಕಡಿಮೆಯಾಗುವದಿಲ್ಲ. ಮುಂಜರಾಜನ ಕೊಲೆಯಾದಮೇಲೆ ಸಿಂಧುರಾಜನು ಪ್ರಚಂಡವಾದ ಸೈನ್ಯವನ್ನು ತೆಗೆದುಕೊಂಡು ಬಂದು ಕರ್ನಾಟಕದ ಮೇಲೆ ದಾಳಿ ಮಾಡಿದನು. ಆದರೆ ತೈಲಪ ದೇವನ ಅದ್ಭುತ ಸಾಮರ್ಥ್ಯಕ್ಕೆ ಅವನು ಈಡಾಗಲಿಲ್ಲ. ಅವನು ಬಂದದಾರಿಗೆ ಸುಂಕವಿಲ್ಲವೆಂಬಂತೆ ಧಾರಾನಗರಿಗೆ ಹೋಗಬೇಕಾಯಿತು. ಮುಂದೆ ಎಷ್ಟೋ ವರ್ಷಗಳ ವರೆಗೆ ಚಾಲುಕ್ಯ ಮಾಳವೀಯರಲ್ಲಿ ಯುದ್ಧಗಳು ನಡದೇ ಇದ್ದವು. ಮುಂಜರಾಜನಂತಹ ಶೂರರೂ ಸಾಹಸಿಗಳೂ ಆದ ಜನರು ಮಾಳವೀಯರ ಓಲಗ ದಲ್ಲಿ ಒಬ್ಬರೂ ಇಲ್ಲದ್ದರಿಂದ ಅವರ ಸೇಡುತೀರಿಸಿಕೊಳ್ಳುವ ಹವಣಿಕೆಯು ಈಡೇರ ಲಿಲ್ಲ.

ತೈಲಪದೇವನು ಸತ್ವಶಾಲಿಯಾಗಿದ್ದನು. ಅವನು ತನ್ನ ಬಾಹುಬಲದಿಂದ ದಕ್ಷಿಣಹಿಂದುಸ್ಥಾನದಲ್ಲಿ ತನ್ನ ವರ್ಚಸ್ಸವನ್ನು ಪ್ರಸ್ಥಾಪಿಸಿದನು. ತೈಲಪದೇವನು ಕರಹಾಟ, ಕೊಂಕಣ, ಗುರ್ಜರ, ಮಾಳವ, ತ್ರಿಪುರ, ಉತ್ಕಲ, ಆಸಾಮು ಮೊದಲಾದ ದೇಶಗಳ ಮೇಲೆ ತನ್ನ ವರ್ಚಸ್ಸವನ್ನು ನೆಲೆಗೊಳಿಸಿದನು. ಇವನು ನರ್ಮದಾ ನದಿಯವರೆಗೆ ಚಾಲುಕ್ಯರ ಅಧಿಕಾರವನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಜಾಲನಾ ಆಕೋಲಾ, ವರ್ಹಾಡ, ನಾಗಪೂರ ಮೊದಲಾದ ಪ್ರಾಂತಗಳನ್ನು ಹಿಡಿದುಕೊಂಡನು. ಎರಡನೆಯ ಪುಲಿಕೇಸಿಯ ತರುವಾಯ ಚಾಲುಕ್ಯ ವಂಶದಲ್ಲಿ ಇಂತಹ ಅದೃಷ್ಟವಂತ ರಾದ ಅರಸರು ಇಲ್ಲಿಯ ವರೆಗೆ ಯಾರೂ ಆಗಿದ್ದಿಲ್ಲ. ಇವನು ಅಜ್ಞಾತವಾಸವನ್ನ ನುಭವಿಸುತ್ತಿದ್ದ ಚಾಲುಕ್ಯ ರಾಜವಂಶದ ಅಭ್ಯುದಯಗೊಳಿಸಿ ಕರ್ನಾಟಕ ಸಾಮ್ರಾ ಜ್ಯಕ್ಕೆ ಸುಖ-ಶಾಂತತೆಗಳನ್ನೊದಗಿಸಿಕೊಟ್ಟನು. ಚಾಲುಕ್ಯರ ಅಭ್ಯುದಯವಾಗುತ್ತ ಹೋದಂತೆ ಕನ್ನಡಿಗರ ಕೀರ್ತಿವೈಭವಗಳು ಬೆಳೆಯತೊಡಗಿದವು.

ಉತ್ತರಾಪಥದಲ್ಲ ಕನ್ನಡಿಗರ ಧ್ವಜಪತಾಕೆಗಳನ್ನು ಮೆರೆಯಿಸಿದ ಚಾಲುಕ್ಯರ ಇತಿಹಾಸವು ಪಠನೀಯವಲ್ಲವೆ?

